











## ಓದಿ; ಚಂದಾದಾರರಾಗಿ, ಚಂದಾ ಉಡುಗೊರೆ ನೀಡಿ

ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು
ಗಂಭೀರ ವಿಶ್ಲೇಷಣೆಗೆ ಒಳಪಡಿಸುವ



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

**ನವಕರ್ನಾಟಕ ಪ್ರಕಾಶನ**

ಗೌರವ ಸಂಪಾದಕರು : ಡಾ|| ಜಿ. ರಾಮಕೃಷ್ಣ
ಸಂಪಾದಕರು : ಡಾ|| ಸಿದ್ದನಗೌಡ ಪಾಟೀಲ

ಆಕಾರ ಡಿಮ್ಮೈ ¼ ಪುಟಗಳು 64 (ವಿಶೇಷಾಂಕ 256)
ಸಾದಾ ಪ್ರತಿ : ರೂ. 12 (ವಿಶೇಷಾಂಕ ರೂ. 35)
ವಾರ್ಷಿಕ ಚಂದಾ ರೂ. 150
ಮೂರು ವರ್ಷಕ್ಕೆ ರೂ. 350

ಈ ಪ್ರಗತಿಪರ - ವೈಚಾರಿಕ ನಿಲುವಿನ ಪತ್ರಿಕೆಯನ್ನು ನೀವು ಮೆಚ್ಚಿದ್ದೀರೆಂದಾದಲ್ಲಿ ದಯವಿಟ್ಟು ಚಂದಾದಾರರಾಗಿ. ಹಾಗೆಯೇ, ನಿಮ್ಮ ಸ್ನೇಹಿತರಿಗೂ ಈ ಪತ್ರಿಕೆಯನ್ನು ಪರಿಚಯಿಸಿ; ಅವರೂ ಓದಿ ಚಂದಾದಾರರಾದಲ್ಲಿ ಪತ್ರಿಕೆಯ ಪ್ರಸಾರ ಹೆಚ್ಚುತ್ತದೆ. ನಮ್ಮ ಶ್ರಮ ಸಾರ್ಥಕವಾಗುತ್ತದೆ.

ನೀವು ಭಾಗವಹಿಸುವ ಶುಭ ಸಮಾರಂಭಗಳಲ್ಲಿ, ಹುಟ್ಟುಹಬ್ಬಗಳಲ್ಲಿ, ಪ್ರತಿಭಾ ಪುರಸ್ಕಾರ ನೀಡುವ ಸಂದರ್ಭದಲ್ಲಿ ಉಡುಗೊರೆ ನೀಡ ಬೇಕಾದಾಗ 'ಹೊಸತು' ಪತ್ರಿಕೆಯ ಚಂದಾವನ್ನೇ ಉಡುಗೊರೆ ರೂಪದಲ್ಲಿ ನೀಡಬಹುದಲ್ಲವೆ? ಯಾರಿಗೆ ಉಡುಗೊರೆ ನೀಡಬೇಕೆಂದಿರುವಿರೋ ಅವರ ವಿಳಾಸ ಮತ್ತು ಚಂದಾ ಮೊಬಲಗನ್ನು ನಮ್ಮ ವಿಳಾಸಕ್ಕೆ ಕಳಿಸಿದರೆ ನೀವು ತಿಳಿಸಿದ ವಿಳಾಸಕ್ಕೆ ಪತ್ರಿಕೆ ಕಳಿಸುವ ಜವಾಬ್ದಾರಿ ನಮ್ಮದು.

ಚಂದಾ ನೋಂದಾವಣಿ ಚಳುವಳಿಯನ್ನು ಬೆಂಬಲಿಸಿ
ನಿಮ್ಮ ಸ್ನೇಹಿತರನ್ನೂ ಚಂದಾದಾರರನ್ನಾಗಿಸಿ
ಅವರೂ ಚಂದಾ ಉಡುಗೊರೆ ನೀಡುವಂತೆ ಪ್ರೇರೇಪಿಸಿ













'ಹೊಸತು' ತಿಂಗಳ ಪತ್ರಿಕೆ, 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




**ಚಿತ್ರಗಳು :** ಕಮಲಂ ಅರಸು, ಸಂಕೇತ್, ಶ್ರೀಹರಿ, ಸುವರ್ಣ, ಜಿ. ಎಂ. ಬೊಮ್ನಳ್ಳಿ, ಬಿ. ವಿ. ಹಿರೇಮಠ, ನಾಮದೇವ ಕಾಗದಗಾರ
**ಮುಖಚಿತ್ರ :** ನಮ್ಮ ಪಾರ್ಲಿಮೆಂಟ್
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ






ಸಾಹಿತ್ಯ ಕ್ಷೇತ್ರಕ್ಕೆ ಜಾತಿಲೇಪ ಹಚ್ಚುವುದು ಕೆಟ್ಟಚಾಳಿ. ಅಪಾಯಕಾರಿ. ಈಚೆಗೆ ಇದು ಹೆಚ್ಚಾಗುತ್ತಿರುವುದೀಗ ಆತಂಕ ಮೂಡಿಸುವಂಥದ್ದಾಗಿದೆ. ಸಾಹಿತ್ಯಕ್ಕೆ ಪ್ರಾಧಾನ್ಯವೇ ಹೊರತು ಅದನ್ನು ಸೃಷ್ಟಿಸಿದವನ ಜಾತಿ ಮುಖ್ಯವಲ್ಲ. ಇಂದಿನ ಕಲುಷಿತ ವಾತಾವರಣದಲ್ಲಿ ಬಂಡವಾಳಶಾಹಿ ರಾಜಕೀಯ ಪಕ್ಷಗಳು ನಡೆಸಿರುವ ಜಾತಿ ರಾಜಕಾರಣ ಇತರ ಕ್ಷೇತ್ರಗಳಿಗೂ ವಿಸ್ತರಿಸುತ್ತಿರುವುದೀಗ ಒಳ್ಳೆಯ ಬೆಳವಣಿಗೆಯಲ್ಲ. ಇದು ಸಾಂಸ್ಕೃತಿಕ ಕ್ಷೇತ್ರವನ್ನು ಕಟ್ಟಿದಾಗ ಮೊಳಕೆಯಲ್ಲೇ ಹೊಸಕಿ ಹಾಕುವುದು ಅತ್ಯಗತ್ಯ. ಕನ್ನಡದ ಹಾಸ್ಯಲೇಖಕ ಎಂದೇ ಖ್ಯಾತನಾಮರಾಗಿರುವ ಬಳ್ಳಾರಿ ಸಂಜಾತ 'ಬೀಚಿ' (ಭೀಮಸೇನ್ ರಾವ್) ಬದುಕಿದ್ದಿದ್ದರೆ ನೂರು ವರ್ಷ ತುಂಬುತ್ತಿತ್ತು. ಅವರು ಕಳೆದ ಶತಮಾನದ ಪ್ರಮುಖ ಕನ್ನಡ ಲೇಖಕರು. ಪೊಲೀಸು ಇಲಾಖೆಯಲ್ಲಿ ಕೆಲಸ ಮಾಡಿಕೊಂಡಿದ್ದ 'ಬೀಚಿ' ಎಂದೂ ಬ್ರಾಹ್ಮಣಿಕೆಯನ್ನು ಪ್ರದರ್ಶಿಸಿಕೊಂಡವರಲ್ಲ. ಸಂಪ್ರದಾಯಸ್ಥ ಕುಟುಂಬದಿಂದ ಬಂದವರಾಗಿದ್ದರೂ, ಪ್ರಗತಿಪರವಾಗಿದ್ದ ಅವರು ಎಂದೂ ಜಾತ್ಯತೀತರಾಗಿದ್ದರು. ಅವರು ಎಂದೂ ಬ್ರಾಹ್ಮಣ ಸಂಪ್ರದಾಯ ಆಚರಿಸಿದವರಲ್ಲ, ಎತ್ತಿಹಿಡಿದವರಲ್ಲ ಎಂಬುದು ಅವರನ್ನು ಬಲ್ಲವರೆಲ್ಲರಿಗೂ ಗೊತ್ತು. 'ಬೀಚಿ'ಯವರ ಶತಮಾನೋತ್ಸವ ಸಂದರ್ಭದಲ್ಲಿ ಕಲಾವಿದ ಮಾಸ್ಟರ್ ಹಿರಣ್ಣಯ್ಯ (ನರಸಿಂಹಮೂರ್ತಿ) ಅವರು ಮಾತನಾಡುತ್ತ ಅವರಿಗೆ ಬ್ರಾಹ್ಮಣಿಕೆ ಆರೋಪಿಸಿ ಅವರನ್ನು ಸರಕಾರ ಕಡೆಗಣಿಸಿದೆ ಎಂದು ಹೇಳಿರುವುದು ಆಶ್ಚರ್ಯಕರ. ಅವರ ಅಭಿಪ್ರಾಯದಲ್ಲಿ ಸರಕಾರ ಬ್ರಾಹ್ಮಣ ಸಾಹಿತಿಗಳನ್ನು ಕಡೆಗಣಿಸಿದೆ. ಅವರು ಹೆಸರಿಸಿದ ಇತರ ಸಾಹಿತಿಗಳು ಅನಕೃ, ಡಿವಿಜಿ ಮೊದಲಾದವರು. ಈ ರೀತಿ ಜಾತಿಲೇಪ ಹಚ್ಚುವುದು ಖಂಡನೀಯ. ಬೀಚಿ ಯಾವಾಗ ಬ್ರಾಹ್ಮಣರಾದರೋ ಗೊತ್ತಿಲ್ಲ.

✳ ✳ ✳

ರಾಜಕಾರಣಿಗಳಿಗೆ ಸರಕಾರದ ಹಣ ಪೋಲು ಮಾಡುವುದೆಂದರೆ ಖುಷಿ. ತಮ್ಮ ಪ್ರಚಾರಕ್ಕಾಗಿ ಜಾಹೀರಾತುಗಳಿಗೆ, ಕಟೌಟ್‌ಗಳಿಗೆ, ಪೋಸ್ಟರುಗಳಿಗೆ ಹಣ ಸುರಿಯುವುದು ಅವರಿಗೆ ಅಂಟುಜಾಡ್ಯವಾಗಿದೆ. ಆ ಹಣವನ್ನು ಅವರು ತಮ್ಮ ಸ್ವಂತ ಹಣದಿಂದ ಖರ್ಚು ಮಾಡಿದರೆ, ಅವರ ಪಕ್ಷದವರು ಖರ್ಚು ಮಾಡಿದರೆ ಚಿಂತೆಯಿಲ್ಲ. ಆದರೆ ತೆರಿಗೆದಾರರು ನೀಡುವ ಹಣ ಸಾರ್ವಜನಿಕ ಹಿತಕ್ಕಾಗಿ ಉಪಯೋಗವಾಗಬೇಕೆ ಹೊರತು ಸ್ವಪ್ರಚಾರಕ್ಕಾಗಿ ಅಲ್ಲ. ನಮ್ಮ ದೇಶದ ಮುಖ್ಯಮಂತ್ರಿಗಳಿಗೆ ತಮ್ಮ ಸಾಧನೆಯ ಪ್ರತಾಪ ಕೊಚ್ಚಿಕೊಳ್ಳಲು ಎಲೆಕ್ಟ್ರಾನಿಕ್ ಮಾಧ್ಯಮ ಮತ್ತು ಪ್ರಿಂಟ್ ಮಾಧ್ಯಮವನ್ನು ಬಳಸಿಕೊಂಡು ನೂರಾರು ಕೋಟಿ ರೂಪಾಯಿಗಳನ್ನು ಅಪವ್ಯಯ ಮಾಡುವ ಪ್ರವೃತ್ತಿ ಇರುವುದು ಅಸಹ್ಯಕರ. ಇದು ಸಾರ್ವಜನಿಕರ ಹಣದ ಪೋಲು. ಮುಖ್ಯಮಂತ್ರಿಯಾಗಿದ್ದಾಗ ಯಡಿಯೂರಪ್ಪ ತಮ್ಮ ಪ್ರತಿಷ್ಠೆಯ ಪ್ರಚಾರಕ್ಕಾಗಿ ಸಾರ್ವಜನಿಕ ಹಣವನ್ನು ಸಾಕಷ್ಟು ಪೋಲು ಮಾಡಿದ್ದು ನಮಗೆಲ್ಲ ತಿಳಿದಿದೆ. ಪುಟಗಟ್ಟಲೆ ಸರಕಾರಿ ಜಾಹೀರಾತು ಅವರ ಪ್ರಚಾರಕ್ಕೆ ಮೀಸಲಾಯಿತು. ಮೊನ್ನೆ ತಮಿಳುನಾಡಿನ ಮುಖ್ಯಮಂತ್ರಿ 'ಪುರಚ್ಚಿ ತಲೈವಿ' (ಕ್ರಾಂತಿಯ ನಾಯಕಿ) ಜಯಲಲಿತ ಒಂದು ವರ್ಷ ಆಡಳಿತ ಮುಗಿಸಿದ ಸಂದರ್ಭ. ತಮಿಳುನಾಡಿನಲ್ಲಿ ಕಟೌಟುಗಳಿಗೆ ಎಷ್ಟು ಹಣ ಖರ್ಚು ಮಾಡಿದ್ದಾರೊ ತಿಳಿಯದು, ಆದರೆ ಎಲ್ಲ ರಾಷ್ಟ್ರೀಯ ಆಂಗ್ಲ ದಿನಪತ್ರಿಕೆಗಳಿಗೆ ನೀಡಿದ ನಾಲ್ಕು ನಾಲ್ಕು ಪುಟಗಳ ಜಾಹೀರಾತು ಕಣ್ಣು ಕೋರೈಸುವಂತಿದ್ದುವು. ಇದಕ್ಕಾಗಿ ಸರಕಾರದ ಬೊಕ್ಕಸದಿಂದ ಕೋಟಿಗಟ್ಟಲೆ ಹಣ ಹರಿದುಹೋಗಿದೆ. ಇಲೆಕ್ಟ್ರಾನಿಕ್ ಮಾಧ್ಯಮಗಳಲ್ಲಿ ಇದು ದೊಡ್ಡ ಸುದ್ದಿಯಾಯಿತು. ಸಂಸತ್ತಿನಲ್ಲೂ ಪ್ರತಿಧ್ವನಿಸಿತು. ಈ ಅಸಹ್ಯಕರ ವ್ಯಕ್ತಿ ಪ್ರತಿಷ್ಠೆ ನೋಡಿದಾಗ 'ಯಾರದೋ ದುಡ್ಡು ಎಲ್ಲಮ್ಮನ ಜಾತ್ರೆ' ಎಂಬ ನುಡಿಗಟ್ಟು ನೆನಪಾಗುತ್ತದೆ.

✳ ✳ ✳

ವರ್ಷಪೂರ್ತಿ ಕ್ರಿಕೆಟ್ ಹಾವಳಿ ನಮಗೆ ತಪ್ಪಿದ್ದಲ್ಲ. ಬ್ರಿಟಿಷರ ಪಳೆಯುಳಿಕೆಯಾಗಿರುವ ಈ ಕ್ರೀಡೆ ಸಾಂಕ್ರಾಮಿಕದಂತೆ ಹರಡಿಕೊಂಡಿದೆ. ಅದು ಇಂದು ಕ್ರೀಡೆಯಾಗಿ ಉಳಿದಿಲ್ಲ, ಒಂದು ವೃತ್ತಿಯಾಗಿ ಬೆಳೆದಿದೆ. ಮಧ್ಯಮ ವರ್ಗದವರಿಗೆ,

*(೭ನೇ ಪುಟಕ್ಕೆ)*

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

**ಸಂಪುಟ-೧೩ ಸಂಚಿಕೆ-೧೧ ಜೂನ್ ೨೦೧೨**

***ಗೌರವ ಸಂಪಾದಕ***

ಜಿ. ರಾಮಕೃಷ್ಣ

***ಸಂಪಾದಕ***

ಸಿದ್ದನಗೌಡ ಪಾಟೀಲ

***ಸಹಸಂಪಾದಕರು***

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

***ವ್ಯವಸ್ಥಾಪಕ***

ಎ. ಆರ್. ಉಡುಪ

***ಮುದ್ರಕ-ಪ್ರಕಾಶಕ***

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

***ಮುದ್ರಣ***

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

***ಹೊಸತು ಕಚೇರಿಯ ವಿಳಾಸ***

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಸತ್ತಿಗೆ ಅರವತ್ತು – ಕುಸಿಯುತ್ತಿರುವ ಮೌಲ್ಯ

**ಭಾ**ರತದ ಸಂಸತ್ತಿಗೆ ಅರವತ್ತು ತುಂಬಿತು. ಅದರ ಆಚರಣೆಯು ಕೆಲದಿನಗಳ ಹಿಂದೆ ನಡೆಯಿತು. ದಿನಪೂರ್ತಿ ಸಂಸತ್ ಭವನದಲ್ಲಿ ಉಭಯ ಸದನಗಳೂ ವಿಶೇಷ ಅಧಿವೇಶನ ನಡೆಸಿ ಅದನ್ನು ಕೊಂಡಾಡಿದುವು. ಆಡಳಿತ ಮತ್ತು ವಿರೋಧ ಪಕ್ಷದ ಸದಸ್ಯರುಗಳು ಎಂದಿನಂತೆ ಉದ್ದುದ್ದ ಭಾಷಣಗಳನ್ನು ಮಾಡಿದರು. ಈ ಸಂದರ್ಭದಲ್ಲಿ ಕೆಲವು ನೀತಿ ಸಂಹಿತೆಗಳನ್ನೂ ಅಂಗೀಕರಿಸಿದರು. ನಮ್ಮ ಸಂಸತ್ ವ್ಯವಸ್ಥೆಯ ಪರಂಪರೆಯನ್ನು, ಇಂದಿನ ಪರಿಸ್ಥಿತಿಯನ್ನು ಪ್ರಸ್ತಾಪಿಸಿದರು. ಅಲ್ಲಿಗೆ ಮುಗಿಯಿತು ಸಂಭ್ರಮ. ಈ ಆಚರಣೆಯಲ್ಲೂ ಹಲವು ಸದಸ್ಯರುಗಳು ಹಾಜರಿಲ್ಲದಿದ್ದುದು ಕಂಡುಬಂತು. ಅದೇನೇ ಇರಲಿ, ನಮ್ಮ ಪಾರ್ಲಿಮೆಂಟರಿ ವ್ಯವಸ್ಥೆ ಇಷ್ಟು ವರ್ಷ ನಡೆದು ಬಂದಿರುವುದೀಗ ಈ ಭೂಭಾಗದಲ್ಲಿ ಒಂದು ವಿಶೇಷ ಸಂಗತಿ. ನೆರೆಯ ರಾಷ್ಟ್ರಗಳಿಗೆ ಹೋಲಿಸಿದಲ್ಲಿ, ಪ್ರಪಂಚದಲ್ಲಿ ಅತಿ ಹೆಚ್ಚು ಜನಸಂಖ್ಯೆಯನ್ನು ಪ್ರತಿನಿಧಿಸುವ ಸಂಸದೀಯ ವ್ಯವಸ್ಥೆ ನಮ್ಮದು ಎನ್ನುವ ಹೆಗ್ಗಳಿಕೆ ಬಿಟ್ಟರೆ ಹೆಚ್ಚೇನೂ ಇಲ್ಲ. ಎಲ್ಲ ಬಂಡವಾಳಶಾಹಿ ಪ್ರಜಾಪ್ರಭುತ್ವ ವ್ಯವಸ್ಥೆಗಳಂತೆಯೇ ನಮ್ಮ ಸಂಸತ್ತೂ ವಿಷಯಗಳನ್ನು ಚರ್ಚಿಸಿದೆ, ಕಾಯಿದೆಗಳನ್ನು ಅನುಮೋದಿಸಿದೆ, ಪರಂಪರೆಯನ್ನು ನಿರ್ಮಿಸಿದೆ.

ಅರವತ್ತು ವರ್ಷಗಳು ರಾಷ್ಟ್ರವೊಂದರ ವ್ಯವಸ್ಥೆಯಲ್ಲಿ ಹೆಚ್ಚೇನಲ್ಲ. ಆದರೂ ಕಳೆದ ವರ್ಷಗಳನ್ನು ಅವಲೋಕಿಸಿದಾಗ ನಮ್ಮ ಸಂಸತ್ ವ್ಯವಸ್ಥೆ ಪ್ರೌಢತೆ ತಲುಪಿ ಉನ್ನತಮಟ್ಟಕ್ಕೇರಿಲ್ಲ, ಬದಲಾಗಿ ವರ್ಷಗಳು ಉರುಳಿದಂತೆ ಸಂಸತ್ತಿನ ಕಲಾಪಗಳು ಮೌಲ್ಯ ಕಳೆದುಕೊಳ್ಳುತ್ತಿರುವುದು ಎದ್ದು ಕಾಣುತ್ತದೆ. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬಹುಭಾಗ ಒಂದೇ ಪಕ್ಷದ ಆಡಳಿತೆ ಇದ್ದು, ಈಗ ಸಮ್ಮಿಶ್ರ ಸರಕಾರದ ಯುಗವನ್ನು ಕಾಣುತ್ತಿದ್ದೇವೆ. ಹಾಗೆಯೇ ಸಂಸತ್ ಸದಸ್ಯರುಗಳ ಮಿಶ್ರಣವನ್ನೂ ನೋಡುತ್ತಿದ್ದೇವೆ, ಅವರ ಗುಣಮಟ್ಟವನ್ನೂ ಅಳೆಯುತ್ತಿದ್ದೇವೆ. ಬಂಡವಾಳಶಾಹಿ ರಾಜಕಾರಣದಲ್ಲಿ ಉದ್ಯಮಿಗಳು ಮತ್ತು ಕ್ರಿಮಿನಲ್‌ಗಳ ಕೂಟದ ಪ್ರವೇಶ ಕಳವಳಕಾರಿ ಬೆಳವಣಿಗೆ. ಇಂದು ಸಂಸತ್ತಿಗೆ ಆಯ್ಕೆಯಾಗುವವರು ಬಹುಮಟ್ಟಿಗೆ ಕೋಟಿ ಕೋಟಿ ಹಣ ಖರ್ಚು ಮಾಡಲು ತಾಕತ್ತಿರುವವರೇ ಆಗಿದ್ದಾರೆ. ಭ್ರಷ್ಟಾಚಾರ ತಾಂಡವವಾಡುತ್ತಿರುವ ಈ ನಾಡಿನಲ್ಲಿ ಬಂಡವಾಳಶಾಹಿ - ಭೂಮಾಲಿಕರನ್ನು ಪ್ರತಿನಿಧಿಸುವ ರಾಜಕೀಯ ಪಕ್ಷಗಳು ಹಣಬಲ ಮತ್ತು ತೋಳ್ಬಲದ ಮೊರೆ ಹೋಗುತ್ತಿವೆ. ಸುಮಾರು ಮೂರನೇ ಒಂದು ಭಾಗದಷ್ಟು ಸಂಸತ್ ಸದಸ್ಯರ ಮೇಲೆ ಕ್ರಿಮಿನಲ್ ಮೊಕದ್ದಮೆಗಳಿವೆ ಎಂದು ಅಂದಾಜು. ಹಾಗಿರುವಾಗ ಸಂಸತ್ತಿನ ಗುಣಮಟ್ಟ ಹೇಗಿರುವುದೆನ್ನುವುದನ್ನು ಊಹಿಸಿಕೊಳ್ಳಬಹುದು.

ಸಂವಿಧಾನದ ಪ್ರಕಾರ ಚುನಾವಣೆಗಳು ಜರುಗಿ ಸಂಸತ್ತು ರಚನೆಯಾದ ಮೊದಲ ವರ್ಷಗಳಲ್ಲಿ ಕಲಾಪಗಳು ನಿಜಕ್ಕೂ ಮೆಚ್ಚುವಂಥವಾಗಿದ್ದುವು. ವಿರೋಧ ಪಕ್ಷವೆಂದು ಮಾನ್ಯತೆ ಪಡೆಯಲು ಅರ್ಹತೆ ಇಲ್ಲದಿರುವಾಗಲೂ (ಪ್ರಥಮ ಲೋಕಸಭೆಯಲ್ಲಿ ದೊಡ್ಡ ತಂಡವಾಗಿ ಆಯ್ಕೆಗೊಂಡ ಕಮ್ಯುನಿಸ್ಟ್ ಪಕ್ಷ ಪ್ರಮುಖ ವಿರೋಧ ಪಕ್ಷದ ಸ್ಥಾನದಲ್ಲಿತ್ತು) ಚರ್ಚೆಗಳು ಶ್ರೇಷ್ಠಮಟ್ಟದ್ದಾಗಿದ್ದುವು. ಪ್ರಧಾನಿ ಜವಹರಲಾಲ್ ನೆಹರೂ, ಸರ್ದಾರ್ ವಲ್ಲಭಭಾಯಿ ಪಟೇಲ್ ನೇತೃತ್ವದಲ್ಲಿ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆ ಇದ್ದ ಕಾಂಗ್ರೆಸ್ ಸದಸ್ಯರಿಗೆ ಸವಾಲಾಗಿ ಎ. ಕೆ. ಗೋಪಾಲನ್, ಪ್ರೊ|| ಹಿರೇನ್ ಮುಖರ್ಜಿ, ಡಾ|| ಅಂಬೇಡ್ಕರ್, ಮಧು ಲಿಮಯೆ, ರಾಮ ಮನೋಹರ ಲೋಹಿಯ, ಅಶೋಕ ಮೆಹತಾ, ರೇಣು ಚಕ್ರವರ್ತಿ, ಎಸ್. ಎ. ಡಾಂಗೆ, ಭೂಪೇಶ ಗುಪ್ತ, ಎಚ್. ವಿ. ಕಾಮತ್, ಎ. ಬಿ. ವಾಜಪೇಯಿ, ಎಲ್. ಕೆ. ಆದ್ವಾನಿ ಮೊದಲಾದ ಅನೇಕ ಮಂದಿ ಘಟಾನುಘಟಿಗಳು ಸಂಸತ್ತಿನಲ್ಲಿ ಚರ್ಚೆಗೆ ಕಳೆಕಟ್ಟುತ್ತಿದ್ದರು. ಲೋಕಸಭೆಯಲ್ಲಿ ಜಿ. ವಿ. ಮಾವಲಂಕರ್‌ರಿಂದ ಹಿಡಿದು ಸೋಮನಾಥ ಚಟರ್ಜಿಯವರೆಗೆ ಸಭಾಧ್ಯಕ್ಷರುಗಳೂ ಉತ್ತಮ ಪರಂಪರೆಯನ್ನು ರೂಪಿಸಿದರು. ರಾಜ್ಯಸಭೆಯಲ್ಲಿ ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರಂಥವರು ಸಭಾಧ್ಯಕ್ಷ ಸ್ಥಾನ ಅಲಂಕರಿಸಿದ್ದರು. ಬಹುಮುಖ್ಯವಾದ ಪ್ರಶ್ನೋತ್ತರ ವೇಳೆಯಲ್ಲಿ ಸರಕಾರವನ್ನು ತರಾಟೆಗೆ ತೆಗೆದುಕೊಳ್ಳಲು ಸದಸ್ಯರು ಸಿದ್ಧರಾಗಿ ಬರುತ್ತಿದ್ದರು. ಶೂನ್ಯವೇಳೆಯಲ್ಲಿ ಹಲವು ಪ್ರಶ್ನೆಗಳನ್ನು ಸದಸ್ಯರು ಎತ್ತಿದರೂ ಕಲಾಪಗಳಿಗೆ ಭಂಗ ಬರುತ್ತಿರಲಿಲ್ಲ. ಸಚಿವರುಗಳೂ ಕೂಡ ಸಭೆಯಲ್ಲಿ ಹಾಜರಿದ್ದು ಸಭಾ ಗೌರವವನ್ನು ಕಾಪಾಡುತ್ತಿದ್ದರು. ಪ್ರತಿಯೊಂದು ಅಧಿವೇಶನದಲ್ಲೂ ಒಂದೆರಡು ದಿನ ದೇಶದ ವಿದೇಶೀ ನೀತಿಯ ಬಗ್ಗೆ ಚರ್ಚೆ ಇರುತ್ತಿದ್ದುವು. ಮಂಡನೆಯಾಗುತ್ತಿದ್ದ ಮಸೂದೆಗಳ ಮೇಲೆ ಸಕಾರಾತ್ಮಕ ಚರ್ಚೆಯಾಗುತ್ತಿದ್ದುದರಿಂದ ಹಲವು ಜನಪರ, ಪ್ರಗತಿಪರ ಕಾಯಿದೆಗಳೂ ಅನುಮೋದನೆಯಾಗಿದ್ದುವು. ಕಲಾಪಗಳೂ ಸಂವಿಧಾನಬದ್ಧವಾಗಿ – ಹಣಕಾಸು, ಮಳೆಗಾಲ, ಛಳಿಗಾಲ ಅಧಿವೇಶನಗಳು – ಮೂರು ಬಾರಿ ಪೂರ್ಣ ಕಾಲ ಜರುಗುತ್ತಿದ್ದುವು. ಈಗ ಅವೆಲ್ಲ ಕಡಿಮೆಯಾಗುತ್ತಿವೆ, ಕಲಾಪ ನಡೆಯುವುದೇ ದುಸ್ತರವಾಗುತ್ತಿದೆ.

ಈಚಿನ ದಿನಗಳಲ್ಲಿ, ಅಂದರೆ ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಸಂಸತ್ತಿನ ಕಲಾಪಗಳು ಕಳೆಗುಂದಿವೆ ಎನ್ನುವುದನ್ನು ಎಲ್ಲರೂ ಒಪ್ಪುತ್ತಾರೆ. ಸಂಸತ್ತಿನ ಚರ್ಚೆಯಲ್ಲಿ ಭಾಗವಹಿಸಲು ಸಿದ್ಧರಾಗಿ ಬರುವ ಸದಸ್ಯರ ಸಂಖ್ಯೆ ವಿರಳವಾಗುತ್ತಿದೆ. ಸಭೆಗೆ ಹಾಜರಾತಿಯೂ ಅಷ್ಟೇ ಕಡಿಮೆಯಾಗುತ್ತಿದೆ. ಸಂವಿಧಾನಾತ್ಮಕವಾಗಿ ಪಾರ್ಲಿಮೆಂಟರಿ ವ್ಯವಸ್ಥೆಯಲ್ಲಿ ಸಭಾತ್ಯಾಗ ಪ್ರತಿಪಕ್ಷಗಳ ಪ್ರತಿಭಟನೆಯ ಸೂಚಕ. ಆಡಳಿತ ಪಕ್ಷದ ಉದ್ಧಟನತನವನ್ನು, ದಬಾದುಬಿಯನ್ನು ವಿರೋಧಿಸಲು ಇದ್ದ ಪರಂಪರೆ. ಆದರೆ ಈಗ ಕಲಾಪವನ್ನೇ ದಿನಗಟ್ಟಳೆ ತಡೆಗಟ್ಟುವುದು ರೂಢಿಯಾಗುತ್ತಿದೆ. ಸಂಸತ್ ಅಧಿವೇಶನದಲ್ಲಿ ಕಲಾಪಗಳು ಅಡ್ಡಿಯಿಲ್ಲದೆ ನಡೆಯುವ ದಿನಗಳೇ ಅಪರೂಪವಾಗುತ್ತಿದೆ. ಸಭಾಂಗಣದ 'ಬಾವಿ'ಗೆ ಇಳಿದು ಕೂಗಾಡುವುದೇ ಹೆಚ್ಚಾಗುತ್ತಿದೆ. ಹಾಗಾಗಿ ಯಾವುದೇ ಸಮಸ್ಯೆಗಳು ಉದ್ಭವಿಸಿದಾಗ ಅದರ ಕುರಿತು ಚರ್ಚೆಯ

ಬದಲು ಕೂಗಾಟವೇ ಅಗ್ರಸ್ಥಾನ ಪಡೆದು ಕಲಾಪಕ್ಕೆ ಅಡ್ಡಿಯಾಗುತ್ತಿದೆ. ಹಾಗಾಗಿ, ಪ್ರಮುಖ ಮಸೂದೆಗಳು, ಬಜೆಟ್ಟು ಚರ್ಚೆಯಾಗುವುದೇ ಅಪರೂಪವಾಗುತ್ತಿದೆ. ವಿದೇಶಾಂಗ ನೀತಿಯು ಚರ್ಚೆಗೆ ಬಂದು ಎರಡು ದಶಕಗಳಾದುವು? ಯಾವುದೇ ಸಣ್ಣ ಗುಂಪಿನ ಸದಸ್ಯರು ಕಲಾಪವನ್ನು ಅಡ್ಡಿಪಡಿಸುವುದು ವಾಡಿಕೆಯಾಗುತ್ತಿದೆ. ಸರಕಾರದ ಮಟ್ಟಿಗೆ ಗೊಂದಲದ ನಡುವೆಯೇ ತನಗೆ ಬೇಕಾದ ಮಸೂದೆಗಳಿಗೆ ಅಂಗೀಕಾರ ಪಡೆದುಕೊಳ್ಳುತ್ತಿದೆ. ಹೀಗೆ ಮುಂದುವರಿದರೆ ಸಂಸತ್ತಿಗೆ ಬೆಲೆ ಇಲ್ಲದಂತಾಗುತ್ತದೆ.

ಪಾರ್ಲಿಮೆಂಟ್ ಸದಸ್ಯರುಗಳು ಇಂದು ಮೊದಲಿಗಿಂತ ಹೆಚ್ಚು ಸಂಭಾವನೆ, ಭತ್ಯೆ, ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ತಮ್ಮ ಕ್ಷೇತ್ರಗಳ ಅಭಿವೃದ್ಧಿಗೆ ಖರ್ಚು ಮಾಡಲು ವಿಶೇಷವಾದ ಮೊತ್ತವನ್ನು ಪಡೆಯುತ್ತಿದ್ದಾರೆ. (ಇದರ ಪೂರ್ಣ ಪ್ರಯೋಜನವನ್ನು ಅನೇಕ ಸದಸ್ಯರು ಪಡೆದುಕೊಂಡಿಲ್ಲ.) ಇದಲ್ಲದೆ ಕಲಾಪಗಳು ನಡೆಯುತ್ತಿರುವಾಗ ವಿಶೇಷ ಭತ್ಯೆ ಪಡೆಯುತ್ತಾರೆ. ಇಷ್ಟಾದರೂ, ಅನೇಕ ಸದಸ್ಯರು ಹಾಜರಾತಿಗೆ ಸಹಿಹಾಕಿ ಕಲಾಪಗಳಲ್ಲಿ ಭಾಗವಹಿಸದೆ ಇರುತ್ತಾರೆ. ರಾಜಕೀಯ ಪಕ್ಷಗಳು ಕಡ್ಡಾಯದ ಹಾಜರಾತಿಗೆ ಆದೇಶ ನೀಡಿದಾಗ ಮಾತ್ರ ಸಭಾಂಗಣ ತುಂಬಿರುತ್ತದೆ. ಇಲ್ಲದಿದ್ದರೆ ಕುರ್ಚಿಗಳು ಖಾಲಿ. ಪ್ರಶ್ನೋತ್ತರ ವೇಳೆಯಲ್ಲಿ ಸದಸ್ಯರು ಹೆಚ್ಚು ಸಂಖ್ಯೆಯಲ್ಲಿ ಇದ್ದರೂ, ಚರ್ಚೆಗಳು ಪ್ರಾರಂಭವಾದಾಗ ಕೋರಮ್ ಕಾಪಾಡಿಕೊಳ್ಳುವುದೇ ಒಂದು ಕಸರತ್ತು. ಅಂದಹಾಗೆ ಒಂದು ದಿನ ಪಾರ್ಲಿಮೆಂಟ್ ಕಲಾಪಕ್ಕೆ ತಗಲುವ ವೆಚ್ಚ ಎಷ್ಟು ಗೊತ್ತೆ? ಎರಡು ಕೋಟಿ ರೂಪಾಯಿಗಳು. ಗಂಟೆಗೆ ೨೫ ಲಕ್ಷ ರೂಪಾಯಿಗಳು. ಸಂಸತ್ ಸದಸ್ಯರಿಗೆ ನೀಡುವ ವೇತನ, ಭತ್ಯೆ, ಇತರ ಸೌಲಭ್ಯಗಳನ್ನು ಸೇರಿಸಿದರೆ ಖರ್ಚು ದಿನವೊಂದಕ್ಕೆ ೬.೩ ಕೋಟಿ ರೂಪಾಯಿಗಳು. ಪಾರ್ಲಿಮೆಂಟ್ ಕಲಾಪಗಳನ್ನು ಅಡ್ಡಿಪಡಿಸಿದಾಗ ಪ್ರತಿ ನಿಮಿಷಕ್ಕೆ ರೂ. ೨೦,೦೦೦ನಷ್ಟ. ಈ ಎಲ್ಲ ವೆಚ್ಚವನ್ನು ಭರಿಸುವವರು ತೆರಿಗೆದಾರರು. ಸಂವಿಧಾನದ ಪ್ರಕಾರ ಪಾರ್ಲಿಮೆಂಟ್ ವರ್ಷದಲ್ಲಿ ಕನಿಷ್ಠ ೮೩ ದಿನಗಳಾದರೂ ಸಭೆ ಸೇರಬೇಕು. ಬಜೆಟ್ ಅಧಿವೇಶನ ೩೫ ದಿನ, ಮಳೆಗಾಲದ ಅಧಿವೇಶನ ೨೪ ದಿನ. ಛಳಿಗಾಲದ ಅಧಿವೇಶನ ೨೪. ಈಚಿನ ದಿನಗಳಲ್ಲಿ ಸಭೆ ನಡೆಯುವ ದಿನಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಇದರ ಮೇಲೆ ಕಲಾಪಗಳಿಗೆ ಅಡ್ಡಿಪಡಿಸುವ ಚಾಳಿ ಬೇರೆ. ಸದಸ್ಯರು ತಮ್ಮ ಪ್ರತಿಭಟನೆಯನ್ನು ಸೂಚಿಸಲು ಇದು ಒಂದು ಮಾರ್ಗ ಎನ್ನುವುದನ್ನು ಒಪ್ಪಲೇಬೇಕು. ಆದರೆ ಇದು ಮಿತಿಮೀರಿ ಹಲವು ದಿನಗಳೇ ಕಲಾಪಕ್ಕೆ ಅಡ್ಡಿಯಾದರೆ ಅದು ಸರಿಯಾಗದು. ಅಂಥ ಸಂದರ್ಭಗಳಲ್ಲಿ ಅದನ್ನು ತಡೆಯಲು ಏನಾದರೊಂದು ವ್ಯವಸ್ಥೆ ರೂಪಿಸುವುದು ಅಗತ್ಯ. ಕನಿಷ್ಠ ಎಂದರೆ ಕಲಾಪದ ದಿನದ ವೆಚ್ಚವನ್ನು ಸಂಬಂಧಪಟ್ಟ ಪಕ್ಷಗಳ ಸದಸ್ಯರು ಭರಿಸುವಂಥ ಕ್ರಮ ಏನಾದರೂ ಅಗತ್ಯ ಎನ್ನುವುದನ್ನು ಪರಿಶೀಲಿಸಬೇಕಾಗಿದೆ. ಒಟ್ಟಿನಲ್ಲಿ ಇಂದು ಅರವತ್ತನೇ ವರ್ಷದಲ್ಲಿ ಸಂಸತ್ ಅಧಿವೇಶನಗಳು ಸುಸೂತ್ರವಾಗಿ ನಡೆಯುವಂತೆ ಮಾಡಲು ರಾಜಕೀಯ ಪಕ್ಷಗಳು ಗಂಭೀರವಾಗಿ ಚಿಂತಿಸಬೇಕಾದ ಅಗತ್ಯವಿದೆ.

## ಸಾಹಿತ್ಯ ಮತ್ತು ಚುನಾವಣಾ ರಾಜಕಾರಣ

ಇಂದು ಕರ್ನಾಟಕವು ಹೊಲಸು ರಾಜಕೀಯದಿಂದ ಅಯೋಮಯವಾಗಿಬಿಟ್ಟಿದೆ. ಜಾತಿ ಆಧಾರಿತ ರಾಜಕೀಯ ರಾಡಿಯಿಂದ ರಾಜ್ಯದ ಜನ ಜೀವನ ನಾರುತ್ತಿದೆ. 'ಸಾಹಿತ್ಯವು ಸಮಾಜದ ಪ್ರತಿಬಿಂಬ' ಎನ್ನಲಾಗುತ್ತದೆ. ಇಂದಿನ ಸಮಾಜದ ಪ್ರತಿಬಿಂಬದ ಸತ್ಯ ದರ್ಶನವನ್ನು ಇತ್ತೀಚೆಗೆ ನಡೆದ ಪರಿಷತ್ತಿನ ರಾಜಕಾರಣ ಪ್ರತಿಫಲಿಸಿತು. ಕನ್ನಡಿಗರ ಏಕೈಕ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ರಾಜ್ಯ ಮತ್ತು ಜಿಲ್ಲಾ ಅಧ್ಯಕ್ಷತೆಗಾಗಿ ಇತ್ತೀಚೆಗೆ ನಡೆದ ಚುನಾವಣೆಗಳು ಕನ್ನಡಿಗರ ಭವಿಷ್ಯವು ಎಂತಹ ಗಂಡಾಂತರದಲ್ಲಿದೆಯೆನ್ನುವುದಕ್ಕೆ ಸಾಕ್ಷಿಯಾಗಿವೆ. ಕರಪತ್ರಗಳು, ಪತ್ರಗಳು ಹೋಗಲಿ, ದೊಡ್ಡ ದೊಡ್ಡ ಪೋಸ್ಟರ್‌ಗಳು, ಕಟ್‌ಔಟ್‌ಗಳು, ಪಾರ್ಟಿ, ಮೋಜುಗಳು, ಒಟ್ಟಾರೆಯಾಗಿ ಯಾವುದೇ ವಿಧಾನಸಭಾ ಚುನಾವಣೆಗೆ ಸಾಟಿಯಿಲ್ಲವೆಂಬಂತೆ ಈ ಚುನಾವಣೆಗಾಗಿ ಪ್ರಚಾರ ನಡೆದಿದೆ. ಈ ಚುನಾವಣೆಯು ನಡೆದ ವೈಖರಿ, ಚುನಾವಣೆಗೆ ಸ್ಪರ್ಧಿಸಿದ ಅಭ್ಯರ್ಥಿಗಳ ಆಶಯ ಮತ್ತು ಸಾಮರ್ಥ್ಯ ಇವು ಹಲವಾರು ಗಂಭೀರ ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತವೆ.

ಸ್ವಾತಂತ್ರ್ಯಪೂರ್ವದಲ್ಲಿ ೧೯೧೫ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಂದ ಚಾಲನೆಗೊಂಡು ಶ್ರೀ ಎಚ್. ವಿ. ನಂಜುಂಡಯ್ಯನವರ ಮೊದಲ ಅಧ್ಯಕ್ಷತೆಯಲ್ಲಿ ಆರಂಭವಾದ ಪರಿಷತ್ ಸುಮಾರು ಒಂದು ಶತಕದ ಅವಧಿಯಲ್ಲಿ ಕಂಡ ಕನಸುಗಳು , ಸಾಧನೆ - ಎಲ್ಲವನ್ನೂ ಕೊಚ್ಚಿಕೊಂಡು ಹೋಗುವಂತೆ ಇತ್ತೀಚೆಗೆ ಚುನಾವಣೆಗಳು ನಡೆಯುತ್ತಿವೆ. ರಾಜ ಕೃಪಾಪೋಷಿತವಾಗಿ ಆರಂಭವಾಗಿ ಪ್ರಜಾಪ್ರಭುತ್ವದಲ್ಲಿ ಬೆಳೆದು ನಿಂತ ಈ ಸಂಸ್ಥೆ ಇಂದಿನ ನಮ್ಮ ನಡುವಿನ ರಾಜಕೀಯದ ಹೊಲಸು ಪ್ರತಿನಿಧಿಯಾಗಿಯೇ ಉಳಿದಿರುವುದು ಕಹಿಸತ್ಯ. ಕನ್ನಡ ಸಾಹಿತ್ಯ ಪರಂಪರೆಯ ಹಲವಾರು ಸ್ಮರಣೀಯ ಸಾಹಿತಿಗಳ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಿಸಿದ ಪರಿಷತ್ ಇಂದು ತನ್ನ ಪದಾಧಿಕಾರಿಗಳಿಗಾಗಿ ನಡೆಸಿದ ಚುನಾವಣೆಯ ವೈಖರಿ ಕನ್ನಡಿಗರು ನಾಚುವಂತೆ ಮಾಡಿದೆ.

ಪರಿಷತ್ತಿನ ೧.೦೮ ಲಕ್ಷ ಮತದಾರರಲ್ಲಿ ಮತ ಯಾಚಿಸಬೇಕು ಎಂದರೆ ಅದೆಷ್ಟು ಕಷ್ಟ! ಈ ಪಟ್ಟಿಯಲ್ಲಿ ೧೦,೦೦೦ಕ್ಕೂ ಹೆಚ್ಚು ಮಂದಿ ದಿವಂಗತ ಸದಸ್ಯರೇ ಇದ್ದರೆಂದರೆ, ಚುನಾವಣೆಯಲ್ಲಿ ಆಗಿರಬಹುದಾದ ಅತಂತ್ರಗಳು ಎಷ್ಟಿರಬಹುದು ? ಲಕ್ಷಾಂತರ ರೂಪಾಯಿ ಖರ್ಚು ಮಾಡದೆ ಚುನಾವಣೆಯಲ್ಲಿ ಗೆದ್ದು ಬರಲು ಸಾಧ್ಯವಿಲ್ಲ, ಎನ್ನುವ ಪರಿಸ್ಥಿತಿ ಇರುವಾಗ, ಗೆದ್ದು ಬರುವ ಅಭ್ಯರ್ಥಿಗೆ ಕೇವಲ ಸಾಹಿತ್ಯಿಕ ಆಸಕ್ತಿ ಇದೆ, ಎಂಬ ಮಾತನ್ನು ಯಾರೂ ಒಪ್ಪಲು ಸಾಧ್ಯವಿಲ್ಲ. ಇನ್ನು ಅಭ್ಯರ್ಥಿಗಳು ಸ್ವತಃ ಸಾಹಿತಿಗಳಾಗಿರಬೇಕು ಎಂದು ನಿರೀಕ್ಷಿಸುವುದು ತಪ್ಪಾದರೂ, ಸಾಹಿತ್ಯದ

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಆಸಕ್ತಿ ಮತ್ತು ಜ್ಞಾನ ಇರಬೇಕೆಂದು ಒತ್ತಾಯಿಸುವುದು ತಪ್ಪೇನಲ್ಲ. ಸಾಹಿತ್ಯ ಮತ್ತು ಸಂಘಟನೆಗಳೆರಡೂ ಒಟ್ಟಿಗೆ ಸೇರಿದಾಗ ಮಾತ್ರ ಪರಿಷತ್ತಿಗೆ ಪ್ರಯೋಜನವಾಗುವುದು. ಆದರೆ ಇಂದು ಅಭ್ಯರ್ಥಿಗಳು ಮತ್ತು ಮತದಾರರಿಬ್ಬರಿಗೂ ಸಾಹಿತ್ಯದ ಗಂಧಗಾಳಿಯೂ ಇಲ್ಲದಂತೆ ಹಲವಾರು ಕಡೆಗಳಲ್ಲಿ ಚುನಾವಣೆಯ ನಡೆದಿರುವ ಪ್ರಸಂಗ ನಡೆದಿದೆ. ಜಾತಿ, ಹಣ, ರಾಜಕಾರಣ – ಈ ಮೂರೂ ಅಂಶಗಳು ಚುನಾವಣೆಯಲ್ಲಿ ಪ್ರಮುಖ ಪಾತ್ರ ವಹಿಸಿ ಸಂಸ್ಥೆಯ ಮೂಲ ಉದ್ದೇಶವನ್ನು ಮರೆಮಾಚಿಬಿಟ್ಟಿದೆ. ಚುನಾವಣೆ ನಡೆದ ವೈಖರಿಯೇ ಆಶ್ಚರ್ಯ ಹುಟ್ಟಿಸುತ್ತದೆ. ರಾಜಕಾರಣಿಗಳಂತೆ ಭಾಷಣಗಳು, ಭರವಸೆಗಳ ಮಹಾಪೂರ, ಹರಿದ ಹಣದ ಹೊಳೆಯು ಪರಿಷತ್ತಿನಿಂದ ಜನರಿಗೆ ಏನು ಸಿಕ್ಕುತ್ತದೆ ಎನ್ನುವುದಕ್ಕಿಂತ, ಅಲ್ಲಿ ಅಧಿಕಾರ ಹಿಡಿದವರಿಗೆ ಏನು ಕೊಡಬಲ್ಲುದು ಅನ್ನುವುದಕ್ಕೆ ಉತ್ತರವಾಗುತ್ತದೆ. ಪ್ರತಿಷ್ಠಿತ ಜಾತಿಗಳ ಹಗ್ಗ ಜಗ್ಗಾಟದಲ್ಲಿ ಚುನಾವಣೆಗೆಂದೇ ಹೆಚ್ಚಿಸಿಕೊಂಡ ಸದಸ್ಯರ ಸಂಖ್ಯೆಯಿಂದಾಗಿ ಈಗ ನಡೆದ ಪರಿಷತ್ತಿನ ಚುನಾವಣೆ ಪ್ರಜಾಪ್ರಭುತ್ವದ ಉಸಿರನ್ನು ಸಾಯಿಸಿದೆ. ಇಂತಹ ಪ್ರಕ್ರಿಯೆಯು ಕಳೆದ ಕೆಲವು ವರ್ಷಗಳ ಹಿಂದಿನಿಂದಲೇ ಆರಂಭವಾಗಿದೆ.

ಇಷ್ಟೆಲ್ಲ ಅಬ್ಬರದ ಚುನಾವಣೆಯಿಂದ ಗೆದ್ದು ಬರುವ ಪದಾಧಿಕಾರಿಗಳು ಪರಿಷತ್ತಿನ ಮೂಲಕ ಕನ್ನಡಿಗರ ಹಿತಸಾಧನೆಗೆ ಕಾರ್ಯಕ್ರಮ ಹಾಕಿಕೊಂಡಿದ್ದಾರೆಯೆ ಎಂಬ ಪ್ರಶ್ನೆ ಉತ್ತರ ಕಾಣದೆ ಹಾಗೆಯೇ ಉಳಿಯುತ್ತದೆ. ೯೭ ವರ್ಷ ವಯಸ್ಸಿನ ಪರಿಷತ್ ಈವರೆಗೆ ೭೮ ರಾಜ್ಯ ಸಮ್ಮೇಳನಗಳನ್ನು ನಡೆಸಿದೆ. ಸಮ್ಮೇಳನಕ್ಕೆ ಸರ್ಕಾರದ ಅನುದಾನ ೪ ಕೋಟಿಯಷ್ಟು ದೊರೆಯುತ್ತಿದೆ. ಅಲ್ಲದೆ, ಸರ್ಕಾರಿ ನೌಕರರ ಒಂದು ದಿನದ ಸಂಬಳವೂ ಸೇರಿದಂತೆ ಸಾವಿರಾರು ಮಂದಿಯಿಂದ ದೇಣಿಗೆ ದೊರೆಯುತ್ತದೆ. ಆದ್ದರಿಂದಲೇ ಹಿಂದೆಂದೂ ಇಲ್ಲದಷ್ಟು ಈಗ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಗೆ ವಿಶೇಷ ಪ್ರತಿಷ್ಠೆ ದೊರೆತಿದೆ. ಕೆಲವೊಮ್ಮೆ ಸಮ್ಮೇಳನಾಧ್ಯಕ್ಷರ ಆಯ್ಕೆ ವಾದಗ್ರಸ್ತ ವಿಷಯವೂ, ಮುಜುಗರದ ಸಂಗತಿಯೂ ಆಗಿ ಬಂಡಾಯವನ್ನು ಹುಟ್ಟುಹಾಕಿದೆ. ಸಮ್ಮೇಳನಾಧ್ಯಕ್ಷರ ಆಯ್ಕೆಯನ್ನು ಪ್ರತಿಭಟಿಸಿದ ಸಂದರ್ಭಗಳೂ ನಡೆದಿವೆ. ನಾಡು ನುಡಿಗೆ ಪೂರಕವಾದ ಹಲವಾರು ನಿರ್ಣಯಗಳನ್ನು ಈ ೭೮ ಸಮ್ಮೇಳನಗಳಲ್ಲಿ ಮಂಡಿಸಲಾಯಿತಾದರೂ, ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದ ಅವುಗಳು ಅನುಷ್ಠಾನಕ್ಕೆ ಬಂದಿರುವುದು ಕಡಿಮೆಯೇ. ಆರಂಭದಲ್ಲಿ ಪರಿಷತ್ ಮೌಲಿಕವಾದ ಪ್ರಕಟಣೆಗಳನ್ನು, ಶಬ್ದಕೋಶಗಳನ್ನು ತಂದಿದ್ದರೂ ಇತ್ತೀಚೆಗೆ ಅಂತಹ ಸಾಹಿತ್ಯಿಕ ಕಾರ್ಯಗಳಿಗೆ ಮಹತ್ವ ಕಡಿಮೆಯಾಗಿ ಬರೀ ವೇದಿಕೆಯ ಭಾಷಣ, ಸನ್ಮಾನ, ಉತ್ಸವಗಳಿಗೆ ಸೀಮಿತವಾಗಿದೆ. ಕನ್ನಡ ನಾಡಿನ ಹಿತಾಸಕ್ತಿಗಳಿಗೆ ಧಕ್ಕೆಯೊದಗಿದ ಸಂದರ್ಭಗಳಲ್ಲಿ ಪರಿಷತ್‌ನ ನಿಷ್ಕ್ರಿಯತೆ ಅಚ್ಚರಿ ಹುಟ್ಟಿಸುತ್ತದೆ.

ಕನ್ನಡ ಸಾಹಿತ್ಯಾಸಕ್ತರೇ ಕಟ್ಟಿ ಬೆಳೆಸಿದ ಈ ಸಂಸ್ಥೆಯಲ್ಲಿ ಇಂದು ಆಸಕ್ತಿಗಳ ಪಲ್ಲಟವಾಗಿದೆ. ಜಾಗತೀಕರಣದ ಬಿರುಗಾಳಿಯಲ್ಲಿ ಕನ್ನಡ ನಾಡು, ನುಡಿಗೆ ಬಡಿದಿರುವ ಸಿಡಿಲನ್ನು ಅರ್ಥಮಾಡಿಕೊಂಡು ಕನ್ನಡವನ್ನು ರಕ್ಷಿಸಬೇಕಾದ ಹೊಣೆಗಾರಿಕೆಯನ್ನು ಈಗ ಪರಿಷತ್ತಿನಿಂದ ನಿರೀಕ್ಷಿಸಲು ಸಾಧ್ಯವೇ? 'ಕನ್ನಡ' ಇರುವುದೇ ಬಡವರಿಗೆ, ಜನಸಾಮಾನ್ಯರಿಗೆ, ಗ್ರಾಮೀಣ ನೆಲೆಯವರಿಗೆ, ಸಮಾಜದ ಅಂಚಿನಲ್ಲಿರುವವರಿಗೆ ಎಂದು ಸಮೀಕರಣಗೊಂಡಿರುವ ಇಂದಿನ ದಿನಗಳಲ್ಲಿ ಪರಿಷತ್ ತನ್ನ ತೆಕ್ಕೆಯೊಳಗೆ ಈ ಎಲ್ಲರನ್ನು ತೆಗೆದುಕೊಳ್ಳದಿದ್ದರೆ ಪರಿಷತ್ತಿನ ಅಸ್ತಿತ್ವಕ್ಕೆ ಅರ್ಥವಿಲ್ಲ. ಇದು ಹಣದ ಪ್ರಶ್ನೆಯಲ್ಲ, ಆಯ್ಕೆಯ ಪ್ರಶ್ನೆ. ಹಣವೇ ಪ್ರಧಾನವಾಗಿರುವ ಪರಿಷತ್ ಈ ಅಂಶಗಳತ್ತಲೂ ಗಮನಹರಿಸಲೆಂದು ಆಶಿಸುತ್ತೇವೆ. ಹಿಂದೆಲ್ಲ ಪರಿಷತ್ತಿನ ಕಾರ್ಯ ವೈಖರಿಯನ್ನು ಪ್ರಶ್ನಿಸಿ, ಬಂಡೆದ್ದ ಸಾಹಿತಿಗಳು ಇಂದು ಮೌನರಾಗಿದ್ದಾರೆ, ಇಲ್ಲವೆ ಅದರ ವ್ಯವಸ್ಥೆಯೊಳಗೆ ಸೇರಿಕೊಂಡು ಬಿಟ್ಟಿದ್ದಾರೆ. ಹಾಗಾದಾಗಲೂ ಪರಿಷತ್ತನ್ನು ಪ್ರಶ್ನಿಸುವಂತಹವರೇ ಇಲ್ಲದಾಗುವ ಪರಿಸ್ಥಿತಿ, ಅರಾಜಕತೆಗೆ ದಾರಿಮಾಡಿಕೊಟ್ಟಂತೆ ಆಗುತ್ತದೆ ಮತ್ತು ಪ್ರತಿಷ್ಠಿತ ಹಿತಾಸಕ್ತಿಗಳ ಮೆರೆದಾಟಕ್ಕೆ ದಾರಿಮಾಡಿಕೊಟ್ಟಂತಾಗುತ್ತದೆ. ಪ್ರಸಕ್ತ ಚುನಾವಣೆಯ ಫಲಶ್ರುತಿಯು ಎಲ್ಲ ಕನ್ನಡ ಸಾಹಿತ್ಯಾಸಕ್ತರಿಗೂ, ನಾಡು ನುಡಿಯ ಹಿತೈಷಿಗಳಿಗೂ ಎಚ್ಚರದ ಗಂಟೆಯಾಗಬೇಕಿದೆ. 'ಸಾಹಿತ್ಯ' ಬಂಡವಾಳ ಮಾಡಿಕೊಂಡಿರುವ ಬಹುಪಾಲು ಪರಿಷತ್ತಿನ ಪದಾಧಿಕಾರಿಗಳಿಗೆ ಈ ಹಣದ ವಿತರಣೆಯ ಔಚಿತ್ಯವನ್ನು, ಉದ್ದೇಶವನ್ನು ತಿಳಿಸಿಹೇಳಬೇಕಾದ ಜವಾಬ್ದಾರಿಯೂ ಅವರ ಮೇಲೆಯೇ ಇದೆ.

ಗಾಯತ್ರಿ. ಎನ್.

## ಭಾಜಪ ಆಡಳಿತದಲ್ಲಿ ಜಂಗಲ್ ರಾಜ್ಯ

ಕರ್ನಾಟಕ ಜಂಗಲ್ ರಾಜ್ಯವಾಗಿ ಪರಿವರ್ತನೆ ಹೊಂದುತ್ತಿರುವ ವೇಗವನ್ನು ನೋಡಿದರೆ ಆತಂಕವಾಗುತ್ತದೆ. ಮಾಜಿ ಲೋಕಾಯುಕ್ತ ಸಂತೋಷ ಹೆಗಡೆಯವರು ತಮ್ಮ ವರದಿಯಲ್ಲಿ ಕರ್ನಾಟಕದ ಗಣಿ ಸಂಪತ್ತಿನ ಲೂಟಿಗೆ ಸಹಕರಿಸಿದ ಅಸಂಖ್ಯ ಅಧಿಕಾರಿಗಳ ಪಟ್ಟಿಯನ್ನೇ ಬಿಡುಗಡೆ ಮಾಡಿದರು. ಮಾಫಿಯಾಗಳಿಗೆ ಪೂರಕವಾಗಿ ಕೆಲಸ ಮಾಡುವ ಹಲವಾರು ಅಧಿಕಾರಿಗಳನ್ನು ದಿನನಿತ್ಯ ಕಾಣುತ್ತೇವೆ. ಭ್ರಷ್ಟರಲ್ಲದ ಅಧಿಕಾರಿಗಳನ್ನು ಹುಡುಕಬೇಕಾದ ಸ್ಥಿತಿ ನಿರ್ಮಾಣವಾಗಿದೆ. ಇದೇ ಸಂದರ್ಭದಲ್ಲಿ ಅಲ್ಲಲ್ಲಿ ಕೆಲವರಾದರೂ ಪ್ರಾಮಾಣಿಕ ಅಧಿಕಾರಿಗಳಿದ್ದಾರೆ ಎಂಬ ಸಮಾಧಾನವಿತ್ತು. ಆದರೆ ಇತ್ತೀಚೆಗೆ ಪ್ರಾಮಾಣಿಕ ಅಧಿಕಾರಿಗಳ ಮೇಲಿನ ಹಲ್ಲೆಗಳು ಹೆಚ್ಚುತ್ತಿರುವುದನ್ನು ಗಮನಿಸಿದರೆ ಇರುವ ಕೆಲವೇ ಕೆಲವು ಪ್ರಾಮಾಣಿಕ ಅಧಿಕಾರಿಗಳು ಜೀವಭಯದಲ್ಲಿ ಬದುಕುವ ವಾತಾವರಣ ಸೃಷ್ಟಿಯಾಗುತ್ತಿದೆ. ಇತ್ತೀಚೆಗೆ ಅಪರಿಚಿತ ದುಷ್ಕರ್ಮಿಗಳಿಂದ ಹಲ್ಲೆಗೊಳಗಾಗಿ ದಿನಾಂಕ ೨೦ರಂದು ಸಾವನ್ನಪ್ಪಿದ ಕೆ.ಎ.ಎಸ್. ಶ್ರೇಣಿಯ ಅಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿರ್ದೇಶಕ ಮಹಾಂತೇಶ ಅವರ ಘಟನೆ ಮಾಫಿಯಾ ಹಿಡಿತಕ್ಕೆ ಸಾಕ್ಷಿಯಾಗಿದೆ. ತೈಲ ಮಾಫಿಯಾ, ಗಣಿ ಮಾಫಿಯಾ, ಭೂ ಮಾಫಿಯಾಗಳು ರಾಜಕಾರಣಿಗಳನ್ನು, ಸರಕಾರಿ ಅಧಿಕಾರಿಗಳನ್ನು ತಮ್ಮ ಹಿಡಿತದಲ್ಲಿರಿಸಿಕೊಂಡು ಪರ್ಯಾಯ ಸರ್ಕಾರಗಳನ್ನೇ ನಡೆಸುತ್ತಾರೆ. ಸಾರ್ವಜನಿಕ ಸಂಪತ್ತಿನ ಲೂಟಿ ಮಾಡುತ್ತಾರೆ. ತಮ್ಮ ಲೂಟಿಗೆ ಅಡ್ಡಗಾಲಾದ ಪ್ರಾಮಾಣಿಕ ಅಧಿಕಾರಿಗಳನ್ನು ನಿರುಪಯುಕ್ತ ಸ್ಥಾನಗಳಿಗೆ ವರ್ಗಾಯಿಸುತ್ತಾರೆ. ಅಂತಿಮವಾಗಿ ದೈಹಿಕವಾಗಿ ದಾಳಿ ನಡೆಸಿ, ಕೊಲೆಗೈದು ತಮಗಿದ್ದ ಅಡೆತಡೆಗಳನ್ನು ನಿವಾರಿಸಿಕೊಳ್ಳುತ್ತಾರೆ.

ಸರಕಾರ ಇಂಥ ಹಲ್ಲೆ, ಕೊಲೆಗಳನ್ನು ಗಂಭೀರವಾಗಿ ಪರಿಗಣಿಸದಿದ್ದರೆ ರಾಜ್ಯದಲ್ಲಿ ಕಾನೂನು, ಸುವ್ಯವಸ್ಥೆ ಕುಸಿದುಬೀಳುತ್ತದೆ. ಸಮಾಜಕಂಟಕರಾಗಿರುವ ಮಾಫಿಯಾ ಗುಂಪುಗಳ ಸದಸ್ಯರೇ ಇಂದು ಶಾಸಕ, ಸಚಿವರಾಗಿರುವಾಗ ಅಂಥವರಿಂದ ಕಾನೂನು, ಸುವ್ಯವಸ್ಥೆ ನಿರೀಕ್ಷಿಸುವದು ಕಷ್ಟ. ಜನ ಜಾಗೃತರಾಗಬೇಕು. ಇರುವ ಕೆಲವೇ ಜನ ಪ್ರಾಮಾಣಿಕ ಅಧಿಕಾರಿಗಳಿಗೆ ಸುತ್ತಲಿನ ವಾತಾವರಣ ತಮ್ಮ ಕರ್ತವ್ಯ ನಿರ್ವಹಣೆಗೆ ಪ್ರತಿಕೂಲವಾಗಿದೆ ಎಂಬ ಭಾವನೆ ಬಂದರೆ ಅವರೂ ಮೌನವಾಗುತ್ತಾರೆ. ಪ್ರಾಮಾಣಿಕತೆಗೆ ಬೆಲೆಯೇ ಇಲ್ಲದ ಮೇಲೆ ಅವರು ಅಸಹಾಯಕರಾಗುತ್ತಾರೆ. ಇಂದಿನ ರಾಜಕೀಯ ವಾತಾವರಣದಲ್ಲಿ ರಾಜಕಾರಣಿಗಳು ಪ್ರಾಮಾಣಿಕ ಅಧಿಕಾರಿಗಳನ್ನು ಸಹಿಸುವುದಿಲ್ಲ. ಇಂಥ ಸಂದರ್ಭದಲ್ಲಿ ಜನತೆ ಪ್ರಾಮಾಣಿಕ ಅಧಿಕಾರಿಗಳ ಪರ ನಿಲ್ಲಬೇಕಾಗಿದೆ. ಜನಪರವಾದ, ಕರ್ತವ್ಯಪ್ರಜ್ಞೆಯ ಅಧಿಕಾರಿಗಳಿಗೆ ತಮ್ಮ ಸುತ್ತಣ ಉಸಿರುಗಟ್ಟಿಸುವ ವಾತಾವರಣವನ್ನು ಎದುರಿಸಿ ನಿಲ್ಲಬೇಕಾದರೆ ಜನತೆ ನಮ್ಮ ಪರವಾಗಿರುತ್ತಾರೆ ಎಂಬ ಸಣ್ಣ ಆತ್ಮವಿಶ್ವಾಸವಾದರೂ ಬೇಕು. ಕರ್ನಾಟಕ ಜಂಗಲ್ ರಾಜ್ಯವಾಗುವ ಮೊದಲು ಪ್ರಜ್ಞಾವಂತರು ಬೀದಿಗೆ ಇಳಿಯಬೇಕು. ಪ್ರಾಮಾಣಿಕರ ಮೇಲಿನ ಹಲ್ಲೆ, ಅವರ ಹತ್ಯೆಯ ವಿರುದ್ಧ ಪ್ರತಿಭಟಿಸಬೇಕು. ಅಪರಾಧಿಗಳಿಗೆ ಶಿಕ್ಷೆಯಾಗುವವರೆಗೆ ಹೋರಾಟ ನಡೆಸಬೇಕು. ಇದು ಪ್ರಜ್ಞಾವಂತ ಪ್ರಜೆಗಳ ಕರ್ತವ್ಯ.

ರಾಜ್ಯದ ಮಾಫಿಯಾ ಗುಂಪುಗಳ ಪ್ರತಿನಿಧಿಯಂತಿರುವ ಭಾಜಪದ ಆಡಳಿತದಲ್ಲಿ ಕೆ.ಎ.ಎಸ್. ಅಧಿಕಾರಿ ಮಹಾಂತೇಶ ಅವರ ಹತ್ಯೆಯ ಹಿಂದಿನ ಶಕ್ತಿಗಳಿಗೆ ಶಿಕ್ಷೆಯಾಗುತ್ತದೆಂಬ ನಂಬಿಕೆ ಇಲ್ಲ. ಆದರೆ ಮುಂದಾದರೂ ಇಂಥ ಘಟನೆಗಳು ಮರುಕಳಿಸದಂತೆ ಒಂದು ವಾತಾವರಣ ನಿರ್ಮಾಣ ಮಾಡುವುದು ಸಾರ್ವಜನಿಕರ ಜವಾಬ್ದಾರಿ. ಅದು ಇನ್ನುಳಿದ ಪ್ರಾಮಾಣಿಕ ಅಧಿಕಾರಿಗಳಿಗೆ ಮುಕ್ತವಾಗಿ ಕೆಲಸ ಮಾಡಲು ದಾರಿಯಾಗುತ್ತದೆ. ಮಹಾಂತೇಶ ಒಬ್ಬ ಪ್ರಾಮಾಣಿಕ ಅಧಿಕಾರಿಯಾಗಿದ್ದರೆಂಬ ವರದಿಗಳಿವೆ. 'ಹೊಸತು' ಬಳಗ ಅವರ ನಿಧನಕ್ಕೆ ಸಂತಾಪ ಸೂಚಿಸುತ್ತದೆ ಹಾಗೂ ರಾಜ್ಯದ ಪ್ರಾಮಾಣಿಕ ಅಧಿಕಾರಿಗಳ ಪರವಾದ ದನಿಯಾಗಲು ಸದಾಸಿದ್ಧವಿದೆ.

ಸಿದ್ದನಗೌಡ ಪಾಟೀಲ

**ಈ ತಿಂಗಳು (೩ನೇ ಪುಟದಿಂದ)**

ಶ್ರೀಮಂತರಿಗೆ ತಮ್ಮ ಮಕ್ಕಳನ್ನು ಕ್ರಿಕೆಟ್ ತರಬೇತಿಗೆ ಕಳಿಸುವುದು ಒಂದು ಶೋಕಿಯಾಗಿಬಿಟ್ಟಿದೆ. ಕ್ರಿಕೆಟ್ ಸಂಸ್ಥೆಗಳು ಕೋಟಿ ಕೋಟಿ ಸಂಪಾದಿಸುತ್ತಿವೆ, ಸರಿಯಾಗಿ ತೆರಿಗೆಯನ್ನೂ ನೀಡದೆ. ಟೆಸ್ಟ್ ಕ್ರಿಕೆಟ್, ಏಕದಿನ ಪಂದ್ಯಗಳಿಂದ ಆಟಗಾರರು ಭಾರಿ ಶ್ರೀಮಂತರಾಗಿ ಬೇರೆಯೇ ವರ್ಗಕ್ಕೆ ಸೇರಿದವರಾಗುತ್ತಿದ್ದಾರೆ. ಮೋಸದಾಟ ಬೇರೆ ಆಗಾಗ ಕೇಳಿಬರುತ್ತದೆ. ಈಗ ಪ್ರಮುಖ ಕ್ರಿಕೆಟ್ ಧಾಂಡಿಗ ಸಚಿನ್ ತೆಂಡೂಲ್ಕರನಿಗೆ ರಾಜ್ಯಸಭಾ ಸದಸ್ಯ ಪಟ್ಟ ದೊರೆತಿದೆ. ಭಾರತರತ್ನ ಪ್ರಶಸ್ತಿಗೆ ಲಾಬಿ ನಡೆಯುತ್ತಿದೆ. ಇದೆಲ್ಲ ಒಂದು ಕಡೆಯಾದರೆ ಇಂಡಿಯನ್ ಪ್ರೀಮಿಯರ್ ಲೀಗ್ (ಐಪಿಎಲ್) ಎಂಬ ೨೦ - ೨೦ ಆಟ ಈಗ ಕೆಲ ವರ್ಷಗಳಿಂದ ಅಬ್ಬರ ನಡೆಸುತ್ತಿದೆ. ಇದೊಂದು ಕೆಲ ಶ್ರೀಮಂತರು - ನಟ ಶಾರುಖ್ ಖಾನ್, ವಿಜಯ ಮಲ್ಯ, ಲಲಿತ್ ಮೋದಿ ಮುಂತಾದವರು – ಪ್ರಾರಂಭಿಸಿದ ಜೂಜು. ಈ ಶ್ರೀಮಂತರು ಹರಾಜಿಗೆ ಬಂದಿರುವ ಕ್ರಿಕೆಟಿಗರನ್ನು ಕೊಳ್ಳುತ್ತಾರೆ. ಹಾಗೆ ಕೊಂಡ ಆಟಗಾರರ ತಂಡ ಒಂದೊಂದು ಟೀಮು ಆಗುತ್ತದೆ. ಕೋಟಿ ಕೋಟಿ ರೂಪಾಯಿಗಳ ಈ ದಂಧೆಯಲ್ಲಿ ಆಟಗಾರರೆಲ್ಲ ಗುಲಾಮರೆ. ಇವರಿಗೆ ಉತ್ತೇಜನ ನೀಡಲು ವಿದೇಶೀ ಲಲನೆಯರು ಬೇರೆ ತುಂಡು ಲಂಗಧರಿಸಿ ಸಿದ್ಧ. ಇದನ್ನು ಪ್ರಾರಂಭಿಸಿದ ಲಲಿತ್ ಮೋದಿ ಅವ್ಯವಹಾರಗಳ ಆಪಾದನೆಗೆ ಗುರಿಯಾಗಿ ಹೊರಹಾಕಲ್ಪಟ್ಟ. ಸರಕಾರ ಆಗಲೇ ತನಿಖೆ ಆದೇಶಿಸಿ ಈ ಅವ್ಯವಹಾರದ ಜೂಜು ಕಟ್ಟೆಯನ್ನು ನಿಷೇಧಿಸಬೇಕಿತ್ತು. ಆದರೆ ಭಾರಿ ಹಣವಂತರು ಹಣ ಹೂಡಿರುವುದರಿಂದ ಸರಕಾರ ಹಿಂಜರಿದಿದೆ. ವರ್ಷದಲ್ಲಿ ಸುಮಾರು ಎರಡು ತಿಂಗಳು ನಡೆಯುವ ಈ ಪಂದ್ಯಾವಳಿಗಳೆಂಬ ಜೂಜಿನಲ್ಲಿ ಹಣ ಹೂಡಿರುವವರಿಗೆ ನೂರಾರು ಕೋಟಿ ರೂ. ವರಮಾನ. ಎಷ್ಟು ತೆರಿಗೆ ಮೋಸವಾಗುತ್ತಿದೆ ಎಂಬ ಅಂದಾಜಿಲ್ಲ. ಕೆಲ ದಿನಗಳ ಹಿಂದೆ ಮೋಸದಾಟದ ಪ್ರಕರಣ ಬಯಲಾಯಿತು. ಇದು ಲೋಕಸಭೆಯಲ್ಲೂ ಪ್ರತಿಧ್ವನಿಸಿತು. ಇದರಲ್ಲಿ ನಿಜವಾದ ಅಪರಾಧಿಗಳನ್ನು ಮುಚ್ಚಿಟ್ಟು ಕೆಲ ಆಟಗಾರರ ಮೇಲೆ ಗೂಬೆ ಕೂರಿಸಲಾಗಿದೆ. ಇನ್ನೊಂದು ಘಟನೆಯಲ್ಲಿ ಒಂದು ತಂಡದ ಮಾಲಿಕನಾಗಿರುವ ನಟ ಶಾರುಖ್ ಖಾನ್ ಮುಂಬಯಿಯ ವಾಂಖೇಡೆ ಮೈದಾನದಲ್ಲಿ ಕುಡಿದು ಗಲಾಟೆ ಮಾಡಿ ಈಗ ಆರೋಪಿಯಾಗಿದ್ದಾನೆ. ಐದು ವರ್ಷ ಈತ ಮೈದಾನದಲ್ಲಿ ಕಾಲಿರಿಸದಂತೆ ಕ್ರಿಕೆಟ್ ಮಂಡಲಿ ಆತನ ಮೇಲೆ ನಿಷೇಧ ಹೇರಿದೆ. ಇವನ್ನೆಲ್ಲ ನೋಡಿಕೊಂಡು ಸರಕಾರ ಕಣ್ಮುಚ್ಚಿ ಕುಳಿತಿದೆ. ಇದೀಗ ಪಂದ್ಯ ಮುಗಿದ ಮೇಲೆ ನಡೆಯುವ ರಂಪಾಟದ ವರದಿಗಳು ಬೆಳಕಿಗೆ ಬರುತ್ತಿವೆ. ಮುಂಬೈನಲ್ಲಿ ನಡೆದ ಅಂಥ ರೇವ್ ಪಾರ್ಟಿಯಲ್ಲಿ ಪಾನಮತ್ತರಾಗಿದ್ದ ನೂರು ಮಂದಿಯನ್ನು ಬಂಧಿಸಿದ್ದಾರೆ ಪೊಲೀಸರು. ಸರ್ಕಾರ ಇನ್ನಾದರೂ ಎಚ್ಚೆತ್ತು ಈ ಐಪಿಎಲ್ ಪಂದ್ಯಗಳನ್ನು ನಿಷೇಧಿಸುವುದು ಒಳಿತು.

*　　*　　*

ರಾಜ್ಯದಲ್ಲಿ ಬರ ಪರಿಸ್ಥಿತಿ. ಕೇಳುವವರಿಲ್ಲ. ಭಾಜಪ ಸರಕಾರ ಒಳಜಗಳಗಳಿಂದ ಸ್ಥಗಿತಗೊಂಡಿದೆ. ವಿಧಾನಸೌಧದಲ್ಲಿ ಮಂತ್ರಿಗಳ ಸುಳಿವೇ ಇಲ್ಲ. ಅವರ ಕಛೇರಿಗಳೆಲ್ಲ ಭದ್ರವಾಗಿ ಮುಚ್ಚಿವೆ. ಕೇಂದ್ರದಿಂದ ಬರಪೀಡಿತ ಪ್ರದೇಶಗಳ ಸಮೀಕ್ಷೆಗೆ ಬಂದಿದ್ದ ತಂಡವನ್ನು ಕೇಳುವವರೇ ಇರಲಿಲ್ಲ. ಅವರನ್ನು ಯಾವ ಸಚಿವರೂ, ಮುಖ್ಯ ಅಧಿಕಾರಿಗಳೂ ಭೆಟ್ಟಿಯಾಗಲಿಲ್ಲ. ಗಂಟೆಗಟ್ಟಲೆ ಕಾದು-ಅವರು ತಾವು ಬಂದ ಕಾರ್ಯ ಮುಗಿಸಲು ಹೋದರು. ಯೆಡಿಯೂರಪ್ಪ ಜೈಲಿನಿಂದ ಹೊರಗೆ ಬಂದಾಗಿನಿಂದ ಸದಾನಂದ ಗೌಡರನ್ನು ಅಧಿಕಾರದಿಂದ ಇಳಿಸಲು ಸತತ ಪ್ರಯತ್ನ ನಡೆಸಿದ್ದಾರೆ. ಒಂದು ರೀತಿಯ ಹಾವು ಮುಂಗುಸಿ ಆಟ ಇವರಿಬ್ಬರ ನಡುವೆ ನಡೆಯುತ್ತಿದೆ. ಯೆಡಿಯೂರಪ್ಪ ಬೆಂಬಲಿಗರು ಸಚಿವ ಸ್ಥಾನದಲ್ಲಿದ್ದುಕೊಂಡು ಸಾಕಷ್ಟು ಕಿರುಕುಳ ನೀಡುತ್ತಿದ್ದಾರೆ ಮುಖ್ಯಮಂತ್ರಿ ಸದಾನಂದ ಗೌಡರಿಗೆ. ರಾಜ್ಯ ಭಾಜಪದಲ್ಲಿ ನಡೆಯುತ್ತಿರುವ ಈ ಹಾವು ಏಣಿ ಆಟವನ್ನು ಭಾಜಪ ಹೈಕಮಾಂಡ್ ನೋಡುತ್ತ ಸುಮ್ಮನೆ ಕುಳಿತಿದೆ. ಅದರಲ್ಲೇ ಭಿನ್ನಾಭಿಪ್ರಾಯ ಇರುವಾಗ, ಫಲಾನುಭವಿಗಳಾಗಿರುವಾಗ ಮತ್ತೇನು ಮಾಡಿಯಾರು? ಯೆಡಿಯೂರಪ್ಪನವರ ಅದ್ಭುತ ಸಾಧನೆ ಈ ವ್ಯವಹಾರದಲ್ಲಿ ಜಾತಿ ರಾಜಕಾರಣಕ್ಕೆ ಮೇಲುಗೈ ನೀಡಿದ್ದು. ಹಗ್ಗ-ಜಗ್ಗಾಟದಿಂದ ರಾಜ್ಯದಲ್ಲಿ ಈಗ ಅಧಿಕಾರಿಗಳದ್ದೇ ದರ್ಬಾರು. ನೀ ಕೊಡೆ ನಾ ಬಿಡೆ ಎನ್ನುವಂತೆ ಈ ಅನಿಶ್ಚಿತತೆಯಿಂದ ರಾಜ್ಯದ ಜನತೆ ಬೇಸತ್ತಿದ್ದಾರೆ. ಭಾಜಪ ಬಿಡಲು ಆಗದೆ ಕಟ್ಟಿಕೊಳ್ಳಲು ಆಗದೆ ಯೆಡಿಯೂರಪ್ಪ ಮತ್ತವರ ಬೆಂಬಲಿಗರು ಆಡಳಿತೆಯನ್ನು ಆತಂಕಕ್ಕೀಡು ಮಾಡಿದ್ದಾರೆ. ಇಂದಿನ ಎಲ್ಲ ಅವ್ಯವಸ್ಥೆಗೂ ಭಾಜಪವೇ ಹೊಣೆ. ಜನ ಇವರಿಗೆ ಸರಿಯಾದ ಬುದ್ಧಿ ಕಲಿಸಬೇಕು.

*　　*　　*

ನಮ್ಮ ಮಾಧ್ಯಮಗಳು ಎಷ್ಟು ಕೀಳು ಹವ್ಯಾಸದವು, ಬೇಜವಾಬ್ದಾರಿಯಾದವು, ಎಂಬುದನ್ನು ನ್ಯಾಯಮೂರ್ತಿ ಮಾರ್ಕಂಡೇಯ ಕಟ್ಜು ಪದೇಪದೇ ಹೇಳುತ್ತಿರುತ್ತಾರೆ. ಅದಕ್ಕಾಗಿ ಕೆಲವು ಖ್ಯಾತ ಮಾಧ್ಯಮ ಅಂಕಣಕಾರರು ಅವರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ತೆಂಡು ಎಂಬ ಕ್ರಿಕೆಟ್ ಧಾಂಡಿಗ ರಾಜ್ಯಸಭೆಗೆ ನೇಮಕಗೊಂಡಾಗ ಮಾಧ್ಯಮಗಳು ಸತತವಾಗಿ ಒಂದು ವಾರ ಅಬ್ಬರ ನಡೆಸಿದ್ದು ಯಾರಿಗೆ ಗೊತ್ತಿಲ್ಲ? ಆತ ನಾಮಕರಣಗೊಂಡಿದ್ದು ಸ್ವಾಗತಾರ್ಹವೋ ಅಲ್ಲವೋ, ಅದು ಬೇರೆಯದೇ ಪ್ರಶ್ನೆ. ಅಲ್ಲಿಗೆ ಹೋದ ನಂತರವಾದರೂ ಈ ಕ್ರಿಕೆಟ್ ದೇವತೆ ಇಪ್ಪತ್ತರ ಸುಮಾರಿನ ವಯಸ್ಸಿನ ಹೊಸ ಪೀಳಿಗೆಯವರಿಗೆ ಪ್ರಾತಿನಿಧ್ಯ ದೊರೆಯುವಂತೆ ಜಾಗ ಖಾಲಿ ಮಾಡಿಕೊಡುವ ಸೌಜನ್ಯ ತೋರುತ್ತಾರೆಯೆ, ಎಂಬುದು ನಿಜವಾದ ಪ್ರಶ್ನೆ. ಕೋಟಿಗಳು ಸಾಕು, ಹೊಸಬರು ಮುದುಕರಾಗುವ ಮುನ್ನ ಅವರೂ ಕ್ರಿಕೆಟ್ ಬೋರ್ಡ್‌ನ ಪ್ರತಿನಿಧಿಗಳಾಗಿ ಆಡಲು ಬಿಡಪ್ಪಾ, ಮಹರಾಯ, ಎಂಬುದಷ್ಟೇ ಈಗಿನ ಮನವಿ. ಹೋಗಲಿ, ನಾವು ಮಾತನಾಡಹೊರಟಿದ್ದು ಮಾಧ್ಯಮಗಳ ಬಗ್ಗೆ: ಇವಕ್ಕೆ ಕಿಂಚಿತ್ತೂ ಮಾನವ ಹೃದಯವಿಲ್ಲವೆ? ಬಿಹಾರದ ಬತಾನಿ ತೋಲ ಎಂಬಲ್ಲಿ ಕೆಲವು ವರ್ಷಗಳ ಹಿಂದೆ ಮೇಲ್ಜಾತಿಯ ನೀಚರು ದಲಿತರ ಗುಡಿಸಲುಗಳಿಗೆ ಬೆಂಕಿಯಿಟ್ಟು ಹತ್ತಾರು ಮಂದಿಯನ್ನು ಜೀವಂತ ಸುಟ್ಟರು. ಆ ಬಗ್ಗೆ ಮೊಕದ್ದಮೆಗಳನ್ನು ಸರ್ಕಾರ ದಾಖಲು ಮಾಡಲಿಲ್ಲ, ಹೋರಾಟ ನಡೆಸಿ ದಲಿತರು ಅದನ್ನು ಮಾಡಿಸಿದರು. ಆಮೇಲೆ ಕೊಲೆಗಾರರಿಗೆ ಯಥಾಪ್ರಕಾರ ಜಾಮೀನಿನ ರಕ್ಷಣೆ, ಅವರಿಂದ ಸಾಕ್ಷಿಗಳಿಗೆ ಬೆದರಿಕೆ. ವರ್ಷಾನುಗಟ್ಟಲೆ ನ್ಯಾಯಾಲಯವು ಮೊಕದ್ದಮೆಯನ್ನು ಆಲಿಸಿ ಕಡೆಗೆ ತೀರ್ಪು ಕೊಟ್ಟಿತು, ಆಪಾದಿತರ ವಿರುದ್ಧ ಸಾಕ್ಷ್ಯವೇನೂ ಇಲ್ಲದ್ದರಿಂದ ಅವರು ನಿರಪರಾಧಿಗಳು, ಎಂದು. ''ಕಾನೂನು ಒಂದು ದೊಡ್ಡ ಕತ್ತೆ'' ಎಂಬ ಮಾತು ಎಷ್ಟು ಅರ್ಥಪೂರ್ಣ! ಅವರು ಅಪರಾಧಿಗಳಲ್ಲದಿದ್ದರೆ ಬೆಂಕಿಯಿಟ್ಟ ಅಧಮರು ಯಾರು? ಆ ಪ್ರಶ್ನೆ ನ್ಯಾಯಾಲಯಕ್ಕೆ ಅಪ್ರಸ್ತುತ, ಇವರು ಅಪರಾಧಿಗಳಲ್ಲ, ಎಂಬುದಷ್ಟೇ ಅದರ ಪರಿಧಿಗೆ ಬರುತ್ತದೆ. ಇಂತಹ ಪ್ರಮಾದವು ನಡೆದಿರುವಾಗ ಮಾಧ್ಯಮಗಳು ಮನೆ ಮತ್ತು ಜೀವ ಸುಡಿಸಿಕೊಂಡಿರುವವರ ಪರವಾಗಿ ಸೊಲ್ಲೆತ್ತಬೇಕಿತ್ತಲ್ಲವೆ? ಆರುಶಿ ಸತ್ತರೆ ಅಬ್ಬರ, ಸುಷ್ಮಾ ಅವರು ಶ್ರೀಲಂಕಾಕ್ಕೆ ತೆರಳಿ ತಮಿಳರಿಗೆ ಸಾಂತ್ವನ ಹೇಳಿದರೆ ಅಬ್ಬರ, ಕೇಡುಗಾರ್ತಿ ಹಿಲರಿ ಕ್ಲಿಂಟನ್ ಕಲ್ಕತ್ತೆಗೆ ಬಂದರೆ ಅಬ್ಬರ, ಯಾರು ಮುಂದಿನ ಅಧ್ಯಕ್ಷರೆಂಬುದಕ್ಕೆ ಅಬ್ಬರ, ಆದರೆ ಜೀವ ಸುಡಿಸಿಕೊಂಡವರ ಬಗ್ಗೆ ಒಂದು ನಿಮಿಷದ ಮಾತು ಮತ್ತು ಚರ್ಚೆ ಬೇಡ. ದಲಿತರನ್ನು ಕೊಂದವರು ಮಾತ್ರ ಪಾತಕಿಗಳಲ್ಲ, ದಲಿತರಿಗಾದ ಘೋರ ಅನ್ಯಾಯದ ವಿರುದ್ಧ ಸೊಲ್ಲೆತ್ತದಿದ್ದ ಮಾಧ್ಯಮಗಳೂ ಪಾತಕಿಗಳೇ, ಎಂದು ಹೇಳಿದರೆ ಅದು ಕೇವಲ ಕೋಪದ ಮಾತಲ್ಲ, ವಾಸ್ತವ ಅನೈತಿಕತೆಯ ದರ್ಶನ.

*　　*　　*

'ಪ್ರಭುತ್ವ' ಎಂಬುದು ಕೇವಲ ಸರ್ಕಾರ, ಮಂತ್ರಿಗಳು, ಅಧಿಕಾರಿಗಳು, ಅಲ್ಲ. ಅದರಲ್ಲಿ ಪೊಲೀಸ್, ಸೈನ್ಯ, ನ್ಯಾಯಾಲಯ, ಎಲ್ಲವೂ ಇವೆ. ಇವೆಲ್ಲಾ ಜನತೆಯನ್ನು ಪ್ರತಿನಿಧಿಸುತ್ತವೆ, ಜನತೆಗೆ ಸೇವೆ ಮಾಡುತ್ತವೆ, ಜನತೆಯನ್ನು ರಕ್ಷಿಸುತ್ತವೆ. ಇದು ಸತ್ಯವೋ ಮಿಥ್ಯೆಯೋ ಎಂಬುದನ್ನು ಜನತೆ ಅರಿಯಬೇಕು, ಅರಿಯುತ್ತದೆ. ಇವೆಲ್ಲಾ ರಕ್ಷಿಸುವುದು ಆಳುವ ವರ್ಗವನ್ನು, ದೊಡ್ಡ ಬಂಡವಾಳಿಗರನ್ನು, ಸಟ್ಟಾ ಜೂಜುಗಾರರನ್ನು, ಭಾರಿ ಭೂಮಾಲೀಕರನ್ನು, ಎಂಬ ಮಾತೊಂದಿದೆ. ಅದು ಬರೀ ಸಿದ್ಧಾಂತದ ಬದನೆಕಾಯಿ ಅಲ್ಲ ಎಂಬುದಕ್ಕೆ ನೂರಾರು ಪ್ರಮಾಣಗಳಿವೆ. ಆಳುವ ವರ್ಗವು ಪ್ರಭುತ್ವದ ಎಲ್ಲ ಘಟಕಗಳನ್ನೂ ತನ್ನ ಹಿತ ಕಾಯಲು ಬಳಸಿಕೊಳ್ಳುತ್ತದೆ ಮತ್ತು ಅವು ಪ್ರತಿಕೂಲವಾಗಿ ವರ್ತಿಸಿದಾಗ ಕಿರುಕುಳ ಕೊಟ್ಟು ಸತಾಯಿಸುತ್ತವೆ, ಸಾಯಿಸುತ್ತವೆ. ಗುಜರಾತಿನ ಪೊಲೀಸ್ ಅಧಿಕಾರಿ ಸಂಜೀವ ಭಟ್‌ಗೆ ಎಂತಹ ಪರದಾಟ ಬಂದಿದೆ ಎಂಬುದನ್ನು ಗಮನಿಸಿದರೆ ಇದು ಸಾಬೀತಾಗುತ್ತದೆ. ಆತ ಮುಖ್ಯಮಂತ್ರಿ ನರೇಂದ್ರ ಮೋದಿಯವರ ಪಾತಕವನ್ನು ಬಹಿರಂಗವಾಗಿ ಬಿಚ್ಚಿಟ್ಟ. ಅದಕ್ಕೆ ಪ್ರತಿಯಾಗಿ ಆತನಿಗೆ ಎಂತೆಂಥವೋ ಫಜೀತಿಯ ಪ್ರಸಂಗಗಳ ಸರಮಾಲೆ. ಅಷ್ಟು ಸಾಲದೆಂಬಂತೆ ಎರಡು ದಶಕಗಳ ಹಿಂದೆ ಯಾರಿಗೋ ದೈಹಿಕ ಹಿಂಸೆ ಕೊಟ್ಟು

ಪೊಲೀಸ್ ಠಾಣೆಯಲ್ಲಿ ಅವರನ್ನು ಸಾಯಿಸಿದ್ದನೆಂಬ ಹೊಸ ಆರೋಪ, ಹೊಸ ದಸ್ತಗಿರಿ, ಹೊಸ ಜಾಮೀನು, ಹೊಸ ಮೊಕದ್ದಮೆ! ಆತ ಹಾಗೆ ಮಾಡಿದ್ದರೆ ಅದು ಕ್ಷಮಾರ್ಹವಲ್ಲ, ಆತನಿಗೆ ಶಿಕ್ಷೆಯಾಗಬೇಕು. ಆದರೆ ಆತನ ಈ ವರ್ತನೆಯು ಸರ್ಕಾರಕ್ಕೆ ಈಗ ತಾನೆ ತಿಳಿಯಿತೆ? ಹಿಂದೆಯೇ ಆತನನ್ನೇಕೆ ಶಿಕ್ಷಿಸಲಿಲ್ಲ? ''ಮಾನ್ಯ'' ಮೋದಿಯವರನ್ನು ಎದುರುಹಾಕಿಕೊಳ್ಳದಿದ್ದಿದ್ದರೆ ಭಟ್ಟರಿಗೆ ಹಿಂದಿನ ಆಪಾದನೆ ನೆನಪಿಗೇ ಬರುತ್ತಿರಲಿಲ್ಲ. ''ಪ್ರಭುತ್ವ'' ಎನ್ನುವುದು ಅಂತಹ ಘಟಸರ್ಪ, ಬೇಕಾದಾಗ ಹಿಂದಿನದನ್ನು ನೆನಪಿಸಿಕೊಂಡು ಅಟ್ಟಿಸಿಕೊಂಡು ಬರುತ್ತದೆ. ಪ್ರಜಾಪ್ರಭುತ್ವದ ಸಂಹಿತೆಯಾದ ಸಂವಿಧಾನ ಏನೇ ಹೇಳಲಿ, ಪ್ರಭುತ್ವದ ಚಾಳಿಯೇ ಬೇರೆ. ಅದು ಯಾರ ಹಿಡಿತದಲ್ಲಿರುತ್ತದೋ ಅವರನ್ನು ಸಂರಕ್ಷಿಸುವುದು ಅದರ ಮೂಲ ಲಕ್ಷಣ. ಕಡೆಗೆ ಯಾವ ಲೂಟಿಕೋರರೂ ಕದ್ದ ಮತ್ತು ಕಸಿದ ಸಂಪತ್ತನ್ನು ಕಳೆದುಕೊಳ್ಳುವುದೇ ಇಲ್ಲ, ಇದಲ್ಲವೆ ವಿಸ್ಮಯ! ಮಹಾಭಾರತದ ಯಕ್ಷ ಈ ಪ್ರಶ್ನೆ ಕೇಳಿದ್ದರೆ ಧರ್ಮರಾಯ ಏನುತ್ತರ ಕೊಡುತ್ತಿದ್ದನೋ ಅದನ್ನು ತಿಳಿಯುವ ಕುತೂಹಲ ಉಳಿದಿದೆ.

* * *

ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಸಂಜಯ ಗಾಂಧಿಯನ್ನು 'ಸಂವಿಧಾನೇತರ ಅಧಿಕಾರ ಕೇಂದ್ರ' ಎಂದು ಮೊಟ್ಟಮೊದಲಿಗೆ ಬಣ್ಣಿಸಿದವರು ಭಾರತ ಕಮ್ಯುನಿಸ್ಟ್ ಪಕ್ಷದ ಭೂಪೇಶ ಗುಪ್ತ. ಅವರು ಮೂಲತಃ ಪಶ್ಚಿಮ ಬಂಗಾಳದವರು. ಈಗ ಅದೇ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಶ್ರೀಮತಿ. ಮಮತಾ ಬ್ಯಾನರ್ಜಿಯವರು ಸಂವಿಧಾನೇತರ ಅಧಿಕಾರ ಕೇಂದ್ರವಾಗಿ ಮಾರ್ಪಟ್ಟಿದ್ದಾರೆ. ಮೂರ್ಖ ಮಕ್ಕಳಂತೆ 'ಠೂ' ಬಿಡುತ್ತಾರೆ, ತಮ್ಮ ಪಕ್ಷದವರೆಲ್ಲಾ ತನ್ನಂತೆ 'ಠೂ' ಬಿಡಬೇಕೆಂದು ಆಜ್ಞೆ ನೀಡುತ್ತಾರೆ! ಬೇರೆ ಪಕ್ಷದವರನ್ನು ಮಾತನಾಡಿಸಬೇಡಿ, ಅವರ ಜೊತೆ ತಿಂಡಿ ತಿನ್ನಬೇಡಿ, ಅವರ ಮನೆಯ ಮದುವೆಗೆ ಹೋಗಬೇಡಿ, ವಿವಾಹ ಸಂಬಂಧವಂತೂ ಖಂಡಿತ ಕೂಡದು, ಇತ್ಯಾದಿ 'ಹೆಗ್ಗಳಿಕೆ'ಯ ಸೂಚನೆಗಳನ್ನು ನೀಡುತ್ತಾರೆ. ಅದಕ್ಕೂ ಸಂವಿಧಾನಕ್ಕೂ ಸಂಬಂಧವಿಲ್ಲ, ಆದರೆ ವಿನಯದ ನಾಗರಿಕ ಚರ್ಯೆಗೂ ಅದಕ್ಕೂ ಗಾಢ ಸಂಬಂಧವಿದೆ. ಆ ಹಂತವನ್ನು ಮೀರಿ ಈಗ ಮಮತಾ ದೀದಿ ಅಮೆರಿಕೆಯ ಹಿಲರಿ ಕ್ಲಿಂಟನ್ ಜೊತೆ, ಕೇಂದ್ರ ಸರ್ಕಾರವನ್ನು ಕಡೆಗಾಣಿಸಿ, ಅನೇಕ ಅಂತರರಾಷ್ಟ್ರೀಯ ವಿದ್ಯಮಾನಗಳ ಚರ್ಚೆ ನಡೆಸಿದ್ದಾರೆ ಮತ್ತು ನಡೆಸಿಲ್ಲವೆಂದು ಸುಳ್ಳು ಹೇಳಿದ್ದಾರೆ. ತಮ್ಮ ರಾಜ್ಯದ ರಾಜಕೀಯದ ಏಳುಬೀಳುಗಳನ್ನು ದೀದಿ ಚರ್ಚಿಸಬೇಕಾದ್ದು ಹಿಲರಿಯ ಜೊತೆ ಅಲ್ಲ, ತಮ್ಮ ರಾಜ್ಯದಲ್ಲಿ ವಾಲ್‌ಮಾರ್ಟ್‌ಗೆ ಅವಕಾಶ ಕೊಡುವ ವಿಷಯವನ್ನು ದೀದಿ ಚರ್ಚಿಸಬೇಕಾದ್ದು ದೇಶದ ಪ್ರಧಾನಿಯೊಡನೆಯೇ ವಿನಾ ಹಿಲರಿಯ ಜೊತೆ ಅಲ್ಲ. ಭಾರತ-ಬಂಗ್ಲಾದೇಶಗಳ ನದಿವಿವಾದವನ್ನು ಹಿಲರಿಯ ಜೊತೆ ಚರ್ಚಿಸಲು ಮಮತಾ ಅವರಿಗೆ ಸಂವಿಧಾನಾತ್ಮಕ ಅನುಮತಿ ಇಲ್ಲ. ಚುನಾವಣೆಯಲ್ಲಿ ಗೆದ್ದಿರುವುದರಿಂದ ಯಾರೊಡನೆ ಏನು ಬೇಕಾದರೂ ಹಂಚಿಕೊಳ್ಳಬಹುದೆಂಬ ಧೋರಣೆ ಅಸಂಬದ್ಧವಾದ್ದು. ಹಿಲರಿಯ ಉದ್ಧಟತನಕ್ಕಾದರೂ ಮಿತಿಯುಂಟೆ? ನಮ್ಮ ದೇಶದ ಆಂತರಿಕ ವ್ಯವಹಾರದಲ್ಲಿ ಮೂಗು ತೂರಿಸಲು ನಾವೇನು ಅಮೆರಿಕಾದ ಅಧೀನ ರಾಷ್ಟ್ರವೆಂದು ಆಕೆ ತಿಳಿದಿದ್ದಾರೆಯೆ? ಎಸ್. ಎಂ. ಕೃಷ್ಣ ಆ ಬಗ್ಗೆ ಹಿಲರಿಗೆ ಸ್ಪಷ್ಟವಾಗಿ ಹೇಳಬೇಕಿತ್ತು, ಆದರೆ ಮುತ್ತು ಸೂಸುವ ನಮ್ಮ ಮುದ್ದುಕೃಷ್ಣನಿಗೆ ಅದನ್ನು ಹೇಳಲು ಉಸಿರಿಲ್ಲವೇನೊ! ಹಿಲರಿ ಹೇಳಿದ್ದಾರೆ, ಇಸ್ರೇಲ್ ಬಳಿ ಅಣ್ವಸ್ತ್ರಗಳು ಇವೆ, ಎಂದು. ಅದನ್ನು ಬಹಿರಂಗವಾಗಿ ಒಪ್ಪಿದ್ದಾರಲ್ಲಾ ಎಂಬುದನ್ನು ಮೆಚ್ಚಬೇಕು. ಇಸ್ರೇಲ್ ಬಳಿ ಅಣ್ವಸ್ತ್ರವಿದ್ದರೆ ಒಳ್ಳೆಯದಂತೆ, ಇರಾನ್ ಬಳಿ ಇದ್ದರೆ ಅದು ಅಪಘಾತಕ್ಕೆ ಕಾರಣವಾಗುತ್ತದಂತೆ. ನಾವು ಇರಾನಿನಿಂದ ತೈಲ ಕೊಳ್ಳಬಾರದಂತೆ, ಈಕೆ ತೋರಿಸುವ ಮಾರುಕಟ್ಟೆಯಿಂದ ಅದನ್ನು ಪಡೆದುಕೊಳ್ಳಬೇಕಂತೆ. ತಾನು ಯಾರು, ಯಾರಿಗೆ ಹೇಳುತ್ತಿದ್ದೇನೆ, ಎಂಬ ಪರಿವೆಯೇ ಇಲ್ಲದ ಸೊಕ್ಕಿನ ರಾಣಿ ಹಿಲರಿ ಕ್ಲಿಂಟನ್. ಆಕೆಗೆ 'ಬಾಯಿ ಮುಚ್ಚು' ಎಂದು ನಮ್ಮ ಪ್ರಧಾನಿ ಹೇಳದಿದ್ದರೆ ಭಾರತವು 'ಬನಾನಾ ಗಣರಾಜ್ಯ' ಎಂಬ ನಾಮಧೇಯಕ್ಕೆ ಪಾತ್ರವಾಗುತ್ತದೆ. ಅದನ್ನು ಆಗಗೊಡ ಕೂಡದು, ಅದು ಜನತೆಯ ಗಟ್ಟಿಯಾದ ನಿರ್ಧಾರ.

* * *

ಇತ್ತೀಚಿನ ವರದಿಗಳ ಪ್ರಕಾರ ನಮ್ಮ ದೇಶದ ಬಹುತೇಕ ಎಲ್ಲ ರಾಷ್ಟ್ರೀಕೃತ ಬ್ಯಾಂಕುಗಳಲ್ಲೂ ಕಳೆದ ಆರು ತಿಂಗಳ ಅವಧಿಯಲ್ಲಿ ಬ್ಯಾಂಕಿನಿಂದ ಸಾಲ ಪಡೆದು ಅದನ್ನು ಹಿಂದಿರುಗಿಸದಿರುವವರ ಸಂಖ್ಯೆ ಅಪಾರವಾಗಿ ಹೆಚ್ಚಿದೆ. ಒಂದೊಂದು ಬ್ಯಾಂಕಿನಲ್ಲೂ 'ನಾನ್ ಪರ್ಫಾರ್‌ಮಿಂಗ್ ಅಸೆಟ್ಸ್' (ಅಂದರೆ ಹಿಂದಿರುಗಿಸಲಾಗದೆ ಉಳಿದಿರುವ ಸಾಲದ ಮೊತ್ತ) ಕೇವಲ ಆರು ತಿಂಗಳಲ್ಲಿ ಒಂದೊಂದು ಬ್ಯಾಂಕಿನಲ್ಲೂ ಸರಾಸರಿ ಮುನ್ನೂರು - ನಾಲ್ಕು ನೂರು ಕೋಟಿ ಗಳಿಗಿಂತ ಹೆಚ್ಚಾಗಿದೆ. ಇದನ್ನು ಪಡೆದವರು ಯಾರೋ ಬಡರೈತರಲ್ಲ, ಅವರೆಲ್ಲಾ ಭಾರಿ ಉದ್ಯಮಿಗಳು. ರೈತನು ಸಾಲ ಮರುಪಾವತಿಸದಿದ್ದರೆ ಅವನ ಆಸ್ತಿಗೆ ಸಂಚಕಾರ ಬರುತ್ತದೆ, ಆದರೆ ಉದ್ಯಮಿಗಳಿಗೆ ಅಂತಹ ಬಾಧೆಯಿಲ್ಲ. ಸಾಲ ಪಡೆದು ಬಂಡವಾಳ ತೊಡಗಿಸುವ ಬದಲು ಮಾರುಕಟ್ಟೆಯ ಜೂಜಿನಲ್ಲಿ ಅದನ್ನು ಪಣವಾಗಿ ಇಟ್ಟು ಕಳೆದುಕೊಳ್ಳಬಹುದು. ಅಂತಹ ಕುತಂತ್ರಿ ಉದ್ಯಮಿಗಳ ದ್ರೋಹವನ್ನು ಕುರಿತು ಚರ್ಚಿಸಲು ನಮ್ಮ ದೇಶದ ಪಾರ್ಲಿಮೆಂಟ್ ಒಂದು ನಿಮಿಷವನ್ನೂ ವ್ಯಯ ಮಾಡಲಿಲ್ಲ, ಆದರೆ ೧೯೪೯ರ ಶಂಕರ್‌ರ ವ್ಯಂಗ್ಯಚಿತ್ರವೊಂದನ್ನು ಚರ್ಚಿಸಲು ಪಾರ್ಲಿಮೆಂಟ್ ಸದಸ್ಯರಿಗೆ ಎರಡು ದಿನಗಳು ಕೂಡ ಕಡಿಮೆಯೆನಿಸಿದವು. ಆ ಚಿತ್ರಕ್ಕಿಂತಲೂ ಹೆಚ್ಚು ಮುಜುಗರ ತಂದಿದ್ದು ಎನ್.ಸಿ.ಇ.ಆರ್.ಟಿ. ಪುಸ್ತಕದಲ್ಲಿರುವ ಟೀಕೆಗಳು; ರಾಜಕಾರಣಿಗಳನ್ನು ಅಪ್ರಯೋಜಕರೆಂದು ಅಲ್ಲಿ ಚಿತ್ರಿಸಲಾಗಿದೆ ಎಂಬುದು ಪಾರ್ಲಿಮೆಂಟಿನ ಕೆಲವು ಸದಸ್ಯರ ಆರೋಪ. ಅದು ನಿಜವೇ ಎಂಬುದು ಒಂದು ಪ್ರಶ್ನೆ. ಸ್ವಾರಸ್ಯವೆಂದರೆ ಅದನ್ನು ಗಮನಿಸಲು ಪಾರ್ಲಿಮೆಂಟಿಗೆ ಆರೇಳು ವರ್ಷಗಳು ಹಿಡಿಯಿತು! ಮಧ್ಯಮ ಮತ್ತು ಪ್ರತಿಷ್ಠಿತ ವರ್ಗಗಳ ಮಕ್ಕಳಿಗೆ ಪುಸ್ತಕ ರೋಚಕವಾಗಿರುತ್ತದೆ ಮತ್ತು 'ಪಬ್ಲಿಕ್' ಎಂಬ ತೀರಾ ಖಾಸಗಿ ಶಾಲೆಗಳ ಅಧ್ಯಾಪಕರಿಗೆ ಅದು ಬೇಳೆ ಹೂರಣ ಎಂಬ ಇನ್ನೊಂದು ವಾದವೂ ಇದೆ: ರಾಜಕಾರಣವನ್ನು ಲೇವಡಿ ಮಾಡಿ ಎಲ್ಲ ಚಿಂತನೆಯನ್ನೂ ಬರಡು ಮಾಡುವುದು ಉದ್ದೇಶ ಎಂದು ಅದರ ಸಾರಾಂಶ. ಇಷ್ಟೆಲ್ಲಾ ಚರ್ಚೆ ನಡೆಯಲು ''ದಲಿತರ ಪರವಾಗಿ'' ಮುಂಬೈಯಲ್ಲಿ ಯಾರೋ ಆ ಪುಸ್ತಕವನ್ನು ಸುಟ್ಟು ''ಅಂಬೇಡ್ಕರ್ ಅವರಿಗೆ ಮಾನಹಾನಿ ಮಾಡಲಾಗಿದೆ'' ಎಂಬ ಘೋಷಣೆ ಕೊಟ್ಟಿದ್ದು ಒಂದು ಕಾರಣವಾಗಿದೆ. ವ್ಯಂಗ್ಯಚಿತ್ರಗಳನ್ನು ಅಂಬೇಡ್ಕರ್ ಮತ್ತು ನೆಹರು ನಗು ಮುಖದಿಂದ ಅನುಭವಿಸುತ್ತಿದ್ದರೆಂದು ಹೇಳುತ್ತಾರೆ. ಅದರಲ್ಲಿ ನಿಜಕ್ಕೂ ಜನತೆಯ ಪರವಾಗಿ ಶಂಕರ್ ಟೀಕಿಸಿರುವುದು ಸಂವಿಧಾನ ರಚನಾ ಸಭೆಯನ್ನೇ ಹೊರತು ಅಂಬೇಡ್ಕರರನ್ನಲ್ಲ. ಅಂಬೇಡ್ಕರ್ ಅವರ ಚಿತ್ರವು ಆ ಸಭೆಯ ಸದಸ್ಯರನ್ನು ಪ್ರತಿನಿಧಿಸುತ್ತದೆ. ಇಂದು ನೇಪಾಳದಲ್ಲಿ ಇನ್ನೂ ಸಂವಿಧಾನ ರಚಿಸಲಾಗಿಲ್ಲ ಎಂಬ ಟೀಕೆ ಬರುತ್ತಿದೆಯಲ್ಲವೆ? ಅದಕ್ಕೆ ಅಲ್ಲಿಯ ಆಂತರಿಕ ರಾಜಕೀಯ ಬಿಕ್ಕಟ್ಟುಗಳು ಕಾರಣ. ಆದರೆ ನಮ್ಮಲ್ಲಿ ಸಂವಿಧಾನ ರಚಿಸಲು ಸಭೆಯು ಸುಮಾರು ಮೂರು ವರ್ಷಗಳನ್ನು ತೆಗೆದುಕೊಂಡಿತು. ಸಭೆಯಲ್ಲಿ ಮಾತುಗಳ ಮಳೆ. ಒಂದೊಂದು ವಿಷಯದ ಬಗೆಗೆ ನೂರು ಮಂದಿ ಭಾಷಣ, ಇಪ್ಪತ್ತು ಮಂದಿ ಟೀಕೆ, ಹೀಗೆ ಸಾಗಿತ್ತು ಅಲ್ಲಿಯ ಕಲಾಪ. ಸಂವಿಧಾನ ರಚನೆಯಾಗುವವರೆಗೆ ನಾವು ಗಣರಾಜ್ಯವಾಗುವಂತಿರಲಿಲ್ಲ, ಬ್ರಿಟನ್ನಿನ ಪ್ರತಿನಿಧಿ ಗೌರ್ನರ್ ಜನರಲ್‌ನ ಅಂಕೆಯಲ್ಲಿ ಇರಬೇಕು, ಸರ್ಕಾರವು ಮಧ್ಯಂತರ ಸರ್ಕಾರ ಎನಿಸಿಕೊಳ್ಳಬೇಕು. ಡಾ|| ಅಂಬೇಡ್ಕರ್ ಮತ್ತು ನೆಹರು ಇದರ ಬಗ್ಗೆ ವ್ಯಗ್ರರಾಗಿದ್ದರು, ಆದರೆ ಸಭೆಯ ಸದಸ್ಯರ ನಿಧಾನ ಪ್ರವೃತ್ತಿ ಹಾಗೂ ನಿರರ್ಗಳ ಮಾತುಗಳಿಗೆ ಕಡಿವಾಣ ಹಾಕುವಂತಿರಲಿಲ್ಲ. ಅಂಬೇಡ್ಕರರು ಚಾಟಿ ಬೀಸಿದರೂ ಸಂವಿಧಾನ ರಚನಾಸಭೆಯೆಂಬ ಬಸವನಹುಳು ಜಾಗ್ರತೆ ಮುಂದಕ್ಕೆ ಸಾಗುತ್ತಿರಲಿಲ್ಲ, ಹಿಂದಿನಿಂದ ನೆಹರು ಕೂಡ ಚಾಟಿ ಬೀಸಿದರೂ ಅಷ್ಟೇ ಪರಿಣಾಮ. ''ಹೀಗಾದರೆ ನೀವು ದೇಶಕ್ಕೆ ಸಂವಿಧಾನವನ್ನು ಇನ್ನೆಷ್ಟು ವರ್ಷಗಳ ನಂತರ ನೀಡುತ್ತೀರಿ, ಮಾನ್ಯ ಸದಸ್ಯರೆ?'' ಮತ್ತು ''ನಾವು ಗಣರಾಜ್ಯವಾಗುವುದು ಯಾವಾಗ?'' ಎಂಬುದು ಜನತೆಯ ಅಸಹನೆಯ ಕೂಗು. ವ್ಯಂಗ್ಯಚಿತ್ರವು ಡಾ|| ಅಂಬೇಡ್ಕರರನ್ನಾಗಲಿ, ನೆಹರುವನ್ನಾಗಲಿ ಛೇಡಿಸುವ ಚಿತ್ರವಲ್ಲ; ಅದು ಡಾ|| ರಾಜೇಂದ್ರ ಪ್ರಸಾದರ ನೇತೃತ್ವದಲ್ಲಿ ಮಂದಗತಿಯಿಂದ ತೆವಳುತ್ತಾ ಸಾಗುತ್ತಿದ್ದ ಸಂವಿಧಾನ ಸಭೆಯ ಕಲಾಪವೈಖರಿಯ ಟೀಕೆ. ಪಾರ್ಲಿಮೆಂಟಿನ ಇಂದಿನ ಸದಸ್ಯರು ಅದನ್ನು ವಿಶ್ಲೇಷಿಸಿಕೊಳ್ಳಲಿಲ್ಲ, ದೇಶಕ್ಕೆ ಅದನ್ನು ತಿಳಿಯ ಹೇಳಲಿಲ್ಲ. ''ಡಾ|| ಅಂಬೇಡ್ಕರ್ ಮತ್ತು ಚಾಟಿ, ನೆಹರು ಮತ್ತು ಚಾಟಿ ಚಿತ್ರದಲ್ಲಿ ಸ್ಪಷ್ಟ; ಆದ್ದರಿಂದ ಅದು ಅಂಬೇಡ್ಕರರ ಮೇಲಿನ ಪ್ರಹಾರ'' ಎಂಬ ತಪ್ಪು ತಿಳಿವಳಿಕೆ ಪ್ರಚಾರವಾಯಿತು. ಪಠ್ಯಪುಸ್ತಕದಲ್ಲಿ ಅದು ಇರಬೇಕಿತ್ತೆ, ಎಂಬುದೇ ಬೇರೆ ಪ್ರಶ್ನೆ. ಸಿನಿಕತನದಲ್ಲಿ ಮುಳುಗಿ ವಿಜೃಂಭಿಸುವ ಬುದ್ಧಿಜೀವಿಗಳಿಗೆ ಮತ್ತು ಉನ್ನತ ವರ್ಗಕ್ಕೆ ಸೇರಿದ ವಿದ್ಯಾರ್ಥಿ ಬಣಕ್ಕೆ ಅದು ಸಿಹಿ ಗ್ರಾಸ, ಆದರೆ ಜನತಾ ರಾಜಕೀಯ ಪ್ರಜ್ಞೆಯ ದೃಷ್ಟಿಯಿಂದ ಪುಸ್ತಕದ ಮೌಲ್ಯವು ಕಳಪೆಯದು, ಎಂಬ ತಪ್ಪು ಅಭಿಪ್ರಾಯ ಮೂಡಿದ್ದು ದುರಂತ. ●




**‘ಹೌದು, ಬೂದಿ ಮಾತ್ರ ಬಲ್ಲದು ಬೇಯುವ ಬೇಗೆಯನ್ನು’**

ಏಪ್ರಿಲ್ ೨೦೧೨ರ ಮುಖಪುಟ ಲೇಖನ ‘ಬೂದಿ ಮಾತ್ರ ಬಲ್ಲದು ಬೇಯುವ ಬೇಗೆಯನ್ನು’ ಭೂತಕಾಲವನ್ನು ವರ್ತಮಾನಕ್ಕೆ ತಂದು ನಿಲ್ಲಿಸಿದ ಲೇಖನ. ಇಂಥ ಲೇಖನಗಳು ಹೆಚ್ಚು ಹೆಚ್ಚು ಬರಬೇಕು ಮಾತ್ರವಲ್ಲ, ನಮ್ಮ ಪಠ್ಯಪುಸ್ತಕಗಳಲ್ಲೂ ಸೇರಬೇಕು. ಸದ್ಯ ಕೇವಲ ಅಂಬೇಡ್ಕರ್ ತಮ್ಮ ಜೀವನದಲ್ಲಿ (ಮುಖ್ಯವಾಗಿ ಬಾಲ್ಯದಲ್ಲಿ) ಅನುಭವಿಸಿದ ಬೇಗೆಗಳನ್ನು ಮಾತ್ರ ತಿಳಿಸುವ ಲೇಖನಗಳು ಶಾಲೆಗಳ ಪಠ್ಯಪುಸ್ತಕಗಳಲ್ಲಿವೆ. ಅವುಗಳ ಜೊತೆಗೆ, ಕೆಲವಾದರೂ ಅಂಬೇಡ್ಕರರ ಲೇಖನಗಳನ್ನು ಸೇರಿಸಿದರೆ ಎಳೆಯ ವಯಸ್ಸಿನ ಮಕ್ಕಳನ್ನು ಚಿಂತನೆಗೆ ಹಚ್ಚಿಸಬಹುದು.

ಲೇಖಕರು ಬಹಳ ಪ್ರಮುಖವಾದ ಘಟನೆಗಳನ್ನು ಪ್ರಸ್ತಾಪಿಸಿ, ಯುಕ್ತ ವಿಶ್ಲೇಷಣೆ ನಡೆಸಿದ್ದಾರೆ. ಇಂತಹ ಅನೇಕ ಲೇಖನಗಳು ‘ಹೊಸತು’ ವಿನಲ್ಲಿ ಬರಲಿ.

*ಬೆಂಗಳೂರು* **ಕೆ. ಎಸ್. ನವೀನ್**

ಎಂ. ಡಿ. ಗೋಗೇರಿ ಎಂಬುವವರು ‘ದೇವರಲ್ಲಿ ಸಾಮರಸ್ಯ’ ಎಂಬ ಕವಿತೆಯಲ್ಲಿ ಇಸ್ಲಾಂ ಮತಧರ್ಮದ ಪ್ರಕಾರ ಅಲ್ಲಾಹುವಿಗೆ ಆಕಾರ ಇಲ್ಲದ್ದನ್ನು ತಿಳಿಯದೆ ‘ಕೈ ಕೈ ಹಿಡಿದುಕೊಂಡು ಹೊರಗೆ ನಡೆದರು’ ಎಂದು ಬರೆದದ್ದು ಧರ್ಮವಿರೋಧಿ ಆಗುತ್ತದೆ. ಒಂದೊಂದು ಧರ್ಮದ ಚೌಕಟ್ಟೂ ಪ್ರತ್ಯೇಕ. ಅದನ್ನು ಕವಿಗಳು, ಸಾಹಿತಿಗಳು, ಪ್ರಕಾಶಕರು ಅರಿಯಬೇಕು.

*ಬೆಳಗಾಂ* **ಇರ್ಫಾನ್ ಪಟೇಲ್**

‘ಹಾಲಿ ಮತ್ತು ಮಾಜಿ ಮುಖ್ಯಮಂತ್ರಿಗಳ ಮೂಢನಂಬಿಕೆಗಳು’ ಎಂಬ ಲೇಖನ (ಏಪ್ರಿಲ್, ೨೦೧೨ರ ಸಂಚಿಕೆ)ದಲ್ಲಿ ಡಾ॥ ಎಚ್. ಚಂದ್ರಶೇಖರ್ ಅವರು ಒಂದೆಡೆ ಅಶ್ವಮೇಧಯಾಗ ಮಾಡುವ ಸೂಚನೆ ನೀಡಿಲ್ಲ ಎಂದಿದ್ದಾರೆ. ಸದ್ಯಕ್ಕೆ ಇದಾಗಲಿಲ್ಲ. ಅಶ್ವಮೇಧಯಾಗ ಭಾರತೀಯ ಸಂಸ್ಕೃತಿಯ ದೊಡ್ಡ ಕಳಂಕ. ಈ ಯಾಗಕ್ಕೆ ಆಯ್ಕೆಯಾಗಿರುವ ಅಶ್ವವು ತನ್ನ ಪಥಸಂಚಲನ ಆರಂಭಿಸುವುದಕ್ಕೆ ಮುಂಚಿತವಾಗಿ, ಯಾಗವನ್ನು ಏರ್ಪಡಿಸುವ ರಾಜನ ಮಡದಿಯೊಡನೆ ರತಿಕ್ರೀಡೆಯಲ್ಲಿ ತೊಡಗಿ ನಂತರ ಮುಂದುವರಿಯುತ್ತದೆ. ರಾಲಿನ್‌ಸನ್‌ನ ಇಂಡಿಯನ್ ಆರ್ಟ್‌ನಲ್ಲಿ ಇಂತಹ ಉಬ್ಬು ಶಿಲ್ಪದ ಚಿತ್ರವಿದೆ.

*ಬೆಂಗಳೂರು* **ಯು. ಎಸ್. ವೆಂಕಟರಾಮನ್**

ಭಾರತದ ಸಂವಿಧಾನ ಶಿಲ್ಪಿ ಎಂಬ ಕೀರ್ತಿಯ ರೂವಾರಿ ಡಾ॥ ಅಂಬೇಡ್ಕರರ ಭಾವಚಿತ್ರದ ವಿನ್ಯಾಸದಲ್ಲಿ ರೂಪ ತಾಳಿ ಹೊರಬಂದ ಏಪ್ರಿಲ್ ಮಾಸದ ‘ಹೊಸತು’ ಒಂದರ್ಥದಲ್ಲಿ ಹಳತಾಗಿರುವ ಹಲವು ವಿಚಾರಗಳ ಪುನರ್ ನವೀಕರಣ ಎಂದೂ ಸರಿಸಮ ಎಂದೂ ಕೆಲವರಿಂದ ಅನಿಸಿಕೊಳ್ಳಲು ಸಾಧ್ಯವಿದೆ.

ಈ ಮಹಾನ್ ಸುಧಾರಣಾವಾದಿಯ ನೂರ ಇಪ್ಪತ್ತೊಂದನೆಯ ಜನ್ಮ ದಿನಾಚರಣೆಯ ಏಪ್ರಿಲ್ ೧೪ರ ಯುಗಾದಿ ಸಂಭ್ರಮದೊಂದಿಗೆ ದೇಶಾದ್ಯಂತ ಗಡದ್ದಿನಲ್ಲಿ ಈ ಬಡದೀನರ ಬಂಧು, ಸಮಾಜ ಸುಧಾರಕನ ಹುಟ್ಟು ಹಬ್ಬವನ್ನು ಎಂದಿನಂತೆ ಹಲವಾರು ರೆಡಿಮೇಡ್ ಪೇಲವ ಘೋಷಣೆಗಳ ಜಯಕಾರ




ದೊಂದಿಗೆ ಸರಕಾರಿ ನೆಲೆಯಿಂದಲೂ ಜನ್ಮಶತಾಬ್ಧಿ ಸನ್ಮಾನಗಳು ಹೊನಲಲ್ಲಿಯೂ ಜರಗಿಸಿ ಮತ್ತೆ ಯಥಾಸ್ಥಿತಿ ಕಾಪಾಡುವಲ್ಲಿಗೆ ಹಿಂತಿರುಗುತ್ತೇವೆ. ವಾಸ್ತವಿಕತೆಯನ್ನು ಮರೆಯುವುದಾದರೂ ಅದೆಂತು ?

ಈ ತಿಂಗಳ ಅಂಕಣದಲ್ಲಿ ‘ಹೊಸತು’ ವಿನ ಪ್ರಧಾನ ಸಂಪಾದಕ ಜಿ. ರಾಮಕೃಷ್ಣರು ಈ ವಿಷಯವನ್ನೇ ನೇರವಾಗಿ ಪ್ರಸ್ತಾಪಿಸಿಲ್ಲವಾದರೂ ಇಂತಹ ಪ್ರಾಮುಖ್ಯ ವಿಚಾರಗಳ ಒಳಗಡೆ ನುಸುಳಿ ಚೆನ್ನಾಗಿ ಜಾಲಾಡಿಸಿ ಪ್ರಸ್ತುತ ಹಳ್ಳಿಯಿಂದ ದಿಲ್ಲಿಯ ತನಕದ ಹಲವು ಸಮಸ್ಯೆಗಳ ಗಮನ ಸೆಳೆದಿದ್ದಾರೆ. ಇದಕ್ಕೆ ಪೂರಕವಾಗಿ ಬಜೆಟ್ ಮಂಡನೆಯ ವಿಚಾರದಲ್ಲಿ ಸಿ. ಆರ್. ಕೃಷ್ಣರಾವ್, ಜಿ. ನಾಗಕುಮಾರ್ ಇನ್ನಷ್ಟು ವಿಷಯಗಳಿಂದ ಪುಷ್ಟೀಕರಿಸಿದರೆ ದುಡಿಯುವ ಹಾಗೂ ದುಡಿಸುವ ವರ್ಗಸಮೀಕ್ಷೆಗೆ ಹೆಗಲು ನೀಡಿದ್ದಾರೆ.

*ಕಾಸರಗೋಡು* **ಕೀರಿಕ್ಕಾಡು ವನಮಾಲ ಕೇಶವ ಭಟ್ಟ**

**ಮೇ ಸಂಚಿಕೆ**

ಎಲ್ಲ ವಾದಗಳನ್ನು ನಮ್ಮ ಯುವಜನತೆ ಮರೆಯುತ್ತಿರುವಾಗ ಮುಖಪುಟ ಚಿತ್ರ ‘ಕಾರ್ಲ್ ಮಾರ್ಕ್ಸ್’ನದು ಹೊಸ ಸಂದೇಶವನ್ನು ಸಾರುವಂತಿದ್ದು, ಅಪರೂಪದ ಕೃತಿಯೊಂದನ್ನು ಓದುಗರಿಗೆ ನೀಡಿದ್ದೀರಿ.

ಯಾವುದೇ ಲಂಗುಲಗಾಮಿಲ್ಲದೆ ಅತಿ ರಂಜನೆಯನ್ನೇ ಮುಖ್ಯವಾಗಿ ಪ್ರಸಾರ ಮಾಡುತ್ತಿರುವ ಆತುರದ ಪ್ರಸಾರದಿಂದಾಗಿ ಅನೇಕ ಸಲ ತಪ್ಪು ಸುದ್ದಿಗಳನ್ನು ನೀಡಿ, ಅಪರಾಧ ಸುದ್ದಿಗಳನ್ನೇ ಅತಿಯಾಗಿ ವಿಜೃಂಭಿಸುತ್ತಿರುವ ಎಲೆಕ್ಟ್ರಾನಿಕ್ (ವಾಹಿನಿಗಳಿಗೆ) ಮಾಧ್ಯಮಗಳ ಮೇಲೆ ಖಂಡಿತ ನಿಯಂತ್ರಣದ ಅಗತ್ಯವಿದ್ದು, ಸರ್ಕಾರ ಈ ಬಗ್ಗೆ ತನ್ನ ಗಮನ ಹರಿಸಬೇಕು !

ಕೆ. ಪಿ. ಸ್ವಾಮಿ ಅವರು ಚಿತ್ರ ಕಲಾವಿದ ರಾ. ಸೂರಿಯವರ ಬಗ್ಗೆ ಮಾಡಿರುವ ಪರಿಚಯ ಹಾಗೂ ಕಲಾವಿದ ಸೂರಿ ಅವರ ಚಿತ್ರಗಳು ಸಂಗ್ರಹ ಯೋಗ್ಯವಾಗಿವೆ.

*ಮೈಸೂರು* **ಕೊ. ಸು. ನರಸಿಂಹಮೂರ್ತಿ**

**ಬಸವಣ್ಣನವರ ಚಾರಿತ್ರ್ಯಕ್ಕೆ ಚ್ಯುತಿ ತರುವ ವಚನಗಳು – ಪ್ರತಿಕ್ರಿಯೆ**

ಮೇ ತಿಂಗಳ ಸಂಚಿಕೆಯಲ್ಲಿ ಬಸವಣ್ಣನವರ ಚಾರಿತ್ರ್ಯಕ್ಕೆ ಚ್ಯುತಿ ತರುವ ವಚನಗಳು ಎಂಬ ಶೀರ್ಷಿಕೆಯಡಿ ಸೂರ್ಯಕಾಂತ ಸೊನ್ನದ ಅವರು ಬರೆದಿರುವ ಅಂಶಗಳನ್ನು ಗಮನಿಸಿದಾಗ, ಆಶ್ಚರ್ಯ ಜೊತೆಗೆ ಕುತೂಹಲವಾಯಿತು. ಬಸವಣ್ಣನವರು ಸ್ತ್ರೀಯರ ಬಗ್ಗೆ ಅಸಹ್ಯಕರ ಮಾತುಗಳನ್ನಾಡಿದ್ದಾರೆ ಎಂಬುದನ್ನು ಸಾಹಿತಿ ಡಾ॥ ಎಲ್. ಬಸವರಾಜು ಮತ್ತು ಡಾ॥ ಸಿದ್ಧಯ್ಯ ಪುರಾಣಿಕರು ಉಲ್ಲೇಖಿಸಿದ್ದನ್ನು ಬಹಿರಂಗಪಡಿಸಿ ಬಸವಾಭಿಮಾನಿಗಳಲ್ಲಿ ಚಿಂತನೆಗೆ ಗುರಿಮಾಡಿದ್ದಾರೆ.

ಕಳೆದ ತಿಂಗಳು ಬಸವ ಜಯಂತಿ ಆಚರಿಸಿ ಬಸವಣ್ಣನವರ ಆದರ್ಶಪ್ರಾಯಗಳಿಗೆ ಜೋತು ಬಿದ್ದಿದ್ದೇವೆ. ಬಸವಣ್ಣ ಶರಣೆಯರ ಬಗ್ಗೆ ವಚನಗಳಲ್ಲಿ ನಕರಾತ್ಮಕವಾಗಿ ನಿರೂಪಿಸಲ್ಪಟ್ಟಿರುವುದು ಖೇದದ ಸಂಗತಿ. ಬಸವಣ್ಣನವರ ವಚನಗಳೆಂದರೆ ಎಲ್ಲರೂ ಒಪ್ಪುವಂತಹವುಗಳು. ಆದರೆ ಕೆಲ ವಚನಗಳು ವಿದ್ವಾಂಸರುಗಳ, ಚಿಂತಕರ, ವಿಶ್ಲೇಷಣಕಾರರ ಕಣ್ಣು ತಪ್ಪಿಸಿ ಕೃತಿಗಳಲ್ಲಿ ಸೇರಿಕೊಂಡಿರುವುದು ದುರದೃಷ್ಟಕರ. ಈ ಅಂಶಗಳನ್ನು ಶ್ರೀಯುತ ಸೊನ್ನದರು ಬೆಳಕಿಗೆ ತಂದು ಎಲ್ಲರನ್ನು ಚಿಂತನಾಲಹರಿಗೆ ಹರಿಸಿದ್ದಾರೆ. ವಿವಾಹಿತ ಮಹಿಳೆಯರ ಬಗ್ಗೆ ಬಸವಣ್ಣನವರು ವಚನಗಳಲ್ಲಿ ಹೀನಾಯವಾಗಿ ಬರೆದಿದ್ದು ಉಂಟೆ, ಎಂಬ ಪ್ರಶ್ನೆ ಈಗಲೂ ಕಾಡುತ್ತಲಿರುವುದಂತು ಸತ್ಯ.

*ಗುಲಬರ್ಗಾ* **ಸಂಗಮನಾಥ ರೇವತಗಾಂವ**

**ಕಂಬಾರರ ಕಾದಂಬರಿ**

ಪ್ರೊ॥ ಶಿವರಾಮಯ್ಯನವರು ಕಂಬಾರರ ಬಗ್ಗೆ

ಬರೆಯ ಹೊರಟಿದ್ದಾರೋ ಅಥವಾ ಅವರ ಕಾದಂಬರಿಯ ಬಗೆಗೋ? ಕಾದಂಬರಿಯ ಪ್ರಸ್ತಾಪ ಮತ್ತು ವಿಮರ್ಶೆಯಲ್ಲಿ, ವಿಮರ್ಶಕರು ಕಾದಂಬರಿಕಾರರ ಗುಣದೋಷಗಳನ್ನು ವೈಯ್ಯಕ್ತಿಕ ನೆಲೆಯಲ್ಲಿ ಹೊಗಳುವುದಾಗಲಿ, ತೆಗಳುವುದಾಗಲಿ ಅಪ್ರಸ್ತುತ. ಕಾದಂಬರಿಯಲ್ಲಿ ಲೇಖಕರು ತಾಳಿರುವ ಧೋರಣೆಯನ್ನು ವಿಶ್ಲೇಷಿಸಿ ಟೀಕಿಸಲು ಅಡ್ಡಿಯಿಲ್ಲ, ಆದರೆ ಅವರು ಪ್ರಶಸ್ತಿಗಳನ್ನು ಪಡೆಯಲು ಯಾರನ್ನೋ ಆಶ್ರಯಿಸಿದ್ದರೆಂದು ಹೇಳುವುದು ನಿಜಕ್ಕೂ ಪ್ರಶ್ನಾರ್ಹವಾದ್ದು. ವಿಮರ್ಶಕರು ಅದಕ್ಕೇನಾದರೂ ಪುರಾವೆ ನೀಡಿದ್ದಾರೆಯೇ ಎಂದರೆ ಅದೂ ಇಲ್ಲ. ವಿಮರ್ಶಾ ಸ್ವಾತಂತ್ರ್ಯವು ಎಲ್ಲೆ ಮೀರಿದಾಗ ಶಿವರಾಮಯ್ಯನವರು ಕಾದಂಬರಿಕಾರರ ಮೇಲೆ ಮಾಡುವ ಆರೋಪವಷ್ಟೇ ವಿಮರ್ಶೆಯಾಗುತ್ತದೆ! ಕಾದಂಬರಿಯ ವಸ್ತುವಿಗಿಂತಲೂ ಶಿವರಾಮಯ್ಯನವರಿಗೆ ಜ್ಞಾನಪೀಠ ಪ್ರಶಸ್ತಿಯು ಹೆಚ್ಚು ಟೀಕೆಗೆ ನಿಲುಕುವ ವಿಷಯ! ಅಂತಹ ಕುಟುಕು ಭಾಷೆಯಲ್ಲಿರುವ 'ವಿಮರ್ಶೆ' ಪ್ರಕಟಣೆಗೆ ಯೋಗ್ಯವೆಂದು 'ಹೊಸತು' ಸ್ವೀಕರಿಸಿದ್ದಾದರೂ ಹೇಗೆ? ಕಂಬಾರರನ್ನು ಹೀಗಳೆಯುವುದಕ್ಕೆ ಪತ್ರಿಕೆಯ ಪುಟಗಳನ್ನು ಮೀಸಲಾಗಿಡಲಾಗಿದೆಯೆ? ವಸ್ತುನಿಷ್ಠ ವಿಮರ್ಶೆಯ ಜಾಗದಲ್ಲಿ ವ್ಯಕ್ತಿನಿಷ್ಠ ಪೂರ್ವಗ್ರಹಕ್ಕೆ ಅವಕಾಶ ಬೇಡ.

ದಾವಣಗೆರೆ **ಅರವಿಂದ ನಿಗ್ಗುಡಗಿ**

ಕಂಬಾರರ 'ಶಿಖರಸೂರ್ಯ'ವನ್ನು ಸಾಮಾನ್ಯವಾಗಿ ಬಹುತೇಕ ವಿಮರ್ಶಕರು ಬಿಡಿಬೀಸಾಗಿ ಹಾಡಿ ಹೊಗಳುತ್ತಿರುವ ಇಂದಿನ ಸಂದರ್ಭದಲ್ಲಿ (ವ್ಯಕ್ತಿಪೂಜೆ ಎನ್ನುವುದು ಸಾಹಿತ್ಯ ಕ್ಷೇತ್ರದಲ್ಲಿ ಇಂದು ವಿಜೃಂಭಿಸುತ್ತಿದೆ) ಪ್ರೊ॥ ಶಿವರಾಮಯ್ಯನವರ 'ಶಿಖರಸೂರ್ಯ' ಕುರಿತ ಲೇಖನ ಎಲ್ಲರ ಕಣ್ತೆರೆಸುವಂತಿದೆ. ವಿಮರ್ಶೆಯಲ್ಲಿ ಯಾರ ತೀರ್ಮಾನವೂ ಅಂತಿಮವಲ್ಲ ಎಂಬ ನೆಲೆಯಿಂದ ಹೊರಟರೂ ಉತ್ತಮ ವಾಗ್ವಾದಕ್ಕೆ ಈ ಲೇಖನ ಇಂಬುಗೊಡಲಿ, ಕೃತಿಯ ಪುನರ್ಮೌಲ್ಯಮಾಪನಕ್ಕೆ ದಾರಿ ಮಾಡಿಕೊಡಲಿ ಎಂದು ಆಶಿಸುತ್ತೇನೆ.

ಹಾಗೆಯೇ ಸಾಹಿತ್ಯ ಕ್ಷೇತ್ರದಲ್ಲಿ ವ್ಯಕ್ತಿಪೂಜೆ ಸಲ್ಲ ಎಂಬ ಮಾತನ್ನೂ ಹೇಳಲು ಬಯಸುತ್ತೇನೆ.

ಬೆಂಗಳೂರು **ಎಂ. ಎಸ್. ರಘುನಾಥ್**

## ಬೀದಿ ಮ್ಯಾಲೆ?

ಬೀದಿಯ ಮೇಲೆ ನಿಂತು ಸಾವಿರಾರು ಜನರನ್ನು ಸೇರಿಸುವ ಮತ್ತು ಸೇರಿದ್ದ ಜನಮಾನಸಕ್ಕೆ ನೈತಿಕ ಪ್ರಜ್ಞೆ, ಸಾಮಾಜಿಕ ಶಿಕ್ಷಣ ನೀಡಬಲ್ಲ ಶಕ್ತಿಯಾಗಿದ್ದ ಒಂದು ಮಾಧ್ಯಮ ಇಂದು ಪ್ರಚಾರಕ್ಕೆ ಮಾತ್ರ ಬೀದಿ ನಾಟಕ ಎಂಬಂತಾಗಿರುವುದು ಬೇಜಾರಿನ ಸಂಗತಿಯಾಗಿ ಬಿಟ್ಟಿದೆ. ತಮ್ಮಟೆ, ಕಂಜರಾ, ಢೋಲಕ್ ನುಡಿಸುತ್ತ ರಸ್ತೆಗೆ ಇಳಿದರೆ ಸಾಕು, ನಿಂತು ನೋಡಲು ಪುರಸೊತ್ತಿಲ್ಲದವರು ಕೂಡ ಕೊಂಚ ತಡೆದು ಆಟದ ವೃತ್ತದ ಕಡೆ ಕಣ್ಣ ಹಾಯಿಸಿ ನಿಂತು ಹೋಗುತ್ತಿದ್ದರು. ಇದು ನಾನು ಕಂಡ ಬೆಳಗಾಂ, ಧಾರವಾಡ ಕಡೆಯ ಆಟದ ಗತ್ತು. ''ನಾವು ಬೆವರನು ಸುರಿಸಿ ದುಡಿಯುವ ಜನ'' ಅಂತ ಹಾಡುತ್ತಿದ್ದರೆ ಮೈ ಜುಮ್ಮೆನ್ನುತ್ತಿತ್ತು. ಹ್ಹಾ! ಇದು ಎಪ್ಪತ್ತು-ಎಂಬತ್ತರ ದಶಕದ ಮಾತಲ್ಲ, ಈಗ್ಗೆ ಹದಿನೈದು ವರ್ಷದ ಕೆಳಗಿನ ಮಾತು... ಹುಬ್ಬಳ್ಳಿ ಧಾರವಾಡ ಸಮುದಾಯ ಘಟಕದಲ್ಲಿ ಅದೆಂಥ ಶಕ್ತಿ ಇತ್ತು? ನನ್ನನ್ನ ಕೊಚ್ಚಿ ತಂದು ನಾಟಕಕ್ಕೆ ಹಾಕಿತು. ಮಾತೆತ್ತಿದರೆ ಕ್ರಾಂತಿ ಅನ್ನುತ್ತಿದ್ದ ಗೆಳೆಯರೆಲ್ಲ ಮದುವೆ ಆಗಿ ಈಗ ತಣ್ಣಗಾಗಿದ್ದಾರೆ.! ನನಗೆ ತಿಳಿದಂತೆ ನನ್ನ ಓದು, ಗ್ರಹಿಕೆ, ಬದ್ಧತೆಗಳೆಲ್ಲವೂ 'ಸಮುದಾಯ'ದ ಬಳುವಳಿ ಎಂದು ನೆನೆದು ಕೊಳ್ಳುವಾಗ ಖುಷಿ ಆಗುತ್ತದೆ. ಅದೇ ಸಮುದಾಯ ಮುಂದೊಂದು ದಿನ ಯಾವುದೋ ಮೈಸೂರು ಸೀಮೆ ಎನ್.ಜಿ.ಓ. ಒಂದರ ಪ್ರಾಜೆಕ್ಟ್ ತಗೊಂಡು ರಾಜ್ಯಾದ್ಯಂತ, ಅಂದರೆ ಆಯ್ದ ತಾಲ್ಲೂಕುಗಳಿಗೆ ನಾಟಕ ಮಾಡಲು ಹೋಗುವಾಗ ನಾನು ಅದರೊಳಗೊಬ್ಬನಾಗಿಬಿಟ್ಟದ್ದೆ. ಭಟ್ಟ ಸರ್ ಬದುಕಿದ್ದಾಗ ಸಮುದಾಯವನ್ನು ಹೊರಗಿನಿಂದ ಕಂಡಿದ್ದ ನನಗೆ ಅಂದು ಅವರು ರೈತ ಜಾಥಾ ಮಾಡಿದಾಗಿನ-ರಾಮದುರ್ಗ ನಗರದ ಗ್ರಂಥಾಲಯದ ಪಕ್ಕದಲ್ಲಿ- ಪ್ರದರ್ಶನಗೊಂಡ ಬೀದಿ ನಾಟಕ ನನ್ನ ಬದುಕಿಗೊಂದು ಬ್ರೇಕ್ ಕೊಟ್ಟಿತು. ಓದು ಸಾಕೆನ್ನಿಸಿ ಕಮ್ಯುನಿಸ್ಟ್ ಪಕ್ಷ ಸೇರಿದೆ, ಊರುಬಿಟ್ಟು ಧಾರವಾಡ ಸೇರಿದೆ, ಧಾರವಾಡದಿಂದ ಹೆಗ್ಗೋಡು... ಹೀಗೆ ಸಂಪೂರ್ಣ ನಾಟಕವನ್ನೆ ಉಸಿರಾಗಿಸಿಕೊಂಡುಬಿಟ್ಟೆ.

ಇದೆಲ್ಲವೂ ಯಾಕೆ ನೆನಪಾಗುತ್ತದೆ ಅಂದರೆ ಬೀದಿ ನಾಟಕದ ವಿಚಿತ್ರ ಹಂಬಲಗಳು ಈ ಪ್ರೊಸಿನಿಯಂ ರಂಗದಲ್ಲಿ ಸಿಕ್ಕೋದಿಲ್ಲ. ಇಲ್ಲಿಯ ರಸಾನುಭೂತಿ, ಸೌಂದರ್ಯ, ಕಾವ್ಯ, ನಾಟಕೀಯತೆ, ಸಂಗೀತಗಳು ಬೀದಿ ನಾಟಕಕ್ಕೆ ಒಗ್ಗಿಗೊಳ್ಳುವುದಿಲ್ಲ. ಆದರೆ ರಸ್ತೆ ಮೇಲೆ ಓಡಾಡುವ ಜನರನ್ನು ಹಿಡಿದು ನಿಲ್ಲಿಸುವ ತಾಕತ್ತು ಈ ರಂಗಕ್ಕೆ ಬೇಕಾಗಿಲ್ಲ. ಹಾಗಾಗಿ ಇದರ ವ್ಯವಹಾರವೇ ಬೇರೆ ಅನ್ನಿಸುತ್ತದೆ. ಇಲ್ಲಿ ನಾಟಕ ನೋಡಲು ಮೊದಲೇ ತಯಾರಾಗಿ ಬಂದಿರುತ್ತಾರೆ. ಆದ್ದರಿಂದ ಪ್ರದರ್ಶನಕ್ಕೆ ನಟರೂ ಬಿಗುವಾಗಿ (ತಕ್ಕಮಟ್ಟಿಗೆ ಪ್ರೇಕ್ಷಕರ ಮೇಲೆ ಒತ್ತಡದ ಭಾವಗಳನ್ನ ಎಸೆಯುವಷ್ಟು) ತಾಲೀಮು ಮಾಡಿಯೇ ತಯಾರಾಗಿರುತ್ತಾರೆ. ಆದರೆ ಬೀದಿ ನಾಟಕಕ್ಕೆ ಬರುವ ನೋಡುಗರು ಆಸಕ್ತರಲ್ಲ, ದಾರಿಹೋಕರು. ಅಂಥವರೊಳಗೆ ಒಂದು ವಿಷಯದ ಆಗುಹೋಗುಗಳ ಬಗ್ಗೆ ತಿಳಿಸುವಿಕೆಯ ಪ್ರಯತ್ನ ಬೀದಿರಂಗ ಮಾಡುತ್ತದೆ. ಮನಮುಟ್ಟುತ್ತದೆ, ಮುಟ್ಟಿದ್ದು ಮುಂದೆಲ್ಲೋ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ.

ದಲಿತ-ಬಂಡಾಯ ಚಳುವಳಿಯ ಬಳುವಳಿಯಾಗಿ, ರಾಜಕೀಯ ಪ್ರಜ್ಞೆಯೊಂದಿಗೆ ಕನ್ನಡದ ಮಾನಸ ತಟ್ಟಿದ್ದ ಬೀದಿ ನಾಟಕ ಇಂದು ಯಾವ ಮಟ್ಟದಲ್ಲಿ ನಿಂತಿದೆ ಎನ್ನುವುದು ಯೋಚಿಸಲಿಕ್ಕೂ ಆಗದ ವಿಷಯವಾಗಿ ಬಿಟ್ಟಿದೆ. ಯಾವ ಉದ್ದೇಶಕ್ಕಾಗಿ ಬೀದಿ ನಾಟಕ ಹಾಗೇ, ಅದೇ ಮಾದರಿಯಲ್ಲಿ ಮಾಡಬೇಕು ಎನ್ನುವ ಮಾತು ಈ ಹೊಸ ಹುರುಪಿನ ಹೊಸ ಹುಡುಗರಲ್ಲಿ ಕೇಳಿಬರುತ್ತದೆ. ಅವರಿಗೆಲ್ಲ ಸರಕಾರೀ ಕಾರ್ಯಕ್ರಮಗಳ ರುಚಿ ಹತ್ತಿಬಿಟ್ಟಿದೆ, ಕಂಪನಿಗಳ ಪ್ರಚಾರ ಕಾರ್ಯದ ಲಾಭ ತಿಳಿದುಬಿಟ್ಟಿದೆ. ಹಾಗಾಗಿ ಬೀದಿ ನಾಟಕದ ಮಹತ್ವ ಮತ್ತು ನೋಡುಗರ ರುಚಿ ಬದಲಾಗಿದೆ. ಅದರಿಂದ ಏನು ಲಾಭ, ಎಂದು ಪ್ರಶ್ನಿಸುವ ಹಂತಕ್ಕೆ ತಂದು ಬಿಟ್ಟಿರುವ ಬೀದಿ ನಾಟಕಗಳ ರಾಜ ನಿರ್ದೇಶಕರು ಸರಿಯಾಗಿಯೇ ಸಮರ್ಥಿಸಿಕೊಳ್ಳುತ್ತಾರೆ. ಅವರ ಮಾತು ಹಾಗಿರಲಿ. ದೂರದ ಬ್ರೆಜಿಲ್ ದೇಶದ ಅಗಸ್ತೋ ಬೋಲ್ ಎಂಬ ನಿರ್ದೇಶಕರು ಅದೃಶ್ಯ ರಂಗಭೂಮಿ ಬಗ್ಗೆ ಹೇಳುತ್ತಾರೆ. ಅಲ್ಲಿ ನಾಟಕ ನಡೆಯುವುದೇ ನೋಡುಗ ನಟರೊಟ್ಟಿಗೆ... ನಟ ಆರಂಭಿಸಿದ ವಾಗ್ವಾದ ಸಾರ್ವಜನಿಕರನ್ನು ಕೆರಳಿಸಿ ರಾಜಕೀಯ, ಸಾಮಾಜಿಕ ಸ್ಥಿತ್ಯಂತರದ ಕಡೆಗೆ ಇಡೀ ಚರ್ಚೆ ತಿರುಗುತ್ತಲೇ ನಟರು ಮಾಯವಾಗಿಬಿಡುತ್ತಾರೆ. ಆದರೆ ಬಹುಮುಖ್ಯವಾದ ಸಭೆ ಅದಾಗಿಬಿಟ್ಟಿರುತ್ತದೆ. ಇದು ಹೀಗಿರಲು ನಮ್ಮ ಬೀದಿ ನಾಟಕದ ಸಾಧ್ಯತೆಗಳು ಎಲ್ಲಿ ಕೊನೆಗೊಂಡವು ಅನ್ನುವುದು ನುಂಗಲಾರದ ತುತ್ತಾಗಿದೆ. ಮತ್ತೆ ಬೀದಿ ನಾಟಕಗಳು ಪ್ರಯೋಗಾತ್ಮಕವಾದರೆ ನನಗಂತು ಖುಷಿ ಆಗುತ್ತದೆ.

ಚಿತ್ರದುರ್ಗ **ಅಮಾಸ**

## ಪುಸ್ತಕಗಳ ಮಾರಾಟ

ಸಾಮಾನ್ಯವಾಗಿ ಒಂದು ಮಾತಿದೆ, ವಿಶ್ವವಿದ್ಯಾಲಯಗಳು ಪ್ರಕಟಿಸಿದ ಪುಸ್ತಕಗಳು ಮಾರಾಟವಾಗುವುದಿಲ್ಲ, ಹಾಗೇ ಗೆದ್ದಲು ಹತ್ತಿ ಹೋಗುತ್ತವೆ ಎಂದು. ಇದಕ್ಕೆ ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ಕಾರಣ. ಯಾಕೆಂದರೆ ಪ್ರಕಟವಾದ ಪುಸ್ತಕಗಳಿಗೆ ಸೂಕ್ತ ಪ್ರಚಾರ ಹಾಗೂ ಮಾರಾಟ ಮಳಿಗೆಗಳು ಇಲ್ಲದಿರುವುದು. ಜನವರಿ, ೨೦೧೨ರ 'ಹೊಸತು' ಪತ್ರಿಕೆಯಲ್ಲಿ, ಹಂಪಿ ವಿಶ್ವವಿದ್ಯಾಲಯವು ಬೆಂಗಳೂರಿನಲ್ಲಿ ಮಾರಾಟ ಮಳಿಗೆ ತೆರೆಯುವ ಬಗ್ಗೆ ಮಾಹಿತಿ ಇದೆ. ಆದ್ದರಿಂದ ಈಗ ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳು ಬೆಂಗಳೂರು ಮತ್ತು ಇತರ ಊರುಗಳಲ್ಲಿ ಮಳಿಗೆಗಳನ್ನು ತೆರೆಯಬೇಕು. ಆ ಕುರಿತು ಪ್ರಚಾರವನ್ನೂ ಸಹ ಮಾಡಬೇಕು. ಹೀಗೆ ಮಾಡುವುದರಿಂದ ಅಮೂಲ್ಯ ಪುಸ್ತಕಗಳು ಜನಸಾಮಾನ್ಯರಿಗೆ ಮತ್ತು ವಿಶೇಷ ಅಧ್ಯಯನ ಮಾಡಲು ಇಷ್ಟಪಡುವ ಎಲ್ಲರಿಗೂ ದೊರೆಯುವಂತಾಗುತ್ತದೆ. ಈ ಕೆಲಸವನ್ನು ಎಲ್ಲ ಪ್ರಸಾರಾಂಗಗಳು ಮಾಡಬೇಕು.

ಜನ ಕೊಳ್ಳುತ್ತಾರೆ ಮತ್ತು ಓದುತ್ತಾರೆ ಎನ್ನುವುದಕ್ಕೆ ಬೆಂಗಳೂರಿನಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನದಲ್ಲಿ ೧೦ ಕೋಟಿ ರೂಪಾಯಿಯ ಮೊತ್ತದ ಪುಸ್ತಕ ಮಾರಾಟ ಆಗಿರುವುದೇ ಉತ್ತಮ ನಿದರ್ಶನ. ಈ ಬಗ್ಗೆ ಸಂಬಂಧಪಟ್ಟವರು ದಯವಿಟ್ಟು ಗಮನ ಹರಿಸಲಿ.

ರಾಣೇಬೆನ್ನೂರು **ಎ. ಸಿ. ಹಿರೇ ಒಡೆಯರ**

# ರಾಜಕೀಯ ಇಸ್ಲಾಂನ ಧೋರಣೆ



ಚರಿತ್ರೆಯಲ್ಲಿ ಯಾವುಯಾವುದೋ ಕಾರಣಕ್ಕೆ ಕೆಲವು ವ್ಯಕ್ತಿಗಳು, ಘಟನೆಗಳು ಮತ್ತು ಗ್ರಂಥಗಳು ಪವಿತ್ರ ಎನಿಸಿ ಕೊಂಡಿವೆ. ಅವನ್ನು ಹಾಗೆ ಎಣಿಸದೆ ತರ್ಕದ ಮೂಸೆಗೆ ಒಡ್ಡುವುದನ್ನು 'ಪಾಷಂಡಿತನ' ಎಂದು ಕರೆದಿದ್ದಾರೆ. ವಿಶ್ವದ ಎಲ್ಲ ಮತಧರ್ಮಗಳೂ ಇದನ್ನು ಖಂಡಿಸಿವೆ. ಕೆಲವೊಮ್ಮೆ ಪಾಷಂಡಿಗಳಿಗೆ ಘೋರ ಶಿಕ್ಷೆಯನ್ನು ವಿಧಿಸಲಾಗಿದೆ, ತನ್ಮೂಲಕ 'ಪವಿತ್ರತೆ' ರಕ್ಷಣೆಗೆ ಪಾತ್ರವಾಗಿದೆ. ಪ್ರಶ್ನಿಸಿದರೆ ಮತಧರ್ಮಗಳ ನೂರಾರು ನಂಬಿಕೆಗಳು ಹುಸಿಯಾಗಿ ತೋರುವುದು ನಿಶ್ಚಯವಾದ್ದರಿಂದ ಅದರ ಪಾವಿತ್ರ್ಯದ ರಕ್ಷಣೆಗೆ ಹಿಂಸಾಮಾರ್ಗವನ್ನು ಅವಲಂಬಿಸುವುದು ಅನಿವಾರ್ಯ. ದುರಂತವೆಂದರೆ ಹೀಗೆ ಹಿಂಸೆಯನ್ನು ಆಯುಧವಾಗಿಸಿಕೊಳ್ಳುವ ಮತಧರ್ಮಗಳು ಅಹಿಂಸಾತತ್ವವನ್ನು ಬೋಧಿಸಿರುವುದೂ ಉಂಟು.

ಪಾಕಿಸ್ತಾನದ ಪೀನಲ್ ಕೋಡ್‌ನ ೨೯೫-ಸಿ ಎಂಬ ನಿಬಂಧದಲ್ಲಿ ಪಾಷಂಡಿತನಕ್ಕೆ ಮರಣದಂಡನೆ ವಿಧಿಸಬೇಕೆಂಬ ನಿಯಮವಿದೆಯಂತೆ. ಅದರಡಿ ಡಾ|| ಯೂನಿಸ್ ಶೇಕ್ ಎಂಬ ವೈದ್ಯ ಮತ್ತು ವೈದ್ಯಕೀಯ ಪ್ರಾಧ್ಯಾಪಕನಿಗೆ ೧೮.೮.೨೦೦೧ರಂದು ಮರಣದಂಡನೆ ವಿಧಿಸ ಲಾಗಿದ್ದಿತಂತೆ. ಅವನ ಅಪರಾಧ ಇದು: ತರಗತಿಯಲ್ಲಿ ಬೋಧನೆ ಮಾಡುತ್ತಿದ್ದಾಗ ಏನೋ ಪ್ರಸಂಗ ಬಂದು ಅವನು ಹೇಳಿದ್ದನಂತೆ ''ಪ್ರವಾದಿ ಮೊಹಮ್ಮದ್ ಮುಸಲ್ಮಾನನಾಗಿರಲಿಲ್ಲ, ತನ್ನ ೪೦ನೆಯ ವಯಸ್ಸಿನಲ್ಲಿ ಇಸ್ಲಾಂಅನ್ನು ಕಂಡುಹಿಡಿದನಂತರವಷ್ಟೇ ಆತ ಮುಸಲ್ಮಾನನಾದದ್ದು'', ಎಂದು. ಈ ಮಾತು ಪಾಷಂಡಿಯ ಮಾತೆನಿಸಿಕೊಳ್ಳಲು ಅರ್ಹವಲ್ಲ, ಏಕೆಂದರೆ ಅದು ಹೇಳುತ್ತಿರುವುದು ಒಂದು ಇತಿಹಾಸದ ಸಂಗತಿಯನ್ನಷ್ಟೆ. ಒಂದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಯಾರಾದರೂ ''ಶ್ರೀರಾಮಚಂದ್ರ ಚಾರಿತ್ರಿಕ ವ್ಯಕ್ತಿಯಲ್ಲ, ಅವನೊಂದು ಮಹಾಕಾವ್ಯದ ಪಾತ್ರ'' ಎಂದು ಹೇಳಿದರೆ ಪಾಷಂಡಿಯಾಗುತ್ತಾನೆಯೆ? ಬೇಕಾದವರು ರಾಮನನ್ನು ಪೂಜಿಸಲು ಅಡ್ಡಿಯಿಲ್ಲದಿರುವಂತೆ ಅವನನ್ನು ಪೂಜಿಸದಿರಲು ಸಹ ಅಡ್ಡಿ ಇರುವುದಿಲ್ಲ. ಮೊಹಮ್ಮದನ ಬಗ್ಗೆ ಅಂತಹ ನಿಲುವು ತಾಳಕೂಡದೆಂದು ಇಸ್ಲಾಂನ ಕಟ್ಟಾಪಂಥೀಯರು ಉಗ್ರವಾಗಿ ಪ್ರತಿಪಾದಿಸುತ್ತಾರೆಂದು ಕಂಡುಬಂದಿದೆ. ಇಂಗ್ಲೆಂಡಿನ ಒಂದು ಮುಸಲ್ಮಾನ ಕುಟುಂಬದವನೊಬ್ಬ ಹಳೆಯ ಪುಸ್ತಕವೊಂದನ್ನು ಬೆಂಕಿಗೆ ಹಾಕುವವನಿದ್ದನಂತೆ; ಒಬ್ಬ ಮೌಲ್ವಿ ಅದನ್ನು ತಡೆದನಂತೆ. ಆ ಪುಸ್ತಕದಲ್ಲೆಲ್ಲಾದರೂ ಪ್ರವಾದಿ ಮೊಹಮ್ಮದನ ಹೆಸರು ಅಚ್ಚಾಗಿರಬಹುದಲ್ಲಾ, ಎಂಬ ಕಾರಣಕ್ಕೆ!

ಅರಬ್ ರಾಷ್ಟ್ರಗಳಲ್ಲಿ ಕಳೆದ ಎರಡು-ಮೂರು ವರ್ಷಗಳಿಂದ ಅಸ್ತಿತ್ವದಲ್ಲಿದ್ದ ವ್ಯವಸ್ಥೆಗಳ ಪರಿವರ್ತನೆಯ ಹಾದಿಯಲ್ಲಿ ಜನ ಒಂದು ರೀತಿಯ ಹರಿಕಾರರಾಗಿದ್ದಾರೆ. ಆ ಹಿನ್ನೆಲೆಯಲ್ಲಿ ಷಾಜಹಾನ್ ಮಾದಂಪಟ್ ಎಂಬ ಚಿಂತಕ ಈಚಿನ ಒಂದು ಲೇಖನದಲ್ಲಿ ಇಸ್ಲಾಂ ಮತ್ತು ಪ್ರಜಾಪ್ರಭುತ್ವಗಳ ನಡುವೆ ಸಾಮರಸ್ಯವುಂಟೆ, ಇಸ್ಲಾಂ ಪ್ರಜಾಪ್ರಭುತ್ವದ ಮಾದರಿಯನ್ನು ಅಂಗೀಕರಿಸಬಹುದೆ, ಎಂಬಿತ್ಯಾದಿ ಪ್ರಶ್ನೆಗಳನ್ನು ವಿಶ್ಲೇಷಿಸಿದ್ದಾರೆ. ಈ ಮಲಯಾಳಿ ಲೇಖಕ ಈಗಾಗಲೆ ಇಂತಹ ವಿಮರ್ಶಾತ್ಮಕ ಗ್ರಂಥಗಳನೇಕವನ್ನು ಇಂಗ್ಲಿಷ್ ಮತ್ತು ಅರಾಬಿಕ್ ಭಾಷೆಗಳಲ್ಲೂ ಪ್ರಕಟಿಸಿದ್ದಾರೆಂದು ಹೇಳಲಾಗಿದೆ. ಮೂಲತಃ ಧರ್ಮಶ್ರದ್ಧೆಯಾಗಿ ಇಸ್ಲಾಂ ಹಾಗೂ ಒಂದು ರಾಜಕೀಯ ಸಿದ್ಧಾಂತವಾಗಿ ಇಸ್ಲಾಂ, ಹೀಗೆ ಎರಡನ್ನೂ ಒಂದಾಗಿಸಿ ನೋಡುವ ಪರಿಪಾಠವಿದೆ. ಹಾಗೆ ಮಾಡಿದಾಗ ರಾಜ್ಯಪ್ರಭುತ್ವವು ಶರಿಯಾ ಆಧರಿತ ಸೂತ್ರಗಳಿಗೆ ಬದ್ಧವಾಗಿರಬೇಕೆಂಬ ಉದ್ದೇಶದಿಂದ ಕಾನೂನು ರಚನೆಗೊಳ್ಳುತ್ತದೆ. ಅಲ್ಲಿ ಮತಾಂಧ ಜಡ್ಡುತನದ ಪ್ರವೇಶ ಅನಿವಾರ್ಯವಾಗುವುದಿಲ್ಲವೆ, ಮತಧರ್ಮ ನಿರಪೇಕ್ಷತೆ ಅಸಾಧ್ಯವಾಗುವುದಿಲ್ಲವೆ, ಎಂಬ ಪ್ರಶ್ನೆಗಳಿವೆ. ಟ್ಯುನೀಷಿಯಾದ ಇಸ್ಲಾಂ ಚಿಂತಕ ರಶೀದ್ ಘನ್ನೂಶಿ ಈಚೆಗೆ ತನ್ನ ದೇಶದ ಪ್ರತಿಭಟನೆಗಳ ನಾಯಕನಾಗಿ ಅಲ್‌ನಾಹ್ದ ಚಳುವಳಿಯ ಯಶಸ್ಸಿಗೆ ಒಬ್ಬ ಕಾರಣಕರ್ತನಾಗಿದ್ದ. ಆತನ ಪ್ರಕಾರ ಇಸ್ಲಾಂ ಪ್ರಭುತ್ವದಡಿ ನಾಸ್ತಿಕತೆಗೆ ಅವಕಾಶವಿರಬೇಕು, ಆದರೆ ಇಸ್ಲಾಂಅನ್ನು ತ್ಯಜಿಸಿ ಬಾಳಲು ಅವಕಾಶವಿರಕೂಡದು. ವಾಸ್ತವಿಕವಾಗಿ ಇಸ್ಲಾಂ ಮತ್ತು ಬಹುಮುಖೀ ತತ್ತ್ವಗಳು ಏಕತ್ರ ಇರಬಲ್ಲುವೇ, ಎಂಬ ಸೈದ್ಧಾಂತಿಕ ಪ್ರಶ್ನೆಯನ್ನು ಅನೇಕರು ಆಗಾಗ್ಗೆ ಎತ್ತುತ್ತಲೇ ಬಂದಿದ್ದಾರೆ. ಇಸ್ಲಾಂ ಪ್ರಭುತ್ವವನ್ನು ಸ್ಥಾಪಿಸುವ ಕರ್ತವ್ಯವನ್ನು ವಿಧಿಸುವ ಇಸ್ಲಾಂ ಮತಧರ್ಮವು ಬಹುತ್ವಕ್ಕೆ ಮನ್ನಣೆ ನೀಡದಿದ್ದಾಗ ಟ್ಯುನೀಷಿಯಾದ ಘನ್ನೂಶಿ ಹೇಳುವ ಮಾತಿಗೆ ಎಷ್ಟು ಬೆಲೆ ಇದ್ದೀತು, ಎಂದು ಇಂದಿನ ಕೆಲವು ವ್ಯಾಖ್ಯಾನಕಾರರು ಆಕ್ಷೇಪವೆತ್ತಿದ್ದಾರೆ. ಅಬ್ದ್-ಅಲ್-ಜಬ್ಬಾರ್ ದಾನೇರ್ ಎಂಬಾತ ತನ್ನ ಗ್ರಂಥದಲ್ಲಿ ಪ್ರಜಾಪ್ರಭುತ್ವವು ಇಸ್ಲಾಂಅನ್ನು ಸಂಪೂರ್ಣವಾಗಿ ಕುಲಗೆಡಿಸುತ್ತದೆಂದು ಆಕ್ಷೇಪಿಸಿ, ಖೊಮೇನಿ ನೇತೃತ್ವದಲ್ಲಿ ಇರಾನಿನ ಷಾ ಪತನಗೊಂಡಿದ್ದಕ್ಕೆ ವಿಷಾದಿಸಿದ್ದಾನೆ. ಇದಕ್ಕೆ ಭಿನ್ನವಾಗಿ ಕೆ. ಜಿ. ಸೈಯಿದೀನ್ ಇಸ್ಲಾಂನಲ್ಲಿ ಮುಕ್ತಚಿಂತನೆಗೆ ಅವಕಾಶವಿದೆಯೆಂದು ವಾದಿಸಿ, ಅದು ಬೇರೆ ಬೇರೆ ರಾಜಕೀಯ ಸನ್ನಿವೇಶಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಅಳವಡಿಸಿಕೊಳ್ಳುತ್ತದೆಂದು ಪ್ರತಿಪಾದಿಸಿದ್ದಾರೆ. ಆಧುನಿಕತೆಯು ಇಸ್ಲಾಂಗೆ ಮಾರಕವಲ್ಲವೆಂಬುದು ಅವರ ನಿಲುವು.

**ಜಿ. ರಾಮಕೃಷ್ಣ**



ಇಸ್ಲಾಂ ಮತಗ್ರಂಥಗಳಲ್ಲಿ ಉಕ್ತವಾಗಿರುವುದಕ್ಕೂ ಇಸ್ಲಾಮಿನ ಹೆಸರಲ್ಲಿ ರಾಜಕೀಯ ಕ್ರಿಯೆಯಲ್ಲಿ ತೊಡಗುವ ಕೆಲವು ಬಣಗಳ ನಿಲುವಿಗೂ ಬೇಕಾದಷ್ಟು ವ್ಯತ್ಯಾಸವಿದೆ. ಇದು ಬೇರೆ ಮತಧರ್ಮಗಳ ಬಗೆಗೂ ಅನ್ವಯವಾಗುವ ಸತ್ಯ. ಇಸ್ಲಾಮಿ ಬಣಗಳು ತಮ್ಮ ನಿರ್ದಿಷ್ಟ ಪ್ರಜಾಪ್ರಭುತ್ವವಾದಿ ವ್ಯವಸ್ಥೆಯ ಬಗೆಗಿನ ಕಲ್ಪನೆಯನ್ನು ಸಮಗ್ರವಾಗಿ ಮಂಡಿಸಿದ್ದು ಅಪರೂಪ. ಎಲ್ಲರೂ ಸೋದರರು, ಎಲ್ಲರೂ ಸಮಾನರು, ಎಂಬ ಸಾಮಾನ್ಯ ಹೇಳಿಕೆಯನ್ನು ಬಿಟ್ಟರೆ ಇಸ್ಲಾಂ ಪ್ರಕಾರ ಪ್ರಜಾಪ್ರಭುತ್ವ ಪ್ರಣಾಲಿಕೆ ಎಂದರೆ ಇದು, ಎಂದು ದೃಢವಾಗಿ ಹೇಳುವ ರಾಜಕೀಯ ದಾಖಲೆಗಳಿಲ್ಲ. ಕಟ್ಟಾ ಹಿಂದು ಸಂಪ್ರದಾಯವಾದಿಗಳಂತೆ ಇಸ್ಲಾಂ ಸಹ ಹಿಂದೆಂದೋ ಎಲ್ಲಾ ಅದ್ಭುತವಾಗಿತ್ತು, ಅದು ವಿನಾಶವಾಗುತ್ತಾ ಬಂದಿದೆ, ಅದೇ ಇಂದಿನ ವಿರೋಧಗಳಿಗೆ ಕಾರಣ ಎಂದು ಹೇಳುತ್ತಾ ಸಾಗಿದೆ. ಹಾಗೆ ನೋಡಿದರೆ ಇಸ್ಲಾಂನ ನಂಬಿಕೆ ಮತ್ತು ಪ್ರಜಾಪ್ರಭುತ್ವದ ಮೌಲ್ಯಗಳು ಸದಾ ವಿರೋಧಿ ನೆಲೆಯಲ್ಲಿ ಉಳಿಯುವ ಅಗತ್ಯವಿಲ್ಲ. ಪ್ರವಾದಿಯ ಕಾಲದಲ್ಲಿ ಮುಂದಿಡಲಾದ ಶುರಾ (ಆಂತರಿಕವಾಗಿ ಪರಸ್ಪರ ವಿಚಾರ ವಿನಿಮಯ), ನ್ಯಾಯದ ಮೂಲಸೂತ್ರಗಳು, ನಂಬಿಕೆಯನ್ನು ಬಲವಂತವಾಗಿ ಇತರರ ಮೇಲೆ ಹೇರುವುದರ ನಿಷೇಧ, ಇತ್ತಿಹಾದ್ (ಸ್ವತಂತ್ರ ಅರ್ಥೈಸುವಿಕೆಯಿಂದ ಲಭ್ಯವಾಗುವ ತೀರ್ಮಾನ), ಇವೆಲ್ಲಾ ಪ್ರಜಾಪ್ರಭುತ್ವಕ್ಕೆ ಮಾನ್ಯವಲ್ಲದ ಮೌಲ್ಯಗಳೇನಲ್ಲ. ಚರಿತ್ರೆಯಲ್ಲಿ ಇಸ್ಲಾಂ ಆಡಳಿತವು ಆಗಿಂದಾಗ್ಗೆ ಸನ್ನಿವೇಶಗಳಿಗೆ ತಕ್ಕಂತೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಭಿನ್ನತೆಯನ್ನು ಅಂಗೀಕರಿಸಿರುವುದುಂಟು.

ಸುಮಾರು ಹತ್ತನೆಯ ಶತಮಾನದಲ್ಲಿ ಒಬ್ಬ ವ್ಯಕ್ತಿಯನ್ನು 'ಇಸ್ಲಾಮಿ' ಎಂದು ಕರೆದಿದ್ದರೆ ಅದರರ್ಥ 'ಇಸ್ಲಾಂ ಪಂಥದ ಒಬ್ಬ ಬುದ್ಧಿಜೀವಿ' ಎಂದಷ್ಟೇ ಇರುತ್ತಿತ್ತು; ಆದರೆ ಇಂದು ಆ ಪದಪ್ರಯೋಗವು ಬಂಡವಾಳಶಾಹಿಯ ಸಮರ್ಥಕ, ಕಮ್ಯುನಿಸ್ಟ್ ಚಿಂತಕ, ಇತ್ಯಾದಿಗಳಿಗೆ ಪರ್ಯಾಯವಾಗಿ ಒಂದು ಖಚಿತ ಸಿದ್ಧಾಂತದ ಕಟ್ಟಾಳು ಎಂಬರ್ಥ ನೀಡುತ್ತದೆ. ಅಂದರೆ, ಅದೂ ರಾಜಕೀಯ ವ್ಯವಸ್ಥೆಯೊಂದಕ್ಕೆ ಮೂಲಸಾಮಗ್ರಿ ಒದಗಿಸುವಂತಹ ಆಶಯವನ್ನು ಹೊತ್ತಿದೆ. ಇಸ್ಲಾಮಿನ ಆದರ್ಶಗಳಿಗೆ ಸರಿಹೊಂದುವಂತೆ ಪ್ರಭುತ್ವವೊಂದನ್ನು ಸ್ಥಾಪಿಸಿಕೊಂಡರೆ ಸಮಾಜದ ಸಮಗ್ರ ಪರಿವರ್ತನೆ ಸಿದ್ಧಿಸುತ್ತದೆಂದು ಅದರ ಅರ್ಥ. ಮೊಹಮ್ಮದರು ಸುವ್ಯವಸ್ಥಿತ ಆದರ್ಶ ಪ್ರಭುತ್ವವನ್ನು ಸ್ಥಾಪಿಸಿದ್ದರು, ಅದು ಕ್ರಮೇಣ ಕಲುಷಿತಗೊಂಡಿತು, ಅದನ್ನು ಮರುಸ್ಥಾಪಿಸುವುದು ಇಸ್ಲಾಂನ ಪುನರುಜ್ಜೀವನ, ಎಂಬುದು ಇದರ ಇಂಗಿತ. ರಾಮರಾಜ್ಯದ ಕಲ್ಪನೆಗೆ ಸಮನಾದ್ದು ಇದು. ಎರಡು ಸಂದರ್ಭಗಳಿಗೂ ಒಂದು ಪ್ರಶ್ನೆ ಸುಸಂಗತ : ಅಂತಹ ಮಹಾಮಹಿಮರು ಕಲುಷಿತವಾಗುವಂತಹ ಅಥವಾ ಹಾದಿತಪ್ಪಿ ಪೇಲವವಾಗುವಂತಹ ಪ್ರಭುತ್ವವನ್ನು ಸ್ಥಾಪಿಸಿದ ಅಲ್ಪಸಾಮಾನ್ಯರಷ್ಟೇ ಏನು ?

ಇನ್ನು ಮರುಸ್ಥಾಪನೆಯ ಪ್ರಶ್ನೆ: ಅದನ್ನು ಹೇಗೆ ಮಾಡುವುದು ? ಪ್ರೇರೇಪಿಸುವುದರಿಂದಲೋ ಅಥವಾ ಬಲವಂತವಾಗಿಯೋ ? ಅದರ ಮಹತ್ವದ ಅರಿವನ್ನುಂಟುಮಾಡಲು ಮಾಡಿದ ಪ್ರಯತ್ನವೆಲ್ಲಾ ವ್ಯರ್ಥವಾಗಿಹೋಗಿದೆ, ಆದ್ದರಿಂದ ಈಗ ಅಧಿಕಾರದ ಚಲಾವಣೆ (ಹಕೀಮಿಯ್ಯಾ) ಅಗತ್ಯವಾಗಿದೆ, ಎಂಬುದೊಂದು ವಾದ. ಇದು ಬಜರಂಗದಳ ಮತ್ತು ಶ್ರೀರಾಮಸೇನೆಗಳ ತದ್ರೂಪ ಎನ್ನಬಹುದು. ಅಧಿಕಾರ ಚಲಾಯಿಸುವವರು ಹುಲುಮಾನವರಾದ ನಾವಲ್ಲ. ಸ್ವತಃ 'ಅಲ್ಲಾ' ಅದನ್ನು ಮಾಡುತ್ತಾನೆ, ಆಗ ಇಹದಲ್ಲಿ ನ್ಯಾಯ ಮತ್ತು ಪರದಲ್ಲಿ ಮೋಕ್ಷ ಗಟ್ಟಿಯಾಗುತ್ತವೆ, ಸುಖೀಸಾಮ್ರಾಜ್ಯ ನಿರ್ಮಾಣಗೊಳ್ಳುತ್ತದೆ. ಖ್ಯಾತ ಇಸ್ಲಾಮಿ ನಾಯಕ ಮೌದೂದಿ ಹೇಳಿದ್ದಂತೆ ''ಮಾನವ ಸಂಬಂಧಗಳು ಹೇಗೆ ಹೆಣೆದುಕೊಂಡಿವೆಯೆಂದರೆ ಯಾವ ಪ್ರಭುತ್ವಕ್ಕೂ ಸಂಪೂರ್ಣ ಕ್ರಿಯಾ ಸ್ವಾತಂತ್ರ್ಯ ಸಾಧ್ಯವಿಲ್ಲ; ಏಕೆಂದರೆ ತನ್ನ ನಿಯಮಗಳು ನೆರೆರಾಜ್ಯದ ನಿಯಮಗಳಿಂದ ಭಿನ್ನವಾಗಿದ್ದಲ್ಲಿ ಸ್ವಾತಂತ್ರ್ಯ ಮೊಟಕುಗೊಳ್ಳುತ್ತದೆ. ಆದ್ದರಿಂದ ಎಲ್ಲೋ ಒಂದು ಕಡೆ ಇಸ್ಲಾಮಿ ಪ್ರಭುತ್ವ ಬಂದರೆ ಸಾಲದು. (ಟ್ರಾಟ್‌ಸ್ಕಿಯ 'ಒಂದು ದೇಶದಲ್ಲಿ ಸಮಾಜವಾದ ಅಸಾಧ್ಯ' ಎಂಬ ಹೇಳಿಕೆಯ ನೆನಪಾಗುತ್ತದೆಯೆ ?) ಒಂದು ಪ್ರಭುತ್ವವು ಇನ್ನೊಂದು ಅವತರಿಸುವಂತೆ ಹಿಗ್ಗುತ್ತಿರಬೇಕು. ಅದರಿಂದಲೇ ವಿಮೋಚನೆ ಸಾಧ್ಯವೆಂಬ ತಿಳಿವಳಿಕೆಯ ಪ್ರಚಾರವು ಇದಕ್ಕೆ ಒಂದು ಸಾಧನ; ಪ್ರಾಬಲ್ಯವಿದ್ದರೆ ಇಸ್ಲಾಮಿಯಲ್ಲದ ಪ್ರಭುತ್ವವನ್ನು ನಾಶಗೊಳಿಸುವುದು ಇನ್ನೊಂದು ಸಾಧನ.'' (ಬುಷ್ ಮತ್ತು ಒಬಾಮ ಪಾಲಿಸುವ ನೀತಿ ಇದೇ ಅಲ್ಲವೆ ?)

ಇಸ್ಲಾಮಿ ಚಿಂತನಾಮಾರ್ಗದಲ್ಲಿ 'ಇಸ್ಲಾಮಿ ಪ್ರಭುತ್ವ' ಎಂಬುದರ ಎರಡು ವ್ಯಾಖ್ಯಾನಗಳಿವೆ : ಒಂದು ಸಂಧಾನರೂಪದ್ದು. ಇದರಲ್ಲಿ ನಾಗರಿಕ ಸಮಾಜವನ್ನು ಇಡಿಯಾಗಿ 'ಶ್ರದ್ಧೆಯಿಲ್ಲದವರು' (ಕುಫ್ರ್) ಎನ್ನುವುದಿಲ್ಲ, ಅಥವಾ ಸಂಪೂರ್ಣವಾಗಿ ಅನೈತಿಕ (ಜಹಿಲಿಯ್ಯಾ) ಎಂದು ಜರಿಯುವುದಿಲ್ಲ. ಅಲ್ಲಿ ಇಸ್ಲಾಮಿ ಆಡಳಿತಗಾರನು (ಕಲೀಫ್, ಇಮಾಂ, ಇತ್ಯಾದಿ) ಜನರ ಅನುಮೋದನೆ ಪಡೆದಿರುವ ನಾಗರಿಕ ನಾಯಕ. ಅದನ್ನು 'ಅಹಲ್ ಅಲ್ ಹಾಲ್ ವಲ್ ಅಕ್ದ್' ಎಂಬುದರಿಂದ ಸೂಚಿಸಲಾಗುತ್ತದೆ. ಟ್ಯುನೀಷಿಯಾದ ಘನ್ನೂಶಿಯಂಥವರು ಈ ಪಂಥಕ್ಕೆ ಸೇರುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ ಮೌದೂದಿಯಂಥವರು ಇಸ್ಲಾಮಿ ಆಡಳಿತಗಾರನನ್ನು ದೈವದ ಪ್ರತಿನಿಧಿಯೆಂದು ಬಗೆದು ಅವನಿಗೆ ದೈವತ್ವದ ಆರೋಪ ಮಾಡುತ್ತಾರೆ. ಅವನಿಗೆ 'ಶುರಾ' (ವಿಚಾರ ವಿನಿಮಯ ಪ್ರಕ್ರಿಯೆ) ಕೇವಲ ಗೌಣ ಅಥವಾ ಔಪಚಾರಿಕ, ಏಕೆಂದರೆ ಅವನು ಸ್ವತಃ ದೈವದಿಂದಾಗಿಯೇ ಅಧಿಕಾರ ಹೊಂದಿದ್ದಾನೆ. (ನಾವಿಷ್ಣುಃ ಪೃಥಿವೀಪತಿಃ ಎಂಬ ಮಾದರಿಯಲ್ಲಿ; ವಿಷ್ಣುವಿನ ಅಂಶವಿಲ್ಲದವನು ಹೇಗೂ



ದೊರೆಯಾಗುವುದಿಲ್ಲವಾದ್ದರಿಂದ ರಾಜನು ವಿಷ್ಣು ಸಮಾನ). ಈ ಎರಡು ಬಗೆಗಳಲ್ಲಿ ಇಸ್ಲಾಮಿ ಬಣಗಳು ಸಾಮಾನ್ಯವಾಗಿ ಮಾನ್ಯಮಾಡುವುದು ಮೊದಲನೆಯದನ್ನು, ಜನರ ಅನುಮೋದನೆಯಿಂದ ಇಸ್ಲಾಂ ಪಂಥ ಆಳ್ವಿಕೆಗೆ ಬರಬೇಕೆಂಬುದನ್ನು. ಇದನ್ನು ಬೇರೊಂದು ಪರಿಭಾಷೆಯಲ್ಲಿ ಹೇಳುವುದಾದರೆ, ಒಂದು ಬಣವು ತೀವ್ರಗಾಮಿಗಳದ್ದು, ಇನ್ನೊಂದು ಮೃದುಗಾಮಿಗಳದ್ದು. ತೀವ್ರಗಾಮಿಯು ಹಿಂಸೆಯ ಆರಾಧಕನೆಂದು ಹೇಳಿಬಿಡುವುದು ಅತಿಸರಳೀಕರಣವಾಗುತ್ತದೆ. ಏಕೆಂದರೆ 'ಹಿಂಸೆ' ಎಂಬುದರ ವ್ಯಾಪ್ತಿ ಸೀಮಿತವಲ್ಲ. ಮಾರಕಾಯುಧ ಬಳಸಿ ಕೊಲ್ಲದೆಯೂ ಜನರನ್ನು ಹಿಂಸಿಸಲು ಅಗಾಧ ಸಾಧ್ಯತೆಗಳಿವೆ; ಅಸ್ಪೃಶ್ಯತೆಯ ಆಚರಣೆ ಅದಕ್ಕೊಂದು ಚಿಕ್ಕ ಉದಾಹರಣೆ. ಒಂದು ಜನರ ನಾಡನ್ನು ಕಿತ್ತುಕೊಂಡು ಅವರನ್ನು ನಿರ್ವಸಿತರನ್ನಾಗಿಸುವುದು ಇನ್ನೊಂದು ತೆರನ ಹಿಂಸೆ. ಪ್ಯಾಲೆಸ್ಟೈನ್ ಅದಕ್ಕೊಂದು ಉದಾಹರಣೆ. ದಕ್ಷಿಣ ಆಫ್ರಿಕದಲ್ಲಿ ಅಮೆರಿಕಾದ ಆಶೀರ್ವಾದದೊಂದಿಗೆ ಜಾರಿಯಲ್ಲಿದ್ದ ವರ್ಣವಿದ್ವೇಷಿ ನೀತಿಯು ಮತ್ತೊಂದು ಉದಾಹರಣೆ. ಪಾಸ್ಕೊ ಕಂಪನಿಗೆ ಒಡಿಶಾದಲ್ಲಿ ಕಬ್ಬಿಣದ ಅದಿರನ್ನು ದಾನಮಾಡಲು ಅಲ್ಲಿಯ ಹಳ್ಳಿಗಳ ಜನರನ್ನು ಓಡಿಸುವುದು ಮತ್ತೊಂದು ರೀತಿಯ ಹಿಂಸೆ. ''ನಾಗರಿಕ ಹಿಂಸೆ'' ಎಂದು ಕರೆದು ಇದಕ್ಕೆ ಗೌರವಯುತ ಸ್ಥಾನ ಕೊಡುವ ಕ್ರೂರಪದ್ಧತಿ ನಮ್ಮಲ್ಲಿದೆ.

ಇಸ್ಲಾಮಿ ಸಂಪ್ರದಾಯದಲ್ಲಿಯೂ ಸೌಮ್ಯವಾದ ಅಥವಾ ಮಿತವಾದ ವೆಂಬುದಿದೆ. ಅದರಲ್ಲಿ ರಾಜಕೀಯ ಇಸ್ಲಾಂನ ಆರಂಭಿಕ ದೆಸೆಯ ತೀವ್ರಗಾಮಿತ್ವ ಮತ್ತು ಪ್ರಜಾಪ್ರಭುತ್ವವಾದಿ ಬಹುಮುಖೀ ಸಂರಚನೆ ಎರಡೂ ಮಿಶ್ರಣಗೊಂಡಿರುತ್ತವೆ. ಘನ್ನೂಶಿ ಮತ್ತೆ ಇದಕ್ಕೊಂದು ಉದಾಹರಣೆ. ಒಂದರ್ಥದಲ್ಲಿ ಅದಕ್ಕೆ ಎರಡು ನಾಲಿಗೆಗಳು : ಒಂದು, ಮುಕ್ತ ಚಿಂತನೆಗೆ ಅನಿರ್ಬಂಧ; ಇನ್ನೊಂದು, ಇಸ್ಲಾಂ ಬಗ್ಗೆ ಅಪನಂಬಿಕೆಯು ದೇಶದ್ರೋಹ ಎಂದುಸುರುವ ಗಡಸುತನ. ಇದರಲ್ಲಿ ಬೆಣ್ಣೆಯಲ್ಲಿ ಕೂದಲು ತೆಗೆಯುವಂತಹ ಬುದ್ಧಿವಂತಿಕೆಯನ್ನು ತೋರ್ಪಡಿಸುವುದೂ ಉಂಟು. ಉದಾಹರಣೆಗೆ, ಈಜಿಪ್ಟಿನ ಒಬ್ಬ ಪತ್ರಕರ್ತ ಫಾಮಿ ಹುವ್ವೆದಿ. ಅವನಿಗೆ ಒಂದು ಬಗೆಯ ದ್ವಂದ್ವ ಕಾಡುತ್ತದೆ. ಇಸ್ಲಾಂನಲ್ಲಿ ನಂಬಿಕೆ ಕಳೆದುಕೊಂಡು ಅದನ್ನು ತ್ಯಜಿಸುವ ಹಂತಕ್ಕೆ ಯಾರಾದರೂ ಬಂದರೆ ಅವರಿಗೇನು ಶಿಕ್ಷೆ? ಆಲ್ಜೀರಿಯಾದ ಸ್ವಾತಂತ್ರ್ಯಕ್ಕಾಗಿ ಉಗ್ರ ಹೋರಾಟ ನಡೆದಾಗ ಹಲವರು ಇಂಥವರು ಹೊಮ್ಮಿದ್ದರು. ಅಂಥವರನ್ನು ಉಗ್ರ ಇಸ್ಲಾಮಿಗಳು ಕೊಚ್ಚಿಹಾಕಿದ್ದುದೂ ಉಂಟು. ಇದನ್ನು ಅರ್ಥೈಸುವಾಗ ಹುವ್ವೆದಿ ತಂತಿಯ ಮೇಲೆ ನಡಿಗೆ ಆರಂಭಿಸುತ್ತಾನೆ : ಅಂಥವರನ್ನು ಕೊಂದಿದ್ದು ಸರಿಯೇ ಇಲ್ಲವೇ ಎಂಬುದು ಅವನಿಗೆ ಪ್ರಸ್ತುತವಲ್ಲ. ಸ್ವತಂತ್ರ ಅಭಿಪ್ರಾಯ ಹೊಂದಿದವರನ್ನು ಕೊಲ್ಲಬಹುದೇ ಎಂಬ ಬಾಧೆಯೂ ಅವನಲ್ಲಿಲ್ಲ. ಯಾರು ಕೊಲ್ಲಬೇಕು ಎಂಬುದಷ್ಟೇ ಅವನಿಗೆ ಮುಖ್ಯ ! ಒಬ್ಬ ವ್ಯಕ್ತಿಯು ಪಾಷಂಡಿಯನ್ನು ಕೊಲ್ಲುವ ಹಕ್ಕನ್ನು ಹೊಂದಿಲ್ಲ, ಅದನ್ನು ನ್ಯಾಯಾಂಗವು ಮಾತ್ರ ಮಾಡಬಲ್ಲುದು, ಎನ್ನುವುದು ಅವನ ತೀರ್ಮಾನ ! ಅದಕ್ಕೆ ಸ್ವಲ್ಪ ರಿಯಾಯಿತಿ ಕೊಟ್ಟು ಆತ ಹೇಳುತ್ತಾನೆ, ಪಾಷಂಡಿಗಳಿಗೆ ಅತಿಕಠಿಣ ಶಿಕ್ಷೆ ನೀಡದಂತಹ ಸಂದರ್ಭಗಳೂ

ಇವೆ, ಎಂದು. ಅದೇಕೆ ಈ ರಿಯಾಯಿತಿ ಎಂದರೆ, 'ನಾಳೆ ಅವರು ಸರಿದಾರಿಗೆ ಬರುತ್ತಾರೆಂಬ ಭರವಸೆ ಇದೆಯಲ್ಲಾ, ಅದಕ್ಕೆ' ಎಂಬ ಘನವಾದ ಉತ್ತರ ಈತನದು.

ಪ್ರಜಾಪ್ರಭುತ್ವದ ಚಿಂತನೆಯಲ್ಲಿ ಈ ವಿಷಯಕ್ಕೆ ವಿಶಿಷ್ಟ ಸ್ಥಾನವಿದೆ, ಏಕೆಂದರೆ ಎಂ.ಎಫ್. ಹುಸೇನ್, ಸಲ್ಮಾನ್ ರಶ್ದೀ, ತಸ್ಲಿಮಾ ನಸ್ರೀನ್, ಮುಂತಾದವರ ಬಗೆಗೆ ಆಜ್ಞೆ ಹೊರಡಿಸುವ ಮೌಲ್ವಿಗಳು ನ್ಯಾಯಾಂಗ ಮತ್ತು ಮಾನವೀಯತೆಯನ್ನು ಮೀರಿ ನಿಲ್ಲುವಂತಹ ಸನ್ನಿವೇಶಗಳು ನಮ್ಮ ಕಣ್ಣಮುಂದಿವೆ. ಪಾಕಿಸ್ತಾನದಲ್ಲಿ ಲಾಹೋರಿನ ಒಂದು ಬಸ್ಸಿನಲ್ಲಿ ಪ್ರಯಾಣಿಸುತ್ತಿದ್ದ ಒಬ್ಬ ವೃದ್ಧ ಮಹಿಳೆ ಕುರಾನಿನ ಪ್ರತಿಯನ್ನು ನೆಲಕ್ಕೆ ಬೀಳಿಸಿದಳೆಂದು ಅವಳಿಗೆ ಕ್ರೂರವಾದ ಶಿಕ್ಷೆ ನೀಡಲಾಗಿದ್ದುದನ್ನು ಇಲ್ಲಿ ನೆನೆಯ ಬಹುದು. ಮತಧರ್ಮಗಳ ನಿರಂತರ ಕ್ರೌರ್ಯಕ್ಕೆ ಅದೊಂದು ವಿಕಟ ನಿರ್ದಶನ. ಷಾಜಹಾನ್ ಮಾದಂಪಟ್ ಇನ್ನೊಂದು ಉದಾಹರಣೆ ಕೊಟ್ಟಿದ್ದಾರೆ: ಡಾ|| ನಸ್ರ್ ಹಮೀದ್ ಅಬು ಜೈದ್ ಈಜಿಪ್ಟಿನ ಒಬ್ಬ ಖ್ಯಾತ ವಿದ್ವಾಂಸ. ಈಜಿಪ್ಟಿನ ನ್ಯಾಯಾಲಯವೊಂದು ಆತನನ್ನು ಪಾಷಂಡಿಯೆಂದು ಘೋಷಿಸಿತು. ಒಬ್ಬ ಮುಸಲ್ಮಾನ ಮಹಿಳೆಯು ಪಾಷಂಡಿಯೊಬ್ಬನ ಜೊತೆ ಜೀವಿಸಬಾರದು, ಆದ್ದರಿಂದ ಜೈದ್ ಆಕೆಯಿಂದ ವಿಚ್ಛೇದನವನ್ನು ಸಹ ಪಡೆಯಬೇಕೆಂದು ಅದೇ ನ್ಯಾಯಾಲಯ ಹೇಳಿತು. ಆತನ ಅಪರಾಧವೇನು? ಕುರಾನಿನ ಕೆಲವು ಭಾಗಗಳಿಗೆ ಸಾಮಾನ್ಯವಾಗಿ ಹೇಳಲಾಗುವ ಅರ್ಥದಿಂದ ಭಿನ್ನವಾದ ಅರ್ಥವನ್ನು ಅವನು ಕೊಟ್ಟಿದ್ದ, ಎಂಬುದು. ಅವನು ಪತ್ನಿಯೊಡನೆ ಹಾಲೆಂಡಿಗೆ ಪರಾರಿಯಾದ! ಅವನೇನೂ ಇಸ್ಲಾಂ ವಿರುದ್ಧ ಸಮರ ಸಾರಿದ್ದವನಲ್ಲ, ಅವನೊಬ್ಬ ಸಂಶೋಧಕ, ಅಷ್ಟೆ. ಪ್ರವಾದಿ ಮೊಹಮ್ಮದನಿಗೆ ನೀಡಲಾಯಿತೆನ್ನಲಾದ ಕುರಾನ್ ಒಂದು ಮನುಷ್ಯ ಭಾಷೆಯಾದ ಅರಾಬಿಕ್‌ನಲ್ಲಿದೆ, ಎಂದಷ್ಟೇ ಆತ ಹೇಳಿದ್ದು. ಮನುಷ್ಯ ಭಾಷೆಯಲ್ಲಿರುವ ಭಾಗಗಳ ನಿಶ್ಚಿತಾರ್ಥ ತಿಳಿಯಬಾರದೆ, ಎಂಬುದು ಅವನ ವಾದ. ಅಂದರೆ, ಯಾವುದೇ ಗ್ರಂಥದ ಅರ್ಥವೂ ಆಯಾಗ್ರಂಥದ ಚಾರಿತ್ರಿಕ ಹಿನ್ನೆಲೆಯಿಂದ ಹೊರಹೊಮ್ಮುತ್ತದೆ, ಎಂದು.



ಇದು ವೇದೋಪನಿಷತ್ತುಗಳಿಗೆ, ಟೋರಾಕ್ಕೆ, ಬೈಬಲ್‌ಗೆ, ಅವೆಸ್ತಾಕ್ಕೆ, ಎಲ್ಲದಕ್ಕೂ ಅನ್ವಯವಾಗುವ ಮಾತು.

ಇದರಲ್ಲಿ ಇನ್ನೊಂದು ಕಟು ವ್ಯಂಗ್ಯವಿದೆ. ಅದು ಏನೆಂದರೆ, ಈ ''ಪಾಷಂಡಿ'' ಜೈದ್ ಕುರಿತು ಹಿಂದೆ ಪ್ರಸ್ತಾಪಿಸಲಾದ ಹುವೈದಿ ಕೆಲವು ಲೇಖನಗಳನ್ನು ಬರೆದ. ಅವು ಜೈದ್ ಪರವೋ, ವಿರೋಧವಾಗಿಯೋ, ಎಂಬುದೇ ಸಂದಿಗ್ಧವಾಗಿತ್ತು. ಅವನು ತಥಾಕಥಿತ ಉದಾರವಾದಿ! ''ಬೆಂಕಿಯೊಡನೆ ಸರಸ ಬೇಡ'' ಎಂಬ ಶೀರ್ಷಿಕೆಯಲ್ಲಿ ಜೈದ್‌ಗೆ ಅವನು ಉಪದೇಶ ನೀಡಿದ್ದ. ಮತಧಾರ್ಮಿಕ ಶ್ರದ್ಧೆಯು ಟೀಕಾತ್ಮಕ ವ್ಯಾಖ್ಯಾನಗಳಿಗೆ ಗುರಿಯಾಗದಂತಹ ''ಸುರಕ್ಷಿತವಾದ ಪ್ರದೇಶ'' ಇರಬೇಕು, ಅದರ ಎಲ್ಲೆಯೊಳಕ್ಕೆ ಪ್ರವೇಶಿಸದೆ ಎಷ್ಟು ಟೀಕೆ ಸಾಧ್ಯವೋ ಅಷ್ಟನ್ನು ಮಾತ್ರ ಮಾಡಬೇಕು, ಎಂಬುದು ಅದರ ಸಾರ. ನಮ್ಮ ರಾಜ್ಯದ ನ್ಯಾಯಾಲಯಗಳು ಡಾ|| ಪಿ. ವಿ. ನಾರಾಯಣ, ಡಾ|| ಬಂಜಗೆರೆ ಜಯಪ್ರಕಾಶ್, ಮುಂತಾದವರಿಗೆ ನೀಡಿದ ಉಪದೇಶವೂ ಅದೇ: 'ಬಸವಣ್ಣನವರ ಬಗ್ಗೆ ಬೇಕಾದರೆ ಬರೆಯಿರಿ, ಆದರೆ ಭೀಮಣ್ಣ ಖಂಡ್ರೆಗೆ ಮುನಿಸು ಬಾರದಷ್ಟನ್ನು ಮಾತ್ರ ಬರೆಯಿರಿ', ಎಂದು. ಅಂತೆಯೇ ಭಗವದ್ಗೀತೆಯ ಬಗೆಗೂ ಬರೆಯಬಹುದು, ಆದರೆ ತಾರ್ಕಿಕ - ಐತಿಹಾಸಿಕ ವಿಶ್ಲೇಷಣೆಗೆ ಕೈಹಾಕಬಾರದೆಂಬುದು ಸಮಾಜ ಶೋಷಕ ಸ್ವಾಮಿಗಳೆಲ್ಲರ ನಿರೀಕ್ಷೆ.

ಈ ಹಿನ್ನೆಲೆಯಲ್ಲಿ ಇಸ್ಲಾಂ ಮತ್ತು ಪ್ರಜಾಪ್ರಭುತ್ವ ಹೊಂದಾಣಿಕೆಯಿಂದ ಇರಲು ಸಾಧ್ಯವೆ, ಎಂಬ ವಿವೇಚನೆಯನ್ನು ಹಲವರು ಮಾಡಿದ್ದಾರೆ. ಜಡ್ಡು ಮತಾಂಧತೆಯನ್ನು ದೂರೀಕರಿಸಿದ್ದ ಎಷ್ಟೋ ದೇಶಗಳು ಈಚಿನ ವರ್ಷಗಳಲ್ಲಿ ಮತ್ತೆ ಅದರ ತೆಕ್ಕೆಗೆ ಬಿದ್ದಿವೆ. ಆಲ್ಜೀರಿಯಾ, ಕಸೋವೋ, ದಕ್ಷಿಣ ಯೆಮೆನ್, ಇಂಡೋನೇಶ್ಯ, ಆಫ್ಘಾನಿಸ್ತಾನ, ಉಜ್ಬೆಕಿಸ್ತಾನ್, ಹೀಗೆ ಹಲವನ್ನು ಹೆಸರಿಸಬಹುದು. ಕೆಲವು ಇಸ್ಲಾಮಿ ಚಿಂತಕರು ಇಸ್ಲಾಂ ಮತ್ತು ಪ್ರಜಾಪ್ರಭುತ್ವ ಸಹಜವಾಗಿ ಜೊತೆಜೊತೆ ಹೋಗುವ ಘಟಕಗಳೆಂದು ಭಾವಿಸುತ್ತಾರೆ, ಆದರೆ ಜಿಹಾದಿ ಇಸ್ಲಾಂ ಇದನ್ನು ತಿರಸ್ಕರಿಸುತ್ತದೆ. ಏಕೆಂದರೆ, ಅವರಿಗೆ ಜನರು ಕನಿಷ್ಠ ಮತ್ತು ದೇವರು ಶ್ರೇಷ್ಠ. ಜಿಹಾದಿಗಳಾದರೂ ಇಸ್ಲಾಂ ಪ್ರಭುತ್ವದ ಸ್ಥಾಪನೆಯನ್ನು ಶಾಸನಗಳ ಮೂಲಕವೇ ಮಾಡಬೇಕಲ್ಲ; ಆದರೆ ಅದು ಪ್ರಜಾಪ್ರಭುತ್ವದ ಕಾರಣದಿಂದಲ್ಲವೆಂಬುದನ್ನು ಅವರು ಒತ್ತಿಹೇಳುತ್ತಾರೆ. ಶಾಸನ ಮಾಡಲಷ್ಟೆ ಅವರಿಗೆ ಪ್ರಜಾಪ್ರಭುತ್ವದ ಸಂಸ್ಥೆಗಳು ಬೇಕು, ಬೇರೆಯಂತೆ ಅವರ ಪ್ರಕಾರ ಪ್ರಜಾಪ್ರಭುತ್ವವೆಂದರೆ ಕೇವಲ ಆಳುವ ಜನರ ಬದಲಾವಣೆಗೆ ಒಂದು ಕ್ರಮ, ಅಷ್ಟೆ. ಆಳ್ವಿಕೆಯಲ್ಲಿ ಸಾಮಾಜಿಕ, ಆರ್ಥಿಕ ಪ್ರಶ್ನೆಗಳಿರುತ್ತವೆ; ಆದರೆ ಇಸ್ಲಾಂ ಇವೆಲ್ಲಕ್ಕೂ ತನ್ನದೇ ಆದ ಪದ್ಧತಿಯಲ್ಲಿ ಉತ್ತರ ಕೊಡುತ್ತದೆ, ಎಂಬುದು ಅವರ ಗ್ರಹಿಕೆ. ಆದರೆ ಇಸ್ಲಾಂ ಪ್ರಭುತ್ವವಿನ್ನೂ ಸ್ಥಾಪನೆಯಾಗಿಲ್ಲದಾಗ ಏನು ಮಾಡಬೇಕು? ಆ ಸಂದರ್ಭದಲ್ಲಿ ಪ್ರಜಾಪ್ರಭುತ್ವವನ್ನು ಸ್ವೀಕರಿಸಬಹುದು, ಇಸ್ಲಾಂ ಪ್ರಭುತ್ವ ಬರುವವರೆಗೆ ಅದು ಅಸ್ತಿತ್ವದಲ್ಲಿರಬಹುದು. ಒಂದು ಕಾನೂನು ಮಾನ್ಯ, ಇನ್ನೊಂದು ಮತಧರ್ಮ ಮಾನ್ಯ. ಎರಡನೆಯದು ಮೊದಲನೆಯದಕ್ಕಿಂತ ಉಚ್ಚ ಮಟ್ಟದ್ದು, ಅದನ್ನು ಪಡೆಯಲು ಹೆಣಗುವಾಗಷ್ಟೆ ಮೊದಲನೆಯದಕ್ಕೆ ಸ್ಥಾನವಿದೆ.

ಇದನ್ನೆಲ್ಲಾ ಕ್ರೋಡೀಕರಿಸಿ ಮುಹಮ್ಮದ್ ಅಸಾದ್ ಹೇಳುವ ಮಾತುಗಳಲ್ಲಿ ಹಿಂದು ಸಂಘ ಪರಿವಾರದ ಮಾತುಗಳ ಛಾಯೆಯನ್ನು ಗುರುತಿಸುವುದು ಸುಲಭ. ಪೋಲೆಂಡಿನ ಇವನು ಇಸ್ಲಾಂಗೆ ಮತಾಂತರ ಹೊಂದಿದ್ದವನಂತೆ. ಅವನ ಕೆಲವು ಮಾತುಗಳ ಸಾರ ಇದು: ''ಇಸ್ಲಾಂ ಪ್ರಭುತ್ವದಲ್ಲಿ ತಾರತಮ್ಯವಿರುತ್ತದೆ ಎಂಬುದು ವೃಥಾ ಹೇಳಿಕೆ, ಅಷ್ಟೆ. ಮುಸಲ್ಮಾನರು ಬಹುಸಂಖ್ಯಾತರಾಗಿರುವ ದೇಶಗಳಲ್ಲಿ ಸಹಜವಾಗಿ ಆಳ್ವಿಕೆ ಅವರದ್ದೇ. ಇಸ್ಲಾಂ ಪ್ರಭುತ್ವವೆನಿಸಿಕೊಳ್ಳಬೇಕಾದರೆ ಅಲ್ಲಿ ತಾರತಮ್ಯವಿರದಿರಲು ಹೇಗೆ ಸಾಧ್ಯ? ಕುರಾನ್ ಮತ್ತು ಸುನ್ನ ಏನನ್ನು ವಿಧಿಸಿವೆಯೋ ಅದೇ ಪ್ರಭುತ್ವದ ನಿರ್ದೇಶಕ ಸೂತ್ರ. ಹೀಗಿರುವಾಗ ಮುಸಲ್ಮಾನನಲ್ಲದವನು ಇಸ್ಲಾಂನ ಸೈದ್ಧಾಂತಿಕ ತಿರುಳನ್ನು ಹೇಗೆ ತಾನೆ ಆಡಳಿತದಲ್ಲಿ



ಅಳವಡಿಸಿಯಾನು? ಅದನ್ನು ನಿರೀಕ್ಷಿಸುವುದೇ ತಪ್ಪು. ಆದ್ದರಿಂದ ಅಲ್ಲಿ ಮುಸಲ್ಮಾನರು ಮಾತ್ರವೇ ಉನ್ನತ ಅಧಿಕಾರಿಗಳಾಗಬೇಕು, ಶಾಸಕರಾಗಬೇಕು. ಅದು ಕಾನೂನುರೀತ್ಯಾ ಅನಿವಾರ್ಯ. ಹೀಗಿರುವಾಗ ಉದಾರ ವಾದಿತನವೆಂಬುದು ತೀರಾ ಕೃತ್ರಿಮವಾಗಿಬಿಡುತ್ತದೆ. ಇಂಥ ದೇಶದಲ್ಲಿ ಹುಟ್ಟಿದವನೆಂಬ ಸಂಗತಿಯು ಪ್ರಮುಖವಲ್ಲ; ಇಂಥ ಮತಧರ್ಮಕ್ಕೆ ಸೇರಿದವನೆಂಬುದು ಪ್ರಮುಖ.'' ಇಲ್ಲೆಲ್ಲಾ 'ಇಸ್ಲಾಂ' ಬದಲು 'ಹಿಂದು' ಎಂದು ಓದಿಕೊಂಡರೆ ಅದು ಗೋಲ್ವಾಲ್ಕರ್ ಹೇಳಿದ್ದೇ ಎನ್ನುವಷ್ಟು ಸಾಮ್ಯವಿದೆ. ಮತಧರ್ಮದ ಜಡ್ಡುತನ ಎಲ್ಲೆಲ್ಲೂ ಒಂದೇ ಲಕ್ಷಣಗಳನ್ನು ಆವಾಹನೆ ಮಾಡಿಕೊಂಡಿರುತ್ತದೆ. ಜಡ್ಡುತನ ಮತ್ತು ಪ್ರಜಾಪ್ರಭುತ್ವ ಜೊತೆಜೊತೆಯಾಗಿ ಹೆಜ್ಜೆ ಹಾಕಲಾರವು. ಪ್ರಜಾಪ್ರಭುತ್ವವು ಜಡ್ಡುತನವನ್ನು ಹೇಗೋ ಸಹಿಸಿಕೊಂಡೀತು, ಆದರೆ ಜಡ್ಡುತನವು ಪ್ರಜಾಪ್ರಭುತ್ವವನ್ನೆಂದೂ ಬಹುಕಾಲ ಸಹಿಸಿಕೊಳ್ಳಲಾರದು. ಜನತೆಗೆ ಇವೆರಡರಲ್ಲಿ ಯಾವುದು ಹಿತಕರ ಎಂಬುದಕ್ಕೆ ದೀರ್ಘ ಜಿಜ್ಞಾಸೆ ಅನಗತ್ಯ. ಪ್ರಜಾಪ್ರಭುತ್ವದ ಘೋಷಣೆಗಳನ್ನು ನೀಡುತ್ತಾ ಪರಮ ಜಡ್ಡುತನದ ಕ್ರಿಯೆಯಲ್ಲಿ ತೊಡಗಲಾಗದೆಂಬುದೇನೂ ಇಲ್ಲ. ಆಗ ಒಸಾಮಾ ಮತ್ತು ಒಬಾಮಾ ಒಂದೇ ವರ್ಣದವರಾಗುತ್ತಾರೆ. ಅವರ ಜೊತೆ ಮಮತಾ ದೀದಿ ಸ್ಪರ್ಧೆಗೆ ಇಳಿಯುವುದು ಬೇಡ.

ಜಿ. ರಾಮಕೃಷ್ಣ



# ಅಮ್ಮಾ.... ನಾ ತೋಟಕೆ ಹೋಗಿಬರ್ತೀನಿ...!

ನಮ್ಮ ಮನೆಯ ಆರು ವರ್ಷದ ಚಿನ್ನು, ''ಅಮ್ಮಾ, ನಾನು ತೋಟಕ್ಕೆ ಹೋಗಿ ಬರ್ತೀನಿ'' ಎಂದಾಗ ಮನೆ ಜನರೆಲ್ಲಾ ಬೆರಗುಗಣ್ಣಿನಿಂದ ನೋಡುವವರೇ, ಏಕೆಂದರೆ ಚಿನ್ನು ಒಂದು ದಿನವೂ ''ತೋಟಕ್ಕೆ ಬರ್ತೀನಿ'' ಅಂದಿದ್ದು ದಾಖಲೆಯಲ್ಲೇ ಇಲ್ಲ, ಅಪ್ಪ ಅಥವಾ ಅಜ್ಜ, ''ತೋಟಕ್ಕೆ ಹೋಗಿ ಬರೋಣವೇನೋ ಚಿನ್ನು'', ಅಂದರೆ ಆತ ''ನಾನು ಬರೊಲ್ಲಪ್ಪಾ. ತೋಟದಲ್ಲಿ ಸೊಳ್ಳೆ ಕಡೀತದೆ, ಉಂಬಳ ಹತ್ತಿಕೊಳ್ತದೆ, ಮಳೆ ರಾಡಿ ಜೊತೆಗೆ ಥಂಡಿ ಬೇರೆ'' ಹೀಗೆ ಹೇಳಿ ನಿರಾಕರಿಸುವುದೇ ಹೆಚ್ಚು. ಮಳೆಗಾಲದಲ್ಲಿ ಮನೆಯಿಂದ ಹೊರಹೋಗುವುದೇ ಇಲ್ಲಾ ಅನ್ನುತ್ತಾನೆ.

ಆದರೆ ಇಂದು ತೋಟಕ್ಕೆ ಹೋಗ್ತೀನಿ ಅಂದಿದ್ದು ಕೇಳಿ ಮನೆ ಜನರಿಗೆಲ್ಲಾ ಆದ ಸಂತೋಷ ಅಷ್ಟಿಷ್ಟಲ್ಲ. ''ಮಂಗ ಬಂದ್ರೆ ಬೆದರಿಸಿ ಬಾ'' ಎನ್ನುತ್ತ ಅಜ್ಜ ನಗುತ್ತ ಬೀಳ್ಕೊಟ್ಟ. ತೋಟಕ್ಕೆ ಹೋಗಿ ಬಂದ ಚಿನ್ನು ಪಾಟಿ ಚೀಲ ಹೆಗಲಿಗೇರಿಸಿಕೊಂಡು ಶಾಲೆಗೆ ಹೋದ. ಮಧ್ಯಾಹ್ನ ಶಾಲೆಯಿಂದ ಮನೆಗೆ ಮರಳಿದವನೇ ತೋಟದ ಕಡೆ ಮುಖ ಮಾಡಿದ್ದನ್ನು ಕಂಡು ಅಜ್ಜಿ ಕೇಳಿದಳು, ''ಮರಿ ಎಲ್ಲಿಗೆ ಹೊರಟೆ?'' ''ತೋಟಕ್ಕೆ'' ಎಂದು ಹದಿನೈದು ನಿಮಿಷಕ್ಕೆ ವಾಪಾಸ್ ಬಂದ. ಏಡಿಯನ್ನೋ, ಕಪ್ಪೆಯನ್ನೋ, ಆಮೆಯನ್ನೋ ಅಥವಾ ಹಾವಿನ ಮರಿಯನ್ನೋ ನೋಡಿರಬಹುದು, ಅದು ಅದೇ ಜಾಗದಲ್ಲಿ ಇದೆಯೋ ಇಲ್ಲವೊ ಎಂಬುದನ್ನು ಖಚಿತಪಡಿಸಿಕೊಳ್ಳಲು ತೋಟಕ್ಕೆ ಹೋಗಿಬರುವುದು... ಹೀಗೆಂದು ಮನೆ ಜನರೆಲ್ಲಾ ಮಾತಾಡಿಕೊಂಡರು.

ಮಧ್ಯಾಹ್ನ ಶಾಲೆಗೆ ಹೋಗುವಾಗಲೂ ತೋಟಕ್ಕೆ ಹೋಗಿ ಬಂದೇ ಶಾಲೆಗೆ ಹೋದ. ಮತ್ತೆ ಬಂದಾಗಲೂ ಇದೇ ಪುನರಾವರ್ತನೆ. ಸಂಜೆ ಐದು ಗಂಟೆಗೆ, ''ಚಿನ್ನ, ಬಾರೋ ತಿಂಡಿಗೆ'' ಎಂದು ತಾಯಿ ಕರೆದಾಗ, ''ಬೇಡಮ್ಮಾ ಈಗಷ್ಟೆ ತೋಟಕ್ಕೆ ಹೋಗಿ ಬಂದೆ'' ಅಂದಿದ್ದು ತಾಯಿಗೆ ಸಂಶಯ ಬಂತು.

ಆರು ಗಂಟೆಗೆ ಚಿನ್ನೂನ ಅಪ್ಪ, ಅಮ್ಮ ಸೇರಿ ವಾಕಿಂಗಿಗೆ ಹೊರಟಾಗ, ''ಅಪ್ಪಾಜೀ, ನಾನೂ ನಿಮ್ಜೊತೆ ಬರುವೆ ತಾಳಿ'' ಎಂದವ ತೋಟದ ಕಡೆ ಓಡಿದ. ಅವನಮ್ಮನಿಗೆ ತೀವ್ರ ಕುತೂಹಲ. ಥಟ್ಟನೆ ಮೆಲ್ಲನೆ ಹಿಂಬಾಲಿಸಿದಳು, ಇವ ತೋಟಕ್ಕೆ ಹೋಗಿ ಅದೇನು ಕಿಸೀತಾನೆ ನೋಡ್ಬೇಕು ಅಂತ. ಚಿನ್ನು ಒಂದು ಎರಡು, ಮೂರನೇ ಭರಣ (ಅಡಿಕೆ ಭರಣ) ದಾಟಿ ನಾಲ್ಕಕ್ಕೆ ಕಾಲಿಟ್ಟವ ಆಚೀಚೆ ಕಣ್ಣು ಹಾಯಿಸಿಕೊಂಡು ನಿಧಾನವಾಗಿ ಮರೆಮಾಚಿಟ್ಟ ಬಾಳೆಹಣ್ಣಿನ ಗೊನೆಗೆ ಕೈ ಹಾಕಿ ನಾಲ್ಕು ಹಣ್ಣುಗಳನ್ನು ತಿಂದು ಗಬಗಬ ನುಂಗಿ ವಾಪಸ್ ಅಡಿ ಇಟ್ಟಾಗ ಎದುರಲ್ಲಿ ಅಪ್ಪ- ಅಮ್ಮ ನಿಂತಿದ್ದರು. ಚಿನ್ನು ಗುಟ್ಟು ಗೊತ್ತಾಯಿತೆಂದು ಮಳ್ಳುಮುಖ ಮಾಡಿಕೊಂಡು ಪಿಳಿಪಿಳಿ ಕಣ್ಣುಬಿಟ್ಟ.

ಬಾಳೆಮರ ಅರ್ಧಕ್ಕೆ ಮುರಿದು ಜೋಲುತ್ತಿತ್ತು. ಹಣ್ಣಾಗಿರುವುದನ್ನು ಕಂಡು ದಿನಕ್ಕೆ ಆರೆಂಟು ಬಾರಿ ಗುಳುಂ ಮಾಡಿದ್ದರಿಂದ ಸುಮಾರು ನೂರು ಹಣ್ಣುಗಳಿರಬಹುದಾಗಿದ್ದ ಗೊನೆಯಲ್ಲಿ ಒಂದು 'ಹೆಣತಿಗೆ' ಮಾತ್ರ ಉಳಿದಿತ್ತು. ಉಳಿದೆಲ್ಲವೂ ಬರೀ ಸಿಪ್ಪೆಗಳೇ. ಕಿವಿ ಹಿಂಡಿದ ತಾಯಿ ಅಂದಳು, ''ಎಲಾ ಕಳ್ಳಾ, ತೋಟಕ್ಕೆ ಹೋಗಿಬರ್ತೀನಿ ಅಂತ ಕುಣೀತಿದ್ಯಲ್ಲ! ಇದಕ್ಕೇನಾ. ನನಗೆ ಮೊದಲೇ ಅನುಮಾನವಿತ್ತು. ಸುಮ್‌ಸುಮ್ನೆ ನೀನು ತೋಟದ ಕಡೆ ವಾಲುವ ಗಿರಾಕಿ ಅಲ್ಲಾ ಎಂದು.'' ''ಬಾಳೆಹಣ್ಣು ಮುಕ್ಕಿದ್ದು ಸಾಕು, ಈಗ ಪಾಠ, ಪುಸ್ತಕದೆಡೆಗೆ ಗಮನ ಕೊಡು. ಹೋಮ್‌ವರ್ಕ್ ಮಾಡುವುದಿದೆ'' ಎಂದು ಗದರಿಸಿದಾಗ ಬಾಲ ಮುದುರಿಕೊಂಡು ತೆಪ್ಪಗೆ ಮನೆಗೆ ಬಂದು ಬರೆಯತೊಡಗಿದ್ದ.

ಈಗ ನಮ್ಮ ಚಿನ್ನು ಕೊಂಚ ದೊಡ್ಡವನಾಗಿದ್ದಾನೆ. ಆ ಬಾಳೆಹಣ್ಣಿನ ಘಟನೆ ನಾವಿಂದೂ ಮರೆತಿಲ್ಲಾ. ಅವ ತೋಟಕ್ಕೆ ಹೊರಟರೆ... ಬಾಳೆಗೊನೆ ಹಣ್ಣಾಗಿದೆಯೇನೋ, ಎಂದು ಪ್ರಶ್ನಾರ್ಥಕವಾಗಿ ನೋಡುತ್ತೇವೆ, ನಗುತ್ತೇವೆ.





**ದತ್ತಗುರು ಕಂಠಿ**
ಉಂಚಳ್ಳಿ ಅಂಚೆ, ಸಿರಸಿ ತಾಲೂಕು
ಉತ್ತರ ಕನ್ನಡ ಜಿಲ್ಲೆ, ಪಿನ್ - ೫೮೧ ೩೧೮



# ಜನಮನ ಸೆಳೆದ ದುರಂತ ನಾಟಕ

ಡಾ|| ರಾಮಲಿಂಗಪ್ಪ ಟಿ. ಬೇಗೂರು



ಸ್ಥಳೀಯ ಚರಿತ್ರೆಯು ಸಾಹಿತ್ಯದಲ್ಲಿ ಸ್ಥಳಪುರಾಣವಾಗಿ ಬದಲಾಗುವುದು; ಆ ಪುರಾಣಗಳನ್ನು ಪ್ಯಾನ್ ಇಂಡಿಯನ್ ಆದ ಕಥನದೊಳಗೆ ಬೆಸೆಯುವುದು ಕನ್ನಡ ಸಾಹಿತ್ಯದಲ್ಲಿ ಒಂದು ಅನಾದಿ ಪ್ರಕ್ರಿಯೆ. ಇಂತಹ ಪ್ರಕ್ರಿಯೆಯ ಒಂದು ಮುಂದುವರಿಕೆಯಾಗಿ ಅನಭಿಜ್ಞ ಶಾಕುಂತಲ ಇದೆ. ಪಂಪಭಾರತ, ಕೈವಾರ ನಾರೇಯಣ, ಮಲೆಗಳಲ್ಲಿ ಮದುಮಗಳು, ಹೀಗಾದ್ರೆ ಹೇಗೆ ಇತ್ಯಾದಿ ನಾಟಕಗಳ ಮೂಲಕ ಸಾಹಿತ್ಯಕಥನಗಳನ್ನು ರಂಗರೂಪಗಳನ್ನಾಗಿ ಮಾಡಿದ ಡಾ|| ಕೆ. ವೈ. ನಾರಾಯಣಸ್ವಾಮಿ ಕಾಳಿದಾಸನ 'ಸತ್ಯಚರಿತೆ'ಯನ್ನು ಕಟ್ಟಿಕೊಡುವ ಯತ್ನವನ್ನು ಅನಭಿಜ್ಞ ಶಾಕುಂತಲದಲ್ಲಿ ಮಾಡಿದ್ದಾರೆ. ಚರಿತ್ರೆ, ಸ್ಥಳೀಯ ಚರಿತ್ರೆ, ಆತ್ಮಚರಿತ್ರೆಗಳೆಲ್ಲ ಇಂತಹ ಪಠ್ಯ ನಿರ್ಮಾಣದಲ್ಲಿ ಕಲಸಿಹೋಗುತ್ತವೆ. ಲೇಖಕನ ಸಾಹಿತ್ಯ ಪಠ್ಯಗಳ ಮೂಲಕ ಆತನ ಜೀವನಚಿತ್ರವನ್ನು ಕಟ್ಟಿಕೊಳ್ಳುವ ಮತ್ತು ಅವನ ಕುರಿತ ಸಾಮಾಜಿಕ ಇಮೇಜುಗಳನ್ನು ದಾಟಿ ಭಿನ್ನ ಪಠ್ಯಗಳನ್ನು ಕಟ್ಟಿಕೊಳ್ಳುವ ರಂಗಯತ್ನಗಳು ನಮ್ಮಲ್ಲಿ ಸಾಕಷ್ಟು ಆಗುತ್ತಿವೆ. ಪಂಪ, ರನ್ನ, ಕುಮಾರವ್ಯಾಸ, ಕುವೆಂಪು, ನರಸಿಂಹಸ್ವಾಮಿ, ಅನಂತಮೂರ್ತಿ, ಮಹದೇವ, ಸಿದ್ಧಲಿಂಗಯ್ಯ ಹೀಗೆ ಹಲವರ ಬಗೆಗೆ ನಮ್ಮಲ್ಲಿ ನಾಟಕಗಳು ರಚನೆಯಾಗಿವೆ. ಪ್ರಯೋಗಗಳೂ ಆಗಿವೆ. ಇವೆಲ್ಲವೂ ಸಾಹಿತ್ಯವನ್ನು ಜೀವನಚರಿತ್ರೆಯ ಮುಖ್ಯ ಆಕರಸಾಮಗ್ರಿ ಎಂಬಂತೆ ಕಂಡಿವೆ. ಆದರೆ ಕಾಳಿದಾಸನ ಜೀವನ ಕತೆಯೆಂದು ಕಟ್ಟಲ್ಪಟ್ಟಿರುವ **'ಅನಭಿಜ್ಞ ಶಾಕುಂತಲ'** ಇವುಗಳಿಗಿಂತ ಭಿನ್ನವಾದುದು.

ಕೋಲಾರ ಮಾಲೂರು ಭಾಗದ ಜನಪದ ಹಾಡೊಂದು ಈ ನಾಟಕಕ್ಕೆ ಸ್ಫೂರ್ತಿ ಎಂದು ನಾಟಕಕಾರರೆ ಹೇಳಿಕೊಂಡಿದ್ದಾರೆ. 'ನ್ಯಾಸ್ತನೆ ನೆಲಬಾಲನೆ ಸರಿಯಲ್ಲವೊ ಏಕಾಂತನೆ, ಬಾಲಿಕೆಯ ಬಂಗಾರದುಂಗುರ ಬಾವಿ ನೀರೊಳು ಜಾರಿತೇ...' ಹೀಗೆ ಸಾಗುವ ಈ ಹಾಡಿನಲ್ಲಿ ಕಾಳಿದಾಸನ ಕಥನ ಇದೆಯೊ ಇಲ್ಲವೋ ! ಆದರೆ ನಾಟಕಕಾರರು ಇದೆಯೆಂದು ಭಾವಿಸಿದ್ದಾರೆ. ಹಾಗೆ ಭಾವಿಸಿ ಕಾಳಿದಾಸನ ಜನಪ್ರಿಯ ಜೀವನಚರಿತ್ರೆಗಳಿಗೆ ಇನ್ನೊಂದು ಚಾರಿತ್ರ್ಯದ ಆಯಾಮ ಸೇರಿಸಿದ್ದಾರೆ. ಕವಿರತ್ನ ಕಾಳಿದಾಸ ಸಿನೆಮಾ, ಆಷಾಢದ ಒಂದು ದಿನ, ನಾಟಕ ಇತ್ಯಾದಿಗಳು ಕಟ್ಟಿಕೊಡುವ ಚರಿತ್ರೆಗಿಂತ ಭಿನ್ನವಾದ ಚರಿತ್ರೆಯಿದು.

ಕಾಳಿದಾಸ ಕೊಲಂಬೋದಲ್ಲಿ ವೇಶ್ಯಾಗೃಹದಲ್ಲಿ ಅವನ ಮಗನಿಂದಲೆ ಕೊಲೆಯಾದ ಎನ್ನುವುದು ಇಲ್ಲಿನ ಒಂದು ಪ್ರತಿಪಾದನೆ. ಹಾಗೆಯೆ ಕಾಳಿದಾಸನಿಗೆ ಮೂವರು ಪ್ರೇಯಸಿಯರು ಇದ್ದರು; ಮತ್ತು ಆತ ಮೂಲತಃ ಅನಾಥ ಬಾಲಕ; ಕಾಶ್ಮೀರದ ಬುಡಕಟ್ಟು ಹಾಡಿಯೊಂದರಲ್ಲಿ ಬೆಳೆದ ಹುಡುಗ ಎಂಬುವು ಇಲ್ಲಿನ ಇನ್ನಿತರ ಪ್ರತಿಪಾದನೆಗಳು. ಅಲ್ಲದೆ ಕಾಳಿದಾಸ ಮತ್ತೆ ಮತ್ತೆ ಯಾಕೆ ವೇಶ್ಯಾವಾಟಿಕೆಗಳಿಗೆ ಅಲೆಯುತ್ತಿದ್ದ ಎಂದರೆ ಅವನ ಗಂಧರ್ವಕನ್ಯೆ (ಪ್ರೇಯಸಿ)ಯನ್ನು ಹುಡುಕಲಿಕ್ಕಾಗಿ ಎಂಬ ಪ್ರತಿಪಾದನೆಯೂ ಇಲ್ಲಿದೆ. ಕವಿಯ ಚಾರಿತ್ರ್ಯದ ಸಮರ್ಥನೆ ಮತ್ತು ಸ್ಥಾಪಿತ ಸತ್ಯಗಳನ್ನು ಒಡೆಯುವ ಎರಡೂ ಕೆಲಸಗಳನ್ನು ಈ ಪ್ರತಿಪಾದನೆಗಳ ಮೂಲಕ ನಾಟಕ ಮಾಡುತ್ತದೆ. ಆದರೆ 'ಸತ್ಯದ ಅಧಿಕೃತೀಕರಣ' (ಸತ್ಯಗಳ ನಿರಾಕರಣ) ಪ್ರಕ್ರಿಯೆಯು ನಿರಂತರ ಪ್ರಕ್ರಿಯೆಯೆ ವಿನಾ ಅದಕ್ಕೆ ಅಂತ್ಯವೆಂಬುದು ಇಲ್ಲ ಅಲ್ಲವೆ ? ಚರಿತ್ರೆಯಲ್ಲಿ ಸತ್ಯ ಮತ್ತು ಸುಳ್ಳುಗಳ ನಡುವೆ ಗೆರೆ ಎಲ್ಲಿ ಇರುತ್ತದೆ ? (ನಾಟಕದಲ್ಲಿ ಸತ್ಯಮೇವ ಜಯತೇ ಎಂಬ ಘೋಷಣೆಯೂ ಬರುತ್ತದೆ)



ವಾಸ್ತವ ಮತ್ತು ಕಲ್ಪನೆಗಳು ಬೆರೆತುಕೊಂಡೆ ಸಾಹಿತ್ಯ ಕಥನವೆನ್ನುವುದು ಹುಟ್ಟುತ್ತದೆ. ಅಂತಹ ಕಲ್ಪನೆ ಮತ್ತು ವಾಸ್ತವದ ತಿಳುವಳಿಕೆಗಳೇ ಇಲ್ಲಿ ಸಾಹಿತ್ಯಕ ವಾಸ್ತವವಾಗಿ ರೂಪಗೊಂಡಿವೆ. ಕಾಳಿದಾಸನನ್ನು ಮೂವರು ಹೆಣ್ಣುಗಳು ಪ್ರೀತಿಸಿದ್ದರೊ ಇಲ್ಲವೊ ಆದರೆ ಅಂತಹದ್ದೊಂದು ನಂಬಿಕೆಯನ್ನು ಈ ನಾಟಕ ಹುಟ್ಟಿಸಲು ಯತ್ನಿಸುತ್ತದೆ. ನಾನು ಹೇಳುವುದೇ ಅಧಿಕೃತ ಬೇರೆಲ್ಲವೂ ಅನಧಿಕೃತ ಎಂಬ ವಾದವನ್ನು ಈ ನಾಟಕ ಬಲವಾಗಿ ಮಂಡಿಸುತ್ತದೆ. ಹಾಗೆ ಮಂಡಿಸುವ ಮೂಲಕ ಚರಿತ್ರೆಗಳು ಸದಾ ಕಲ್ಪಿತ ಮತ್ತು ಅಸಂಖ್ಯ ಎಂಬುದನ್ನೆ ಸಮರ್ಥಿಸುತ್ತದೆ. ಲಕ್ಷ್ಮೀಪತಿ ಕೋಲಾರ ಅವರು ಬರೆದ 'ಅಲ್ಲಮನ ಬಯಲಾಟ' ನಾಟಕದೊಳಗೆ ಅಲ್ಲಮ ಎರಡು ಮದುವೆ ಆಗುತ್ತಾನೆ. ಅಲ್ಲಮ ಎರಡು ಮದುವೆ ಆಗಿದ್ದನೋ ಇಲ್ಲವೋ; ಆದರೆ ಅಲ್ಲಮನ ಬಯಲಾಟ ನಾಟಕವಂತು ಹಾಗೆ ಹೇಳುತ್ತದೆ. ಅನಭಿಜ್ಞ ಶಾಕುಂತಲ ಕೂಡ ಕಾಳಿದಾಸನಿಗೆ ಮೂರು ಹೆಣ್ಣುಗಳ ಪ್ರಣಯವನ್ನು ಕಲ್ಪಿಸುತ್ತದೆ. (ಹಾಗೆಯೆ ಹಲವು ಹೆಣ್ಣುಗಳ ಸಂಪರ್ಕವನ್ನು ಪ್ರಕಟಿಸುತ್ತದೆ) ಇಂತಹ ಕಲ್ಪಿತ ವಾಸ್ತವಗಳು 'ವಾಸ್ತವ' ಎಂಬುದು ಒಂದಲ್ಲ ಅವು ಅಸಂಖ್ಯ ಎಂಬ ಧ್ವನಿಯನ್ನೆ ಮಂಡಿಸುತ್ತವೆ. ಇಂತಹ ಸಂಗತಿಗಳು ನಾಟಕವೊಂದರಲ್ಲಿ ಮಂಡಿತವಾದಾಗ ನಿಜವಾದ ಚರಿತ್ರೆ ಯಾವುದು ? ಯಾರನ್ನು ನಾವು ಅಧಿಕೃತ ಎಂದು ನಂಬಬೇಕು ? ಎಂಬ ಪ್ರಶ್ನೆ ಸಾಮಾನ್ಯರಿಗೆ ಏಳಬಹುದು.

ನಾಟಕದಲ್ಲಿನ ವಿಚಾರಗಳು ಚಾರಿತ್ರಿಕವಾಗಿ ಎಷ್ಟು ನಿಜ; ಎಷ್ಟು ಅಧಿಕೃತ ಎಂಬುದಕ್ಕಿಂತ ಇಂತಹ ಕಲ್ಪಿತ ವಾಸ್ತವಗಳು ಯಾಕೆ ಮಂಡಿತವಾಗುತ್ತವೆ ಎಂಬುದೇ ಇಲ್ಲಿ ಮುಖ್ಯವಾದ ಪ್ರಶ್ನೆ. ಅಲ್ಲದೆ ವಸ್ತುವಿನ ಆಯ್ಕೆ ಮತ್ತು ನಿರ್ವಹಣೆಯ ಹಿಂದೆ ಯಾವ ಸಾಮಾಜಿಕ ಹೊಣೆಗಾರಿಕೆಗಳು ಇರುತ್ತವೆ ಎಂಬುದು ಕೂಡ ಮುಖ್ಯವಾದ ಪ್ರಶ್ನೆ. (ಸೈನ್ಸ್ ಫಿಕ್ಷನ್‌ನಲ್ಲಿ ವಿಜ್ಞಾನ ಕಥನವನ್ನು

ಹಿಸ್ಟರಿ ಫಿಕ್ಷನ್‌ನಲ್ಲಿ ಚರಿತ್ರೆ ಕಥನವನ್ನು ಕೇವಲ ಕಲ್ಪಿತ ಎಂದು ತೆಗೆದುಕೊಳ್ಳುತ್ತೇವೆ ಎಂಬುದು ನಮಗೆಲ್ಲ ತಿಳಿದೇ ಇದೆ) 'ಮಹಾಪುರುಷ'ರ ಬಗ್ಗೆ ನಮ್ಮ ಚರಿತ್ರೆಯಲ್ಲಿ ಬಹಳಷ್ಟು ಮಾಹಿತಿ ಇದೆ. ಆದರೆ ಅವರ ಒಡನಾಟದಲ್ಲಿದ್ದ ಅಥವಾ ಅವರ ಯಶಸ್ಸಿಗೆ ಸಹಕಾರಿಯಾದ 'ಮಹಾಮಹಿಳೆ'ಯರ ಬಗ್ಗೆ ಮಾಹಿತಿ ಇಲ್ಲ. ಇಂತಹ ಮರೆಯಾದ ಮಾಹಿತಿಯನ್ನು ಕಥನ ಮಾಡಲು ಈ ನಾಟಕ ಯತ್ನಿಸುತ್ತದೆ. ಕಾಳಿ ಎಂಬ ಹುಡುಗನು ಕಾಳಿದಾಸನಾಗಿ ಬೆಳೆದ ಕಥೆಯನ್ನು ಹೇಳುತ್ತಲೆ ಆತನ ಜೀವನದಲ್ಲಿ ಪ್ರವೇಶಿಸಿದ ಮೂವರು ಹೆಣ್ಣುಗಳ ಅಂತರಂಗವನ್ನು ಬಹಿರಂಗಪಡಿಸುವ ಪ್ರಯತ್ನವನ್ನು ಈ ನಾಟಕ ಮಾಡುತ್ತದೆ.

ಇಲ್ಲಿ ಬರುವ ಉಜ್ಜಯಿನಿಯ ರಾಜಕುಮಾರಿ ಮತ್ತು ಕಾಶ್ಮೀರದ ಹಾಡಿಯ ನಾಯಕನ ಸೊಸೆ (ಗಂಧರ್ವಕನ್ಯೆ) ಹಾಗೂ ಕಾಶ್ಮೀರದ ಹಾಡಿಯ ಸಾಮಾನ್ಯ ಹುಡುಗಿ ಈ ಮೂವರೂ ತಾವು ಕಾಳಿದಾಸನಿಗಾಗಿ ಪಟ್ಟ ಪಾಡುಗಳನ್ನು ನ್ಯಾಯಾಧೀಶನ ವೇಷಧಾರಿಯಾದ ಸೂತ್ರಧಾರನಿಗೆ ಹೇಳಿಕೊಳ್ಳುತ್ತಾರೆ. ಸೂತ್ರಧಾರ ಈ ನಾಟಕದಲ್ಲಿ ಕಥನ ನಿರೂಪಣೆಯ ತಂತ್ರವಾಗಿ ಸಂಭವಿಸಿರುವ ಪಾತ್ರ. ಹಾಗೆಯೆ ಈ ಮೂವರು ಹೆಣ್ಣುಗಳನ್ನೂ ಇಲ್ಲಿ ಕಾಳಿದಾಸನ ಕಥನವನ್ನು ಪ್ರೇಕ್ಷಕರಿಗೆ ನಿರೂಪಿಸಲು ಸಾಧನಗಳನ್ನಾಗಿ ಬಳಸಿಕೊಳ್ಳಲಾಗಿದೆ. ಇದೂ ಒಂದು ನಾಟಕ ತಂತ್ರವೆ. ಆದಾಗ್ಯೂ ಈ ಪಾತ್ರಗಳು ಜೀವಂತ ಪಾತ್ರಗಳೆ ಆಗಿರುವುದರಿಂದ ಪರೋಕ್ಷವಾಗಿ ಹೆಣ್ಣುಗಳ ಬವಣೆಯ ಕಥನವೂ ಆಗಿ ಈ ನಾಟಕ ಪರಿಣಮಿಸಿದೆ. ಇಲ್ಲಿ ಎಲ್ಲವೂ ತುಂಬ ಭಾವನಾಪ್ರಧಾನ ಮತ್ತು ದುಃಖಸ್ಥಾಯಿಯಾಗಿಯೆ ನಡೆಯುತ್ತವೆ. ದುರಂತವೆಂದರೆ ನಿರಂತರ ತಮ್ಮ ಪ್ರೇಮಿಯನ್ನು ಪಡೆಯುವ ಪ್ರಯತ್ನದಲ್ಲಿಯೆ ಈ ಮೂವರ ಬದುಕುಗಳೂ ಹಣ್ಣಾಗುತ್ತವೆ. ಹೆಣ್ಣುಗಳ ಬವಣೆಯನ್ನು ಹೇಳಲು ಹೊರಡುವ ನಾಟಕವು ಪ್ರಾಥಮಿಕವಾಗಿ ಹಲವು ಹೆಣ್ಣುಗಳು ಒಬ್ಬನಿಗೇ ತಮ್ಮ ಇಡೀ ಬದುಕನ್ನು ಮುಡಿಪಾಗಿ ಇಡುವಂತೆ ಇಲ್ಲಿ ಕಥನ ಕಟ್ಟಲಾಗಿದೆ. ಆ ಮೂಲಕ ಪುರುಷ ಪ್ರಧಾನ ಮೌಲ್ಯವನ್ನೆ ನಾಟಕ ತನ್ನ ಗರ್ಭದಲ್ಲಿ ಹುದುಗಿಸಿಕೊಂಡಂತೆ ಕಾಣುತ್ತದೆ.

ನಾಟಕದಲ್ಲಿ ಕಾಳಿದಾಸನ ಹೆಣ್ಣುಗಳು ತಮ್ಮಲ್ಲಿ ಅಡಗಿದ ಸತ್ಯಗಳನ್ನು ಬಹಿರಂಗ ಪಡಿಸುವ ತಂತ್ರವನ್ನು ಬಳಸಿರುವುದು ಸೂಕ್ತವೆ ಹೌದು. ಆದರೆ ಅದು ರಂಗದಲ್ಲಿ ಸಂಭವಿಸುವ ಕ್ರಮ ಸ್ವಲ್ಪ ಅತಿನಾಟಕೀಯ ಮತ್ತು ಕೃತಕ ಎನ್ನಿಸುತ್ತದೆ. ಒಟ್ಟು ನಾಟಕದ ಪ್ಲಾಟು ಹಾಡು ಸಂಗೀತಗಳಿಂದ ರಂಜನೀಯವಾಗಿ-ಎಂಟರ್‌ಟೈನಿಂಗ್ ನರೇಶನ್ ಹಾಗೆ ಕಟ್ಟಲ್ಪಟ್ಟಿದೆ. ಅಲ್ಲದೆ ಅದು ಪ್ರೇಕ್ಷಕನ ಅನುಭವ ಆಗಿ ಒದಗುವ ಬಗೆ ತುಂಬ ಯೋಜಿತ ಎನ್ನಿಸುತ್ತದೆ. ಅಲ್ಲದೆ ಕಥೆಗೆ ನಾಟಕದಲ್ಲಿ ಇನ್ನಷ್ಟು ಸಮಯ ಬೇಕಿತ್ತು. ಆದರೆ ನಗರ



ರಂಗಭೂಮಿಯ ಸ್ಥಿತಿ ಗಮನಿಸಿ ನಾಟಕಕಾರರು ಆದಷ್ಟು ಕಿರಿದಾಗಿ ಮುಗಿಸಲು ಯತ್ನಿಸಿದ್ದಾರೆ. ಆದರೆ ನಿಜವಾಗಿಯೂ ಇದೊಂದು ಸಿನೆಮಾ ಆಗಬಲ್ಲ ವ್ಯಾಪ್ತಿಯಿರುವ ಕಥನ. ಕಥಿಸುವ ತಂತ್ರದ ದೃಷ್ಟಿಯಿಂದ ನಿರ್ದೇಶಕರಾದ ಪ್ರಕಾಶ್ ಶೆಟ್ಟಿ ಸ್ತ್ರೀಪಾತ್ರಗಳನ್ನು ಇಬ್ಬಾಗವಾಗಿಸಿ ರಂಗವನ್ನೂ ಇಬ್ಬಾಗಿಸಿ ಯಶಸ್ವಿಯಾಗಿದ್ದಾರೆ. ಆದರೆ ಕಾಳಿದಾಸ ಮಾತ್ರ ಒಬ್ಬನೆ. ರಂಗದಲ್ಲಿ ಕಾಳಿದಾಸನ ಪಾತ್ರವನ್ನೂ ಯುವಕ ಮತ್ತು ಮುದುಕ ಎಂದು ಇಬ್ಬಾಗಿಸಿದ್ದರೆ ಆ ಪಾತ್ರಕ್ಕೂ ನ್ಯಾಯ ಸಲ್ಲುತ್ತಿತ್ತು. ಒಬ್ಬನೆ ನಟನಿಗೆ ಎರಡು ವಯೋಸ್ಥಿತಿಗಳನ್ನು ಒಂದೆ ದಿರಿಸಿನಲ್ಲಿ ನಿರ್ವಹಿಸುವ ಕಷ್ಟ ತಪ್ಪುತ್ತಿತ್ತು. ಇದು ನಿರ್ದೇಶಕರೂ ಮಾಡಬಹುದಾಗಿದ್ದ ಮತ್ತು ನಾಟಕಕಾರರೂ ಮಾಡಬಹುದಾಗಿದ್ದ ಕಾರ್ಯ. ಇಲ್ಲಿನ ಹೆಣ್ಣುಗಳಿಗೆ ವಯಸ್ಸಾಗಿದೆ. ಆದರೆ ಕಾಳಿದಾಸನಿಗೆ ಮಾತ್ರ ವಯಸ್ಸೇ ಆಗಿಲ್ಲ, ಆದಂತೆ ಪ್ರೇಕ್ಷಕ ಭಾವಿಸಬೇಕಷ್ಟೆ. (ಮುಂದಿನ ಪ್ರಯೋಗಗಳಲ್ಲಿ ನಾಟಕ ಬದಲೂ ಆಗಬಹುದು.)

ಕಾಳಿದಾಸನ ಬದುಕಿನ ಇತರ ವಿವರಗಳೆಲ್ಲ ಗೌಣವಾಗಿ ನಾಟಕದ ತುಂಬ ಪ್ರಣಯ, ಪ್ರಣಯ ಭಂಗ, ವಿರಹಗಳು ಮಾತ್ರವೆ ಪ್ರಧಾನ ಆಗುತ್ತವೆ ಯಾಕೆ! ಕವಿ ಮತ್ತು ದೊರೆ, ಕವಿ ಮತ್ತು ಸಮಾಜ, ಕವಿ ಮತ್ತು ಕೃತಿ ಈ ಸಂಬಂಧಗಳಿಗಿಂತ ಕವಿ ಮತ್ತು ಆತನ ಪ್ರೇಯಸಿಯರ ಸಂಬಂಧವೆ ನಾಟಕದಲ್ಲಿ ಪ್ರಾಧಾನ್ಯತೆಯನ್ನು ಪಡೆದಿದೆ. ರೊಮಾನ್ಸ್ ಮಾತ್ರವೆ ಫೋಕಸ್ಸಾಗುವುದು ಭಾರತೀಯ ಚಾರಿತ್ರಿಕ ನಾಟಕ- ಸಿನೆಮಾಗಳ ಲಕ್ಷಣವೆ ಅಲ್ಲವೆ? ನಾಟಕದ ತುಂಬ ಒಂದು ವರ್ಗದ ಪ್ರೇಕ್ಷಕರನ್ನು ರಂಜಿಸುವ ಅದೇ ಕೆಮಿಸ್ಟ್ರಿ, ಅದೇ ಗ್ರಾಮರ್! ಆದರೆ ಗಂಡು ಮತ್ತು ಹೆಣ್ಣಿನ ಸಂಬಂಧ ಹೇಗಿರಬೇಕು ಎಂಬ ಪ್ರಶ್ನೆಯನ್ನು ಈ ನಾಟಕ ಪರೋಕ್ಷವಾಗಿ ಚರ್ಚಿಸುವುದರಿಂದ ಇಲ್ಲಿ ಇದಕ್ಕೊಂದು ಚರಿತ್ರೆಯಿಂದ ಬಿಡಿಸಿಕೊಂಡ ರೂಪಕ ಸಾಧ್ಯತೆ ಇದೆ.

ಈಗಾಗಲೇ ನಮ್ಮಲ್ಲಿ ಕಾಳಿದಾಸನನ್ನು ಕುರುಬರು ಕ್ಲೇಮು ಮಾಡಿ ಆಗಿದೆ. 'ಸ್ಥಳೀಯ' ಕನಕದಾಸನ ಎದುರು 'ಭಾರತೀಯ' ಕಾಳಿದಾಸನಿಗೆ ನಮ್ಮಲ್ಲಿ ಚಲಾವಣೆ ಕಡಿಮೆ ಯಾಗಿದೆ. ಆದರೂ ಇಲ್ಲಿ ಬಸವಣ್ಣ ಮಾದಿಗರವನು ಎಂದರೆ ದೊಡ್ಡ ದಂಗೆ ಆಗುತ್ತದೆ. ಇನ್ನು ಕಾಳಿದಾಸ ಕುರುಬರವನಲ್ಲ; ಅವನು ಬುಡಕಟ್ಟು ಹಾಡಿಯವನು; ಅನಾಥ ಎಂದರೆ ವಿವಾದ ಏಳದೆ ಇರುತ್ತದೆಯೆ? ಅಂತಹ ವಿವಾದ ಎಬ್ಬಿಸುವ ಜನ ಇನ್ನೂ ನಾಟಕ ನೋಡಿಲ್ಲವಷ್ಟೆ. ಅಲ್ಲಿಯವರೆಗೆ ನಾಟಕಕಾರ ಸೇಫ್. ನಾವೆಲ್ಲ ಒಂದಲ್ಲ ಒಂದು ಕಾಲದಲ್ಲಿ ಅಲೆಮಾರಿಗಳೆ (ನೊಮಾಡಿಕ್ ಟ್ರೈಬ್ಸ್) ಆಗಿದ್ದೆವು ಎಂಬುದು ನಿಜವೇ ಆದರೂ 'ನಾಗರೀಕರು' ಯಾರು ತಾನೆ ಹಾಗೆ ಭಾವಿಸಲು ಸಿದ್ಧರಿರುತ್ತಾರೆ? ನಮ್ಮ ಮಹಾಪುರುಷರೆಲ್ಲರೂ ದೇವಲೋಕದಿಂದ ನೇರವಾಗಿ ಉದುರಿದವರೆಂದು ಕಥೆ ಕಟ್ಟುವ ನಾವು ಅವರನ್ನು ಮಾನವರೆಂದೇ ಭಾವಿಸಲು ತಯಾರಿಲ್ಲ, ಇರಲಿ, ಈ ನಾಟಕದಲ್ಲಿ ಕಾಳಿದಾಸನನ್ನು ಕಾಶ್ಮೀರದ ಬುಡಕಟ್ಟು

ಹಾಡಿಯೊಂದರಲ್ಲಿ ಬೆಳೆದ ಅನಾಥ ಎನ್ನಲಾಗಿದೆ. ಈತ ಕಾಶ್ಮೀರದ ಯಾವ ಸ್ಥಳೀಯ ಭಾಷೆಯಲ್ಲೂ ಬರೆಯಲಿಲ್ಲ, ಸಂಸ್ಕೃತದಲ್ಲಿ ಬರೆದ ಎಂಬುದು ಸತ್ಯ. ಆದರೆ ನಾಟಕದಲ್ಲಿ ಅನಾಥನಾದ ಅವನು ಸಂಸ್ಕೃತ ಪಾಂಡಿತ್ಯ-ಕವಿತ್ವಗಳನ್ನು ಹೇಗೆ ಪಡೆದ ಎಂಬ ಪ್ರಶ್ನೆಗೆ ಉತ್ತರವಿಲ್ಲ.

ದಾಂಪತ್ಯ, ಏಕಪತ್ನೀವ್ರತ, ತಾಯ್ತನ ಇತ್ಯಾದಿ ಮೌಲ್ಯಗಳನ್ನು ಈ ನಾಟಕ ಪ್ರತಿಪಾದಿಸುತ್ತದೆ. ಇವುಗಳ ಜೊತೆಗೇ ಕವಿ-ಕಲಾವಿದರನ್ನು ಪ್ರಭುತ್ವ ಮತ್ತು ಸಮಾಜವು ಕೆಲವೊಮ್ಮೆ ಇಕ್ಕಟ್ಟಿಗೆ ಸಿಕ್ಕಿಸುವುದರಿಂದ ಅವರ ವೈಯಕ್ತಿಕ ನಿರ್ಧಾರಗಳು ಅವರ ಕೈಯಲ್ಲಿ ಇರುವುದೇ ಇಲ್ಲ, ಪರಿಸ್ಥಿತಿಗಳ - ವ್ಯವಸ್ಥೆಯ ಕೈಗೊಂಬೆಯಾಗಿ ಸೆಲಬ್ರಿಟಿಗಳು ವೈಯಕ್ತಿಕ ಸೌಖ್ಯಗಳನ್ನು - ಕೌಟುಂಬಿಕ ನೆಮ್ಮದಿಯನ್ನು ಕಳೆದುಕೊಳ್ಳುತ್ತಾರೆ ಎಂಬುದು ವಾಸ್ತವ ಎಂಬಂತೆ ಈ ನಾಟಕ ಬಿಂಬಿಸುತ್ತದೆ.

ಸಾಹಿತ್ಯ ಪಠ್ಯಗಳಲ್ಲಿ ಯಾವುದನ್ನು ಮುಖ್ಯವಾಹಿನಿಯಲ್ಲಿ ಇಡಬೇಕು; ಅಧಿಕೃತಗೊಳಿಸಬೇಕು ಎಂಬುದನ್ನು ಸದಾ ಅಧಿಕಾರ ಕೇಂದ್ರವು ನಿರ್ಧರಿಸುತ್ತ ಇರುತ್ತದೆ. ಹಾಗೆಯೆ ಯಾವುದನ್ನು ನೆನಪಿನಲ್ಲಿ ಸ್ಥಾಪಿಸಬೇಕು ಮತ್ತು ಯಾವುದನ್ನು ವಿಸ್ಮೃತಿಗೆ ತಳ್ಳಬೇಕು ಎಂಬುದನ್ನೂ ಅಧಿಕಾರ ಕೇಂದ್ರಗಳು ನಿರ್ಧರಿಸುತ್ತ ಇರುತ್ತವೆ. ಇಂತಹ ಅಧಿಕಾರ ಕೇಂದ್ರದ ಅಭಿಜ್ಞಾನ-ಅನಭಿಜ್ಞಾನ ರಾಜಕಾರಣವನ್ನು ಈ ನಾಟಕ ಪ್ರಶ್ನಿಸುತ್ತದೆ. ಸುಖ ಮತ್ತು ದುಃಖ; ಸುಳ್ಳು ಮತ್ತು ಸತ್ಯಗಳ ನಡುವೆ ವ್ಯತ್ಯಾಸಗಳು ಅಳಿಸಿಹೋಗುವ ಫಿಲಾಸಫಿಯನ್ನು ಈ ನಾಟಕ ಮಂಡಿಸುತ್ತದೆ. ಗಂಧರ್ವಕನ್ಯೆ ಬಗ್ಗೆ ಕಾಳಿ ಹೇಳುವ ಸುಳ್ಳು ನಿಜವೇ ಆಗುವುದು; ಕಾಳಿದಾಸನ ಕೊನೆಯ ಕ್ಷಣ ನೋವಿನ ಮತ್ತು ಸಂತಸದ ಗಳಿಗೆ ಎರಡೂ ಆಗುವುದು ಈ ಫಿಲಾಸಫಿಯ ನಾಟ್ಯೀಕರಣವೆ ಆಗಿದೆ. ಗಂಧರ್ವ ಕನ್ಯೆಯ ಪ್ರಸಂಗ ಮತ್ತು ಕಾಳಿದಾಸನ ಕೊಲೆಯ ಪ್ರಸಂಗ ಇವೆರಡರ ಆಚೆಗೂ ನಾಟಕವು ಸುಖ ದುಃಖ ಸತ್ಯ ಸುಳ್ಳುಗಳ ನಡುವಿನ ಗೆರೆ ಅಸ್ಪಷ್ಟ ಮತ್ತು ವ್ಯಕ್ತಿನಿಷ್ಠ ಎಂಬ ತತ್ವವನ್ನೆ ಮಂಡಿಸುತ್ತದೆ. ಒಟ್ಟು ನಾಟಕದ ಕಥನವೆ ಸತ್ಯದ ಶೋಧನೆ; ನಿಜದ ಅನಾವರಣ ಆದಾಗ್ಯೂ ನಾಟಕದಲ್ಲಿ ಮನುಷ್ಯ ಸಂಬಂಧಗಳಲ್ಲಿ ಇವು ಕಲಸಿಕೊಳ್ಳುತ್ತವೆ.

'ಪಂಪಭಾರತ'ದಲ್ಲಿ ಪಂಪನಿಗೆ, 'ಮಲೆಗಳಲ್ಲಿ ಮದುಮಗಳು'ನಲ್ಲಿ ಕುವೆಂಪುಗೆ, 'ಕೈವಾರ ನಾರೇಯಣ'ದಲ್ಲಿ ಕೈವಾರ ತಾತನಿಗೆ, 'ಹೀಗಾದ್ರೆ ಹೇಗೆ'ದಲ್ಲಿ ಸುನಂದಮ್ಮನವರಿಗೆ ಹೀಗೆ ಒಂದೊಂದರ ಯಶಸ್ಸಿನಲ್ಲೂ ಒಬ್ಬೊಬ್ಬರಿಗೆ ನಾಟಕಕಾರರು ಈ ಮೊದಲು ಋಣಿಯಾಗಿದ್ದರು. ಆದರೆ ಈ ಅನಭಿಜ್ಞ ಶಾಕುಂತಲದಲ್ಲಿ ಕಾಳಿದಾಸನಿಗೆ ಅಷ್ಟು ಋಣಿಯಾಗಿಲ್ಲ. ತಮ್ಮ ಕೇರಿಯದೇ ಜನಪದ ಮಟ್ಟಿನ ಕಣ್ಣಿನಿಂದ ಕಾಳಿದಾಸನನ್ನು ನೋಡಿದ್ದಾರೆ.



ರೂಪಾಂತರ- ಅಳವಡಿಕೆ-ಸೃಜನಶೀಲ ಅನುವಾದಗಳನ್ನೆಲ್ಲ ಕಲಸಿ ನಾಟಕ ಮಾಡುತ್ತಿದ್ದ ಕೆ. ವೈ. ನಾರಾಯಣಸ್ವಾಮಿ ಅವರು ಇದೀಗ ಅವುಗಳಿಂದ ಬಿಡಿಸಿಕೊಂಡು ಆಚೆ ಬರುತ್ತಿದ್ದಾರೆ. ಹೀಗೆ ಬಿಡಿಸಿಕೊಳ್ಳುವುದೆಂದರೆ ಅದು ಕೇವಲ ಬಿಡಿಸಿಕೊಳ್ಳುವುದಲ್ಲ, ಕನ್ನಡ ಸಾಹಿತ್ಯ ಚರಿತ್ರೆಯ ಆದಿಮ ಪ್ರಕ್ರಿಯೆಗಳಲ್ಲಿ ಒಂದಾದ ಪುನರ್ಕಥನ ಮಾರ್ಗದಿಂದಲೆ ಮಾರ್ಗಾಂತರ ಮಾಡುವುದಾಗಿದೆ. ಪುನರ್ಕಥನದಲ್ಲಿ ಸ್ವಂತಿಕೆ ಇಲ್ಲವೆಂದಲ್ಲ, ಆದರೆ ಅದರಾಚೆಗೂ ಅಸಂಖ್ಯ ಸ್ವಂತಿಕೆಗಳಿವೆ. ಅಂತಹ ಭಿನ್ನ ಸ್ವಂತಿಕೆಗಳನ್ನು ನಾಟಕಕಾರರು ಪ್ರಕಟಿಸಬೇಕಿದೆ. ಅಲ್ಲದೆ ನಮ್ಮ ಸುತ್ತಣ ಕೇರಿಯ ವಸ್ತುಗಳನ್ನೆ ಎತ್ತಿ ರಂಗಕ್ಕೆ ತರಬೇಕಿದೆ. ಡಾ|| ಕೆ. ವೈ. ನಾ. ಅವರು ಕುವೆಂಪು, ಪಂಪ, ಕೈವಾರತಾತ, ಕಾಳಿದಾಸ ಇವರನ್ನು ಆಶ್ರಯಿಸದೆ ತಮ್ಮ ಕೇರಿಯದೇ, ಊರಿನದೇ ಕಥೆ ಎತ್ತಿಕೊಳ್ಳಲಿ. ಕಾರ್ನಾಡ, ಕಂಬಾರ, ಶಿವಪ್ರಕಾಶರ ಶೂಗಳಲ್ಲೆ ಕಾಲಿಟ್ಟರೆ ಸ್ವಂತಿಕೆ ಎನ್ನುವುದು ಒದಗುವುದಿಲ್ಲ, ಮಾರ್ಗಾಂತರ ಮಾಡದೆ ಕನ್ನಡ ರಂಗಭೂಮಿಗೆ ಹೊಸತೇನನ್ನೂ ನೀಡಲಾಗದು ಅಲ್ಲವೆ ? ನಾರಾಯಣಸ್ವಾಮಿ ಇವುಗಳಾಚೆಗೆ ನಾಟಕ ಬರೆದಿಲ್ಲವೆಂದಲ್ಲ; ಹಲವಾರು ಬೀದಿ ನಾಟಕಗಳನ್ನು ಬರೆದಿದ್ದಾರೆ. ಭೂತ, ಬಾರಮ್ಮ ಭಾಗೀರಥಿ ಇಂತಹ ನಾಟಕಗಳು ಸಾಕಷ್ಟು ಯಶಸ್ವೀ ಪ್ರಯೋಗಗಳನ್ನು ಕಂಡಿವೆ. ಇವರ 'ಕಳವು' ನಾಟಕ ಇವರ ಅಜ್ಜಿ ಹೇಳಿದ ಕಥೆಯನ್ನು ಆಧರಿಸಿ ಬರೆದ ನಾಟಕ. ಆದರೆ ಅದು ಯಾಕೋ ಅಷ್ಟು ಯಶಸ್ಸು ಗಳಿಸಲಿಲ್ಲ.

ಇನ್ನು ಪ್ರಸಂಗ ರಂಗತಂಡದ ಮೊದಲ ನಾಟಕ ಇದಾಗಿದ್ದರಿಂದ (ಮೊದಲ ಪ್ರಯೋಗದಲ್ಲೆ) ಇಡೀ ನಾಟಕದ ಎಲ್ಲ ವಿಭಾಗಗಳಲ್ಲಿ ಒಂದು ಗ್ರಾಂಜರ್ ಎದ್ದು ಕಾಣುತ್ತಿತ್ತು. ಸಂಗೀತ, ಕಾಸ್ಟ್ಯೂಮ್, ಪ್ರಸಾಧನ, ರಂಗಸಜ್ಜಿಕೆ, ಬೆಳಕು, ನಿರ್ವಹಣೆ, ನಟನೆ ಎಲ್ಲ ವಲಯಗಳಲ್ಲೂ ಖ್ಯಾತರು ಮತ್ತು ಹೊಸಬರು ಇಬ್ಬರೂ ಇದ್ದರು. ಅಲ್ಲಿ ಪಕ್ಕಾ ಪ್ರೊಫೆಶನಲಿಸಂ ಇತ್ತು. ನಟರಲ್ಲಿ ಇಪ್ಪತ್ತಕ್ಕೂ ಹೆಚ್ಚು ಜನ ಹೊಸಬರು ಇದ್ದರು. ಎಲ್ಲರೂ ಅನುಭವಿಗಳಂತೆ ನಟಿಸಿದರು. ಒಟ್ಟು ನಾಟಕ ಪ್ರೇಕ್ಷಕರನ್ನು ಭಾವನಾತ್ಮಕವಾಗಿ ಹಿಡಿದಿಟ್ಟುಕೊಂಡಿತ್ತು. ಒಳ್ಳೆಯ ಪ್ರದರ್ಶನಾಗುಣದ ನಾಟಕಗಳಿಗೆ ಪ್ರೇಕ್ಷಕರನ್ನು ಸೆಳೆಯುವ ಶಕ್ತಿ ಇಂದಿಗೂ ಇದೆ ಎಂದು ಈ ನಾಟಕ ಸಾಬೀತು ಮಾಡಿತು.

ಈ ನಾಟಕ ಕಾಳಿದಾಸನದ್ದು ಎಂದು ತಿಳಿದಾಗ ಹೇಗೆ ಇದಕ್ಕೊಂದು ರಾಷ್ಟ್ರೀಯ ವ್ಯಾಪ್ತಿ ಒದಗುತ್ತದೋ ಹಾಗೆಯೇ ಮಿತಿಯೂ ಒದಗುತ್ತದೆ. ಇದು ಯಾರ ಕಥೆಯೂ ಆಗಬಹುದೆಂಬ ರೂಪಕವಾಗಿ ಭಾವಿಸಿದಾಗ ಇಡೀ ನಾಟಕವೆ ಒಂದು ಫಿಲಾಸಫಿಕಲ್ ಮೆಟಫರ್ ಆಗಿಬಿಡುತ್ತದೆ. ಅಂತಹ ಸಾಧ್ಯತೆ ಈ ನಾಟಕಕ್ಕೆ ಇದೆ. ದುರಂತವೆನ್ನುವುದು ನಾಟಕದ ಅಂತ್ಯದಲ್ಲಿ ಮಾತ್ರ ಇರುವುದಿಲ್ಲ; ಅದು ಆರಂಭದಲ್ಲೂ ಇರಬಹುದು; ಇಡೀ ಶರೀರದಲ್ಲೂ ಇರಬಹುದು. ದುರಂತವೆಂದರೆ ಅದು ಜೀವನದ ಯಾವುದೋ ಒಂದು ಘಟ್ಟವಲ್ಲ ಅಥವಾ ಸಾವಲ್ಲ, ಅದು ನಿರಂತರ ಬೆನ್ನು ಹತ್ತುವ ಬೇಟೆಗಾರ ಎಂಬ ತತ್ವವನ್ನೂ ಈ ನಾಟಕವು ಮಂಡಿಸುತ್ತದೆ. ಜೀವನವೇ ಒಂದು ದುರಂತ ನಾಟಕ ಎಂದು ಬಿಂಬಿಸುವ ಈ ನಾಟಕ ಕನ್ನಡದ ಒಂದು ದುರಂತ ನಾಟಕವೂ ಹೌದು. ಪ್ರಶ್ನೆಗಳು, ತಕರಾರುಗಳು ಏನೇ ಇರಲಿ ಇಂತಹ ನಾಟಕವನ್ನು ಬರೆದ ಡಾ|| ಕೆ. ವೈ. ನಾ. ಮತ್ತು ಆಡುತ್ತಿರುವ ಪ್ರಸಂಗದ ಗೆಳೆಯರು ಅಭಿನಂದನಾರ್ಹರು.


**ಡಾ|| ರಾಮಲಿಂಗಪ್ಪ ಟಿ. ಬೇಗೂರು**
ನಂ. ೫೧/೫೨, ಸಾವಿತ್ರಿ ರೆಸಿಡೆನ್ಸಿ, ಬಿ-೩, ೧ನೇ ಅಡ್ಡರಸ್ತೆ, ಯಲ್ಲಪ್ಪ ಗಾರ್ಡನ್
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫


## ಮೌನ

ಕೊಳದಲ್ಲೊಂದು ಪುಟ್ಟ ಕಲ್ಲೆಸೆದೆ
ಕೊಳ ಮುಗುಳ್ನಕ್ಕಿತು

* * *

ಉರಿ ಮಾತಿನ ಚೆಂಡೆಸೆಯಲು
ಅವನು ಬಳಸುವ ಉದ್ದದ 'ರನ್‌ಅಪ್'

* * *

ಅರಳುವ ಹೂವಿನ, ಕರಗುವ ಹಿಮದ
ಸಾಮಾನ್ಯ ಭಾಷೆ

* * *

ಟೈಟಾನಿಕ್‌ಅನ್ನು ಉಸಿರುಬಿಡದೆ
ಕತ್ತರಿಸಿದ ಐಸ್‌ಬರ್ಗ್

* * *

ಬ್ರಿಯಾನ್ ಆ್ಯಡಮ್ಸ್‌ನ ಸಂಗೀತ ಸಂಜೆಯಲಿ
ಮೈಮರೆತಾಗ ನೆನಪಾದ ಕನ್ನಡ ಭಾವಗೀತೆಯ ಸಾಲು

* * *

ಬಿಸಿ ಚಹಾದ ಹಬೆ, ಉದ್ದಿನ ವಡೆಯ
ಪರಿಮಳ ಕೆರಳಿಸಿದ ಹಸಿವಿಗಿಂತ ಕ್ರೂರ


**ದೀಪಾ ಸುಧೀರ್‌ಕುಮಾರ್**
ಕೊಪ್ಪ

# ಪಿಕಳಾರ ಹಕ್ಕಿಯ ಸಂಸಾರ



ನನ್ನನ್ನು 'ಪಿಕಳಾರ' ಅಂತ ಕರಿತಾರೆ



ಹೇಗಿದೆ ನನ್ನ ಅರಮನೆ



ರಕ್ಷೆಯ ಗೂಡಲ್ಲಡಗಲಿ ಎಷ್ಟು ದಿನ ?





ಯಾರದು ? ಎಳೆಯ ಕಂದಗಳನ್ನು ನೋಡುತ್ತಿರುವುದು ?

ಮನುಷ್ಯ ತನ್ನ ಜೀವನ ಪೂರ್ತಿ ಸೋಮಾರಿಯಾಗಿ ಕಾಲ ಕಳೆಯುವುದೇ ಹೆಚ್ಚು. ಆದರೆ ಪ್ರಾಣಿ, ಪಕ್ಷಿ, ಕೀಟಗಳು ಹಾಗಲ್ಲ, ಹುಟ್ಟಿದ ಮರುನಿಮಿಷದಿಂದಲೇ ಚಟುವಟಿಕೆ ಆರಂಭಿಸುತ್ತವೆ. ಅದರಲ್ಲಿ ಪಕ್ಷಿ ಪ್ರಪಂಚದ ಜೀವನಕ್ರಮ ಇನ್ನೂ ವಿಶಿಷ್ಟ. ಗೂಡು ಕಟ್ಟುವಿಕೆ, ಮೊಟ್ಟೆ ಇಡುವಿಕೆ, ಮರಿಗಳ ಪೋಷಣೆ ಎಲ್ಲವೂ ವಿಶಿಷ್ಟ, ವಿಸ್ಮಯ. ಪ್ರಕೃತಿದತ್ತವಾಗಿ ಬದುಕು ಸಾಗಿಸುವ ಪಕ್ಷಿಸಂಕುಲವು ನಯವಾಗಿ ಗೂಡು ಪೋಣಿಸಿಕೊಂಡು ಅಲ್ಲಿ ತಮ್ಮ ಸಂಸಾರದ ಪ್ರೀತಿಯನ್ನು ಗಟ್ಟಿಗೊಳಿಸಿ ಹೊಸ ಸಂತತಿಯನ್ನು ಪ್ರಪಂಚಕ್ಕೆ ನೀಡುತ್ತಿವೆ. ಅದಕ್ಕೊಂದು ತಾಜಾ ಉದಾಹರಣೆ ಈ 'ಪಿಕಳಾರ ಪಕ್ಷಿ.'

ಸ್ಪರ್ಧೆಗಾಗಿ ಪೇಂಟಿಂಗ್ ಮಾಡುತ್ತಲಿದ್ದೆ. ಕುಂಚಗಳು ತಮ್ಮ ಮೈಗೆಲ್ಲಾ ಬಣ್ಣ ಮೆತ್ತಿಕೊಂಡು ಕ್ಯಾನ್‌ವಾಸ್ ಮೇಲೆ ಸುಂದರ ಚಿತ್ತಾರ ರಚಿಸುತ್ತಿದ್ದವು. ಆ ಸಮಯದಲ್ಲಿ ಏನೋ ಸಪ್ಪಳವಾಗಿ ಕಿಟಕಿಯ ಕಡೆ ನೋಡಿದೆ. ಮನೆಯ ಹೊರಗಡೆ ಕಿಟಕಿಯ ಪಕ್ಕದಲ್ಲೇ ಹಬ್ಬಿಕೊಂಡಿದ್ದ ಬಳ್ಳಿಯಲ್ಲಿ ಪಕ್ಷಿಗಳು ಗೂಡು ಕಟ್ಟುತ್ತಿದ್ದವು. ಆ ಹಕ್ಕಿಗಳು ನೋಡಲು ಮೈನಾ ಹಕ್ಕಿಯ ಗಾತ್ರಕ್ಕೆ ಸಮನಾಗಿರುವ, ಕಂದುಮಿಶ್ರಿತ ಕಪ್ಪು ಬಣ್ಣದ, ಬಾಲದ ಪುಕ್ಕಗಳ, ಕೆಳಭಾಗದಲ್ಲಿ ಕೆಂಪು ಬಣ್ಣವನ್ನು ಹೊಂದಿರುವ, ತಲೆಯ ಮೇಲೆ ಕಪ್ಪನೆಯ ಜುಟ್ಟು ಇರುವ ಪಕ್ಷಿಗಳಾಗಿದ್ದವು. ಆದರೆ ಆ ಪಕ್ಷಿಗಳು ಯಾವ ಜಾತಿಯವು ಎಂದು ಗೊತ್ತಾಗಲಿಲ್ಲ. ಹಕ್ಕಿಗಳು ಆಗಲೇ ತಮ್ಮ ಗೂಡಿಗೆ ಅಂತಿಮ ರೂಪ ಕೊಡುವಲ್ಲಿ ನಿರತರಾಗಿದ್ದವು. ಆ ಗೂಡು ನಾರುಗಳಿಂದ ಒಟ್ಟುಗೂಡಿಸಿ ಮಾಡಿದ ತೆಂಗಿನ ಚಿಪ್ಪಿನಂತೆ ಕಾಣುತ್ತಿತ್ತು. ತೆಳುವಾದ ಬೇರುಗಳಿಂದ ಹೆಣೆದು ಜೇಡರ ದಾರದಿಂದ ಗಟ್ಟಿಮಾಡುತ್ತವೆ. ಅದಾಗಲೇ ಪುಟ್ಟ ಅರಮನೆ ಸಿದ್ಧವಾಗಿತ್ತು. ಆ ಗೂಡು ನಿಸರ್ಗವು ರಚಿಸಿದ ಸುಂದರ ಚಿತ್ತಾರದಂತೆ ಕಾಣುತ್ತಿತ್ತು.

ನಾನು ಆ ಪಕ್ಷಿಯ ಬಗ್ಗೆ ತಿಳಿಯಲು ಸಾಹಿತಿ ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರ 'ಹೆಜ್ಜೆ ಮೂಡದ ಹಾದಿ'ಗೆ ಹಾರಿಹೋಗಿದ್ದೆ. ಆಗಲೇ ಆ ಪಕ್ಷಿ 'ಪಿಕಳಾರ' ಎಂಬುದಾಗಿ ಗೊತ್ತಾಯ್ತು. ಅದರಲ್ಲಿಯೂ ಇದು ಕೆಂಪು ಕಿಬ್ಬೊಟ್ಟೆಯ (ರೆಡ್ ವೆಂಟೆಡ್ ಬುಲ್ ಬುಲ್) ಪಿಕಳಾರವಾಗಿತ್ತು. ಈ ಪಕ್ಷಿಯ ಬಗ್ಗೆ ತೇಜಸ್ವಿಯವರು ಸಂಪೂರ್ಣ ವಿವರ ನೀಡಿದ್ದಾರೆ. ಅಲ್ಲದೆ ಪಕ್ಷಿತಜ್ಞ ಸಲೀಂ ಅಲಿಯವರು ಸುಮಾರು ಹನ್ನೊಂದು ಬಗೆಯ ಪಿಕಳಾರಗಳನ್ನು ಗುರುತಿಸಿದ್ದಾರೆ. ಅದರಲ್ಲಿ ಚೊಟ್ಟಿ ಪಿಕಳಾರ, ಹಳದಿ ಕೆನ್ನೆಯ ಪಿಕಳಾರ, ಹಸಿರು ಪಿಕಳಾರ, ಕರಿ ಪಿಕಳಾರ, ಕೆಮ್ಮೀಸೆ ಪಿಕಳಾರ, ಕೆಂಪು ಬಾಲದ ಪಿಕಳಾರ ಮುಂತಾದವುಗಳು.

ಸಲೀಂ ಅಲಿಯವರು ಗುರುತಿಸಿದವುಗಳಲ್ಲಿ ಇದೂ ಒಂದು. ಈ ಹಕ್ಕಿಯನ್ನು ಭಾರತದ ಎಲ್ಲ ಕಡೆಗಳಲ್ಲಿ, ಹಿಮಾಲಯದ ಬುಡದಲ್ಲಿ, ಬಾಂಗ್ಲಾದೇಶ, ಶ್ರೀಲಂಕಾ, ಮ್ಯಾನ್ಮಾರ್ ದೇಶಗಳಲ್ಲಿ ಕಾಣಬಹುದು. ಪಿಕಳಾರಗಳು ಮಲೆನಾಡಿನ ಅತ್ಯಂತ ಜನಪ್ರಿಯ ಕಾಡು ಹಕ್ಕಿಗಳು. ಕೆಲವು ಜಾತಿಯ ಪಿಕಳಾರಗಳು ಒಣಭೂಮಿಯಲ್ಲಿ ವಾಸಿಸುತ್ತವೆ. ಕೆಲವು ಜಾತಿಯ ಪಿಕಳಾರಗಳು ಮನುಷ್ಯ ಸಾನ್ನಿಧ್ಯದಲ್ಲಿ ದೊರೆಯುವ ರಕ್ಷಣೆಗಾಗಿ ಮನೆಗಳ ಸುತ್ತ-ಮುತ್ತ ವಾಸಿಸುವುದು ಹೆಚ್ಚಾಗಿ ಕಂಡುಬರುತ್ತದೆ. ಆಲ, ಅರಳಿ ಹಣ್ಣುಗಳು ಮತ್ತು ದೀಪದ ಹುಳುಗಳು ಇವುಗಳ ಆಹಾರ.

ಸಂಸಾರ ಹೂಡುತ್ತಿರುವ 'ಪಿಕಳಾರ'ಗಳನ್ನು ಕ್ಯಾಮರಾ ಕಣ್ಣಿನಲ್ಲಿ ಸೆರೆಹಿಡಿಯಬಹುದಾಗಿದೆ. ಕ್ಯಾಮರಾ ಕಣ್ಣಿನಿಂದ ಕೆಲವು ದೃಶ್ಯಗಳನ್ನು ಸೆರೆಹಿಡಿಯಬೇಕಾದರೆ ಹಕ್ಕಿಗಳಿಗೆ ಕಾಣದಂತೆ ಮರೆಯಲ್ಲಿ ಸುಮಾರು ಎರಡು ಗಂಟೆಗಳ ಕಾಲ ಕಾಯಬೇಕಾಯಿತು. ದಿನ ಕಳೆದಂತೆ ಗೂಡಿನೊಳಗೆ ಚಿಕ್ಕ ಚಿಕ್ಕ ಕೆಂಪು ಚುಕ್ಕಿಗಳಿರುವ ಕಂದುಮಿಶ್ರಿತ ಬಿಳಿ ಬಣ್ಣದ ಮೂರು ಮೊಟ್ಟೆಗಳಿದ್ದವು. ದಿನಾಲೂ ಗೂಡನ್ನು ನೋಡ್ತಾ ಇದ್ದೆ. ಮೊಟ್ಟೆಗಳನ್ನು ನೋಡಿದಾಗಿನಿಂದ ಯಾವಾಗ ಮೊಟ್ಟೆಗಳಿಂದ ಮರಿಗಳು ಹೊರಬರಬಹುದು, ಅವು ಹೇಗಿರುತ್ತವೆ ಎಂಬ ಕುತೂಹಲ ನನ್ನನ್ನು ಕಾಡುತ್ತಲೇ ಇತ್ತು...

ಕೆಲವು ದಿನಗಳ ನಂತರ ಬೆಳಿಗ್ಗೆ ಆರರ ಸುಮಾರು. ಆ ಪಿಕಳಾರಗಳ ಕಲರವ ಹೆಚ್ಚಾಗಿತ್ತು. ಕಾರಣ ಮೊಟ್ಟೆಗಳಿಂದ ಎರಡು ಎಳೆಯ ಕಂದಗಳು ಹೊಸ ಜಗತ್ತಿಗೆ ಬಂದಾಗಿತ್ತು. ಇನ್ನೊಂದು ಜೀವಕ್ಕಾಗಿ ಕಾಯುತ್ತಲಿತ್ತು. ಮಧ್ಯಾಹ್ನದ ಹೊತ್ತಿಗೆ ಆ ಮೊಟ್ಟೆಯಿಂದಲೂ ಇನ್ನೊಂದು ಜೀವ ಹೊರಬಂದಿತ್ತು. ಚಿಕ್ಕ-ಚಿಕ್ಕ ಮಾಂಸದ ತುಂಡಿನಂತೆ ಕಾಣುತ್ತಿದ್ದವು. ಇನ್ನೂ ಕಣ್ಣು ತೆರೆದಿರಲಿಲ್ಲ. ತಾಯಿ ಹಕ್ಕಿಗೆ ಎಂದಿಲ್ಲದ ಉತ್ಸಾಹ ಕಂಡುಬರುತ್ತಿತ್ತು. ಅದಾಗಲೇ ಹುಳು ಹುಪ್ಪಡಿ, ಚಿಕ್ಕ ಚಿಕ್ಕ ಹಣ್ಣುಗಳನ್ನು ಕೊಕ್ಕಿನಿಂದ ಹೆಕ್ಕಿ ತಂದು ಅವುಗಳನ್ನು ಪೋಷಿಸುವ ಕೆಲಸ ಮತ್ತು ಶಿಕ್ಷಣ ನಿರಂತರವಾಗಿ ಸಾಗುತ್ತಲೇ ಇತ್ತು.

ದಿನ ಕಳೆದಂತೆ ಮೈಮೇಲೆ ಪುಕ್ಕಗಳು ಬೆಳೆಯಲಾರಂಭಿಸಿದ್ದವು. ರೆಕ್ಕೆಗಳು ಬಲಿಯುತ್ತಾ ಇದ್ದವು. ಆಗಾಗ ಬಾಲ್ಯದ ಸಹಜ ತುಂಟತನ ತೋರಿಸುತ್ತಾ ಕೊಂಬೆಯಿಂದ ಕೊಂಬೆಗೆ ಹಾರಾಡುವ ತಾಲೀಮು ನಡೆಸುತ್ತಿದ್ದವು. ಅಲ್ಲದೆ, ಆಗಾಗ ತಾಯಿ ಹಕ್ಕಿಯ ಜೊತೆ ಹಾರಾಟ ನಡೆಸಿ ಮತ್ತೆ ಗೂಡಿಗೆ ಬರುತ್ತಿದ್ದವು. ಆದರೆ ಒಂದು ದಿನ ಹಾರಿಹೋದ ಹಕ್ಕಿಗಳು ಗೂಡಿನತ್ತ ಬರಲೇಇಲ್ಲಾ! ಸುಮಾರು ೨೦ ದಿನಗಳ ಸಂಸಾರ ಕೊನೆಗೊಂಡಿತ್ತು. ಸುಮಾರು ೨೦ ದಿನಗಳ ಸಂಸಾರ ನಡೆಸಿ, ಕಣ್ಣಮುಂದೆ ಚಿತ್ರಪಟವೊಂದರ ಚಿತ್ತಾರ ಬಿಡಿಸಿ ಹಾರಿಹೋದ ಪಿಕಳಾರ ಹಕ್ಕಿಯ ಸಂಸಾರ ನನಗೆ ಅದ್ಭುತವಾದ ಒಂದು ಅನುಭವವಾಗಿತ್ತು...!!! ನನ್ನ ಕ್ಯಾಮರಾ ಕಣ್ಣಿಗೆ ಮೊಟ್ಟೆ ಇಡುವುದರಿಂದ ಹಿಡಿದು, ಮರಿ ಬೆಳೆದು ಸ್ವತಂತ್ರವಾಗಿ ಹಾರಿಹೋಗುವವರೆಗೂ ಸೆರೆಸಿಕ್ಕ ಸುಮಾರು ಇಪ್ಪತ್ತು ದಿನಗಳ ಕಾಲ ನಡೆದ ಪಿಕಳಾರದ ಸಂಸಾರವನ್ನು ಹೇಗೆ ಮರೆಯಲು ಸಾಧ್ಯ...?

ತಾಯಿಯ ನಿರೀಕ್ಷೆಯಲ್ಲಿ



ಅಮ್ಮಾ... ಬೇಗ ಊಟ ಹಾಕಮ್ಮಾ !



ಮುಂದಿನ ದಿನಮಾನಗಳ ಬಗ್ಗೆ ಕನಸು



ನಾಮದೇವ ಕಾಗದಗಾರ
ಕಲಾವಿದ, 'ಶ್ರೀಹರಿ ನಿಲಯ', ೩ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ, ಅಶೋಕ ನಗರ, ರಾಣೆಬೆನ್ನೂರು - ೫೮೧ ೧೧೫

# ಎರಡು ದಶಕಗಳ ಆರ್ಥಿಕ ಸುಧಾರಣೆ

## ~ ಒಂದು ಅವಲೋಕನ

ಭಾರತದ ಆರ್ಥಿಕ ಕ್ಷೇತ್ರವು ಆಯಾಕಾಲಕ್ಕೆ ವಿವಿಧ ರೀತಿಯ ಮಾರ್ಪಾಡುಗಳನ್ನು ಹಾಗೂ ವಿಭಿನ್ನ ಪರಿಕಲ್ಪನೆಗಳನ್ನು ತನ್ನದಾಗಿಸಿಕೊಳ್ಳುವ ಮೂಲಕ ಮುನ್ನಡೆದಿದೆ. ಈ ಪರಿಕಲ್ಪನೆಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. ಈ ನಾಲ್ಕರಲ್ಲಿ ಮೊದಲನೆಯದು, ಗಾಂಧಿ ಮತ್ತವರ 'ಸ್ವರಾಜ್ಯ'ದ ಜೊತೆಗೆ 'ಗ್ರಾಮ ಆರ್ಥಿಕ ರಚನೆ'ಯ ಪರಿಕಲ್ಪನೆಯಾದರೆ, ಇನ್ನು ಎರಡನೆಯದು, ಜವಾಹರಲಾಲ್ ನೆಹರೂ ಅವರ 'ಸಾರ್ವಜನಿಕ ಔದ್ಯಮೀಕರಣ'ದ ಪರಿಕಲ್ಪನೆಯದ್ದು. ಆದರೆ, ಪ್ರಸ್ತುತ ಎರಡೂ ಪರಿಕಲ್ಪನೆಗಳು ಸವಕಲಾಗಿ ಇತಿಹಾಸದ ಪುಟಗಳನ್ನು ಸೇರಿವೆ. ಮೂರನೆಯದು, 'ಮೂರು ಕರಣ'ಗಳಾದ ಉದಾರೀಕರಣ, ಖಾಸಗೀಕರಣ ಹಾಗೂ ಜಾಗತೀಕರಣ ಪರಿಕಲ್ಪನೆಗಳದ್ದು. 'ನವ-ವಸಾಹತುಶಾಹಿ' ಎಂಬುದು ನಾಲ್ಕನೆಯ ಪರಿಕಲ್ಪನೆಯಾಗಿದ್ದು, ಭಾರತದ ಆರ್ಥಿಕ ಕಾರ್ಯ ಯೋಜನೆಗಳಡಿಯಲ್ಲಿ ರೂಪುಗೊಳ್ಳುತ್ತಿರುವ ಪ್ರಸಂಗಗಳು ಪ್ರಖರವಾಗಿ ಕಾಣಿಸುತ್ತಿವೆ.

> ಭಾರತದಂತಹ ದೇಶಕ್ಕೆ 'ಆರ್ಥಿಕ ಸುಧಾರಣೆ' ಎಂಬ ನೀತಿಯು ತನ್ನಿಂದಾದ, ಸ್ವಪ್ರಯತ್ನ ಪೂರ್ವಕವಾದ ಕಾರ್ಯಯೋಜನೆಯೇನಲ್ಲ, ಅವನ್ನು ಬೇರೆ ಪರ್ಯಾಯವಿಲ್ಲದೆ ಒತ್ತಾಯ ಪೂರ್ವಕವಾಗಿ 'ಸುಧಾರಣೆ'ಗಳೆಂಬ ಹೆಸರಿನಲ್ಲಿ ನಮ್ಮ ಮೇಲೆ ಹೇರಲಾಗಿದೆ. ಇದು ಇಂದು ನವವಸಾಹತುಶಾಹಿ ರೂಪ ಪಡೆದು ಕೊಂಡಿರುವ ಬಗ್ಗೆ ಎಚ್ಚರವಹಿಸಿ ತಡೆಗಟ್ಟುವ ನಿಟ್ಟಿನಲ್ಲಿ ಕಾರ್ಯತಂತ್ರಗಳನ್ನು ಒಗ್ಗಟ್ಟಿನಿಂದ ರೂಪಿಸಿ ಜಾರಿಗೆ ತರುವುದು ಅಗತ್ಯ. ಜನಪರವಲ್ಲದ ಸುಧಾರಣೆ, ಸುಧಾರಣೆಯೇ ಅಲ್ಲ, ಈ ಮಾತು ಆರ್ಥಿಕ ಕ್ಷೇತ್ರವೇ ಅಲ್ಲದೆ ಇತರ ಕ್ಷೇತ್ರಗಳಿಗೂ ಅನ್ವಯಿಸುತ್ತದೆ.

ಈ ಮೂರನೆಯ 'ಮೂರೂ ಕರಣ'ಗಳು ನಾಲ್ಕನೆಯ 'ನವ-ವಸಾಹತುಶಾಹಿ' ಪರಿಕಲ್ಪನೆಗೆ ವ್ಯವಸ್ಥಿತವಾದ ಭೂಮಿಕೆಯನ್ನು ಸಿದ್ಧಪಡಿಸಿ ಪುಷ್ಟಿ ನೀಡುತ್ತಿರುವುದಕ್ಕೆ 'ಸುಧಾರಣೆ' ಎಂಬ ಹಣೆಪಟ್ಟಿಯನ್ನಂಟಿಸಿ ಎರಡು ದಶಕಗಳೇ ಕಳೆದಿವೆ. ಪ್ರಸ್ತುತ ಭಾರತವು ಮೂರನೆಯ ಪರಿಕಲ್ಪನೆಯಿಂದ ಬಹುದೂರ ಸರಿದು ನಾಲ್ಕನೆಯ ಪರಿಕಲ್ಪನೆಯಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಂಡಿರುವುದು ಅತ್ಯಾಶ್ಚರ್ಯವಲ್ಲದಿದ್ದರೂ ಆಘಾತಕಾರಿ ಸೂಚನೆ ಎಂಬುದನ್ನು ಸಮಸ್ತ ಜನಕೋಟಿ ಅರಿತುಕೊಳ್ಳಬೇಕಿದೆ. ಪ್ರಭುತ್ವದ ಚೌಕಟ್ಟಿನಲ್ಲಿರುವ ನೀತಿ ನಿರೂಪಕರು ತಾವು ರೂಪಿಸುವ ಕಾರ್ಯ ಯೋಜನೆಗಳ ಹಾಗೂ ಚಟುವಟಿಕೆಗಳ ಬಗ್ಗೆ ಅತ್ಯಂತ ಪರಿಣಾಮಕಾರಿಯಾಗಿ ಅಭಿವೃದ್ಧಿಯ ಪ್ರಕ್ರಿಯೆಯನ್ನು ಕುರಿತು ಅಂಕಿ-ಅಂಶಗಳ ಮೂಲಕ ಆಶಾದಾಯಕ ಚಿತ್ರಣವನ್ನು ಮುಂದಿಡುತ್ತಾ ಬಂದಿದ್ದಾರೆ. ಉದಾಹರಣೆಗೆ, ಶೇ. ೮ ಸಮಗ್ರ ಆಂತರಿಕ ಉತ್ಪನ್ನ, ಶೇ. ೬ ಕೈಗಾರಿಕಾ ವಲಯದ ಬೆಳವಣಿಗೆ, ಶೇ. ೨೯ ಬಡತನದ ರೇಖೆಯ ಕೆಳಗಿದ್ದು ಅವರ ಸ್ಥಿತಿಯಲ್ಲಿ ಯಾವುದೇ ರೀತಿಯ ಸುಧಾರಣೆಗಳು ಕಂಡುಬಂದಿಲ್ಲದಿರುವುದು ಎಲ್ಲರ ಅನುಭವದ ವಿಷಯ. ಆದರೆ, ಈ ನಿಟ್ಟಿನಲ್ಲಿ ಅಂಕಿ-ಅಂಶಗಳ ಪರಿಮಾಣಾತ್ಮಕತೆಯ ಅಂಶವು ನಗಣ್ಯವೆಂದೇ ಪರಿಗಣಿಸಬೇಕಾಗುತ್ತದೆ. ಸರ್ಕಾರವು ಈ ಎಲ್ಲಾ ಅಭಿವೃದ್ಧಿ ಕಾರ್ಯಯೋಜನೆಗಳ ಅವಘಡಗಳ ಬಗ್ಗೆ ಸೊಲ್ಲೆತ್ತುವವರನ್ನು ನಾನಾ ಬಗೆಯ ಹೆಸರಿಟ್ಟು ವಿರೋಧಿಗಳಂತೆ ಬಿಂಬಿಸುತ್ತಿದೆ.

ಕೇಂದ್ರದಲ್ಲಿ ಇಂದು ಪ್ರಧಾನಮಂತ್ರಿಯಾದ, ಹಿಂದೆ ಹಣಕಾಸು ಸಚಿವರಾಗಿದ್ದ ಡಾ॥ ಮನಮೋಹನ ಸಿಂಗ್, ದಿವಂಗತ ಪಿ. ವಿ. ನರಸಿಂಹರಾವ್ ಇನ್ನೂ ಮುಂತಾದವರು ದಿನಾಂಕ ೨೪, ಜುಲೈ ೧೯೯೧ರಂದು 'ಹೊಸ ಆರ್ಥಿಕ ನೀತಿ'ಯೆಂಬ ಸುಧಾರಣಾ ಯೋಜನೆಗಳನ್ನು ಘೋಷಿಸಿದ ಹೆಗ್ಗಳಿಕೆಗೆ ಪಾತ್ರರಾಗುತ್ತಾರೆ. ಒಂದೆಡೆ, ಬಂಡವಾಳಶಾಹಿ ದೇಶಗಳಿಂದ ಆರ್ಥಿಕ ಸುಧಾರಣೆಯೆಂಬ ಪಾಠ ಕಲಿತು ಅದನ್ನು ಚಾಚೂ ತಪ್ಪದೆ ಜಾರಿಗೆ ತರುವಲ್ಲಿ ಈ ತಂಡವು ಯಶಸ್ವಿಯಾದರೆ, ಇನ್ನೊಂದೆಡೆ, ಬಹುಪಾಲು ಜನರು ವಿಧಿಯಿಲ್ಲದೆ ಈ ನೀತಿಯನ್ನು ಅಂಗೀಕರಿಸಿರುವುದು ದುರಂತ. ೧೯೯೦-೯೧ರ ನಂತರದಲ್ಲಿ ಈ ನೀತಿಯನ್ನು ನಾವು ಪರ್ಯಾಯವಿಲ್ಲದೆ ಒಪ್ಪಿರುವುದಕ್ಕೆ ಅನೇಕ ಕಾರಣಗಳುಂಟು. ಉದಾಹರಣೆಗೆ, ನಿಯಂತ್ರಣ ಹಾಗೂ ನಿರ್ಬಂಧಿತ ನಿಯಮಗಳು, ಅತಿಯಾದ ವಿದೇಶಿ ಸಾಲ, ಹೆಚ್ಚಿನ ಪಾವತಿ ಶುಲ್ಕ, ಹಣದುಬ್ಬರ, ಅಂತರರಾಷ್ಟ್ರೀಯ ಹಣ ಮಾರುಕಟ್ಟೆಯಲ್ಲಿ ರೂಪಾಯಿಯ ಅಪಮೌಲ್ಯೀಕರಣ, ಹೆಚ್ಚುತ್ತಿರುವ ತೆರಿಗೆಯ ಭಾರ, ಇತ್ಯಾದಿಗಳ ಪಟ್ಟಿಯು ಬೆಳೆಯುತ್ತಲೇ ಹೋಗುತ್ತದೆ.

೧೯೫೦-೭೦ರ ದಶಕಗಳಲ್ಲಿ ಬಹುತೇಕ ಆರ್ಥಿಕ ಅಭಿವೃದ್ಧಿಯ ಎಲ್ಲಾ ಕಾರ್ಯಗಳು ಸಾರ್ವಜನಿಕ ವಲಯದ ಚೌಕಟ್ಟಿನಲ್ಲೇ ಮುಂದುವರಿದರೂ ಅದಕ್ಕೆ ಅವಶ್ಯವಿರುವ ಹಣಕಾಸಿನ ಬಂಡವಾಳ, ತಂತ್ರಜ್ಞಾನ, ಕಚ್ಚಾವಸ್ತುಗಳು, ಅರೆ ಸಿದ್ಧಪಡಿಸಿದ ವಸ್ತುಗಳ ಅತಿಯಾದ ಆಮದು, ನೇರವಾಗಿ ಪಾವತಿ ಶಿಲ್ಕಿನ ಬಾಬುಗಳ ಕಬಂಧಬಾಹುವಿನಲ್ಲಿ ಸಿಲುಕುವುದರ ಜೊತೆಗೆ ೧೯೭೪ರ ಕಚ್ಚಾತೈಲ ಬೆಲೆಗಳ ಹೆಚ್ಚಳದಿಂದ ಆಘಾತ ಉಂಟು ಮಾಡುವುದರ ಜೊತೆಗೆ ಆಂತರಿಕವಾಗಿ ಬಹುತೇಕ ಸಾರ್ವಜನಿಕ ಉದ್ಯಮಗಳಲ್ಲಿ ಹೆಚ್ಚಿದ ಉತ್ಪಾದನಾ ವೆಚ್ಚ, ಅಲ್ಪ ಲಾಭ ಹಾಗೂ ಅದಕ್ಷತೆಯ ಹಾದಿ ಹಿಡಿದು ನೆಲಕಚ್ಚಿದ್ದು, ಹಾಗೂ ಬ್ಯಾಂಕ್ ಆಫ್ ಇಂಗ್ಲೆಂಡ್, ಅಂತರರಾಷ್ಟ್ರೀಯ ಹಣಕಾಸು ನಿಧಿ, ವಿಶ್ವ ಬ್ಯಾಂಕ್‌ನಿಂದ ಪಡೆಯುವ ಸಾಲಗಳಿಗೆ ನಲವತ್ತೇಳು ಟನ್‌ಗಳಷ್ಟು ಚಿನ್ನವನ್ನು ಅಡವಿಡಲು ಭಾರತೀಯ ರಿಸರ್ವ್ ಬ್ಯಾಂಕ್‌ನಿಂದ ಕೊಂಡೊಯ್ದದ್ದು, ಮುಂತಾದ ಅಂಶಗಳು ೧೯೯೦-೯೧ರ ದಶಕದಲ್ಲಿ ಮೊದಲಾದ ಸುಧಾರಣೆಗಳನ್ನು ವಿಧಿಯಿಲ್ಲದೆ ನಮ್ಮನ್ನು ಒಪ್ಪುವಂತೆ ಮಾಡಿದ್ದು, ಒಂದೆಡೆಯಾದರೆ, ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ನಿಧಿ, ವಿಶ್ವ ವ್ಯಾಪಾರ ಸಂಘಟನೆಗಳು ಒತ್ತಾಯ ಪೂರ್ವಕವಾಗಿ 'ಸುಧಾರಣೆ'ಗಳನ್ನು ಜಾರಿಗೊಳಿಸುವಂತೆಯೂ, ಇಲ್ಲದಿದ್ದಲ್ಲಿ ಭಾರತಕ್ಕೆ ಉಳಿಗಾಲವಿಲ್ಲ ಎಂಬುದನ್ನು ಮನದಟ್ಟುಮಾಡಿದ್ದು ಇನ್ನೊಂದೆಡೆ .

'ಸುಧಾರಣೆ'ಯೆಂಬುದನ್ನು ಆರ್ಥಿಕ ಕ್ಷೇತ್ರದಿಂದ ಪ್ರಾರಂಭಿಸಿ ಇನ್ನೂ ಅನೇಕ ವಲಯಗಳಿಗೆ ವಿಸ್ತರಿಸುತ್ತ ವಿದೇಶಿ ನೇರ ಬಂಡವಾಳ ಹಾಗೂ ವಿದೇಶಿ ಸಾಂಸ್ಥಿಕ ಹೂಡಿಕೆಗಳಿಂದ ಭಾರತದ ಆರ್ಥಿಕತೆಯನ್ನು ಪರಕೀಯರಿಗೆ ಮುಕ್ತವಾಗಿ ತೆರೆದಿಡುವ ಪ್ರಯತ್ನಗಳು ಹಿಂದೆಂದಿಗಿಂತಲೂ ಈ ಎರಡು ದಶಕಗಳಲ್ಲಿ ಅವ್ಯಾಹತವಾಗಿ ನಡೆದಿವೆ. ಎಕರೆಗಟ್ಟಲೆ ಕೃಷಿ ಭೂಮಿಯನ್ನು ಅಮಾಯಕ

**ಬಿ. ಎನ್. ವೇಣುಗೋಪಾಲ್**

ರೈತರಿಂದ ಕನಿಷ್ಠ ಬೆಲೆಗೆ ಕಬಳಿಸುವುದರ ಜೊತೆಗೆ ಕೃಷಿ ಸಂಬಂಧಿತ ಉತ್ಪಾದನೆಯನ್ನು ಮೂಲೆಗುಂಪುಮಾಡಿ ಕೇವಲ ಭೌತಿಕ ಸರಕು-ಸೇವೆಗಳ ಉತ್ಪಾದನೆಗೆ ಎಲ್ಲ ರೀತಿಯ ಉತ್ತೇಜನವನ್ನು ಅಡೆತಡೆಯಿಲ್ಲದೆ ನೀಡಲಾಗುತ್ತಿದೆ. ಒಂದು ಮಾಹಿತಿಯ ಪ್ರಕಾರ ಟಯೋಟಾ ಕಂಪನಿಯು ಕನಕಪುರದಲ್ಲಿ ಎರಡು ಸಾವಿರ ಎಕರೆಗಳಿಗೂ ಅಧಿಕ ಕೃಷಿ ಭೂಮಿಯನ್ನು, ಒಡಿಶಾ ರಾಜ್ಯದಲ್ಲಿ ಹಾಗೂ ಉತ್ತರ-ಕರ್ನಾಟಕದ ಮುಂಡರಗಿಯಲ್ಲಿ ಪಾಸ್ಕೋ ಕಂಪನಿ ಭೂ-ಕಬಳಿಕೆಯ ಹುನ್ನಾರಗಳು ಜರುಗುತ್ತಿವೆ. ಈ ಪ್ರಕ್ರಿಯೆಯನ್ನು ವಿದ್ಯಾವಂತರು 'ಅಭಿವೃದ್ಧಿ'ಯೆಂದರೆ, ಅರ್ಥಶಾಸ್ತ್ರಜ್ಞರು 'ರಚನಾತ್ಮಕ ಬದಲಾವಣೆ'ಯೆಂದು ಬಣ್ಣಿಸುತ್ತಾರೆ. ಹೂಡಿಕೆಯ ಕಾರಣವನ್ನು ಮುಂದಿರಿಸಿ ದೇಶಿ ಹಾಗೂ ವಿದೇಶಿ ಖಾಸಗಿ ಬಂಡವಾಳ ಕಂಪನಿಗಳಿಗೆ ತೆರಿಗೆಯನ್ನು ಮನ್ನಾ ಮಾಡಿ, ಪುಡಿಗಾಸು ಕೂಲಿ ಪಡೆಯುವವರನ್ನು ತೆರಿಗೆಯ ವ್ಯಾಪ್ತಿಗೆ ತರುವುದನ್ನು 'ಸುಧಾರಣೆ' ಎನ್ನಬೇಕೆ ? ಸೆಲ್‌ಫೋನ್, ಕಂಪ್ಯೂಟರ್, ಸೌಂದರ್ಯ ಪ್ರಸಾಧನಗಳಿದ್ದರೆ ಅದೇ ಆಧುನಿಕ ಬದುಕಿನ ಕುರುಹು ಎಂಬ ವ್ಯಾಮೋಹ ದಟ್ಟವಾಗಿ ವ್ಯಾಪಿಸುವಂತೆ ಕಾರ್ಯತಂತ್ರಗಳನ್ನು ರೂಪಿಸಲಾಗುತ್ತಿದೆ. ನೂರ ಇಪ್ಪತ್ತು ಕೋಟಿ ಜನಸಂಖ್ಯೆಯಲ್ಲಿ ಬಹುತೇಕ ಜನರು ಅನಕ್ಷರತೆ ಹಾಗೂ ಅಪೌಷ್ಟಿಕತೆಯಿಂದ ಬಳಲುತ್ತಿರುವುದನ್ನು 'ಸುಧಾರಣೆ'ಯ ವ್ಯಾಪ್ತಿಗೆ ಸೇರಿಸಬಹುದೇ ಎಂಬುದನ್ನು ಡಾಲರ್ ರೂಪದಲ್ಲಿ ಸಾಲ ನೀಡುವ ವಿದೇಶಿ ಹಣಕಾಸು ಸಂಸ್ಥೆಗಳನ್ನು ಪ್ರಶ್ನಿಸಬೇಕೆಂದು ನಮ್ಮ ಮಂತ್ರಿ ವರ್ಯರಿಗೆ ಏಕೆ ಹೊಳೆಯುವುದಿಲ್ಲ ? ಆಹಾರ ಸಂಬಂಧಿ ಸರಕುಗಳ ಅಧಿಕ ಬೆಲೆಯಿಂದಾಗಿ ಜನಸಾಮಾನ್ಯನ ದೈನಂದಿನ ಸರಾಸರಿ ಅನುಭೋಗ ವೆಚ್ಚವು ಹಾಗೂ ಉಳಿತಾಯದ ಮೊತ್ತವು ನೆಲ ಕಚ್ಚುತ್ತಿದ್ದು ಜೀವನ ಮಟ್ಟವು ದುಸ್ತರವಾಗಿದೆ. ಕೇಂದ್ರ ಯೋಜನಾ ಆಯೋಗದ ಉಪಾಧ್ಯಕ್ಷರಾದ ಅಹ್ಲುವಾಲಿಯ ಅವರು ಈಗಿನ ಹಣದುಬ್ಬರದ ಬಗ್ಗೆ ಮರುಚಿಂತನೆ ಮಾಡಲು ಪ್ರಾರಂಭಿಸಿದ್ದಾರಂತೆ. ಅವರಿಗೆ ಅದು ಅರ್ಥವಾಗುವವರೆಗೂ ಆಹಾರ-ಪದಾರ್ಥಗಳ ಬೆಲೆಗಳು ಕಡಿಮೆಯಾಗಲು ಸಾಧ್ಯವಿಲ್ಲ. ಈ ಹಾದಿಯತ್ತ ಸರ್ಕಾರ ಮನಬಂದಂತೆ ಮಾಧ್ಯಮಗಳಿಗೆ ದಿನಕ್ಕೊಂದು ಹೇಳಿಕೆಯನ್ನು ನೀಡಿ ಜನರನ್ನು ದಿಕ್ಕು ತಪ್ಪಿಸುತ್ತಿದೆ. ಇತ್ತೀಚೆಗೆ, ಸರ್ಕಾರವು ಒಂದು ಕ್ವಿಂಟಾಲ್ ತೊಗರಿಬೇಳೆಗೆ ನಾಲ್ಕು ಸಾವಿರ ರೂಪಾಯಿಗಳಷ್ಟು ಬೆಂಬಲ ಬೆಲೆ ಸೂಚಿಸಿದೆ, ಅದು ರೈತರಿಗೆ ತಲುಪುವ ಖಾತರಿ ಮಾತ್ರ ಪ್ರಶ್ನಾರ್ಹ. ಆದರೆ ಅದೇ ಸರಕು ಮಾರುಕಟ್ಟೆ ತಲುಪಿದ ನಂತರ ಮುಕ್ತ ಮಾರುಕಟ್ಟೆಯಲ್ಲಿ ಗ್ರಾಹಕರಿಗೆ ವ್ಯಾಪಾರಿಗಳು ಯಾವ ಬೆಲೆಗೆ ಮಾರಾಟ ಮಾಡುತ್ತಿದ್ದಾರೆಂಬುದು ಮಾತ್ರ ಸರ್ಕಾರದ ಗಮನ ಸೆಳೆಯುವುದಿಲ್ಲ. ಕೋಲಿನ್ ಲೈಸ್ ತಮ್ಮ 'ಟೋಟಲ್ ಕ್ಯಾಪಿಟಲಿಸಂ - ಮಾರ್ಕೆಟ್ ಪಾಲಿಟಿಕ್ಸ್, ಮಾರ್ಕೆಟ್ ಸ್ಟೇಟ್' ಎಂಬ ಗ್ರಂಥದಲ್ಲಿ, ''ಅಭಿವೃದ್ಧಿಶೀಲ ದೇಶಗಳ ರಾಜಕೀಯವು 'ಮಾರುಕಟ್ಟೆಯಾಧಾರಿತ'ವಾಗಿದ್ದು, ಅಲ್ಲಿ ಜರುಗುವ ತ್ವರಿತ ಬದಲಾವಣೆಯಿಂದ ಅಂತಹ ದೇಶಗಳ 'ಪ್ರಜಾಪ್ರಭುತ್ವ'ವೂ ಅದೇ ಹಾದಿಯಲ್ಲಿ ಕ್ರಮಿಸುತ್ತಿರುತ್ತದೆ'' ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಅದನ್ನು ಇಂದು ನಾವೂ ನೋಡಬಹುದು. 'ಸುಧಾರಣೆ' ಎಂಬ ನೀತಿಗಳ ಬೆನ್ನುಹತ್ತಿದವರಿಗೆ ಇಂತಹ ಗ್ರಂಥಗಳ ಪರಾಮರ್ಶೆ ಅಗತ್ಯ. ಆ ಮೂಲಕ ಪ್ರಜಾಪ್ರತಿನಿಧಿಗಳು ನೀತಿ ನಿರೂಪಣೆಯಲ್ಲಿ ಅನುಸರಿಸುವ ಅಂಶಗಳು ಯಾರ ಹಿಡಿತದಲ್ಲಿದ್ದು, ಅದರ ಲಾಭವು ಯಾರಿಗೆ ದಕ್ಕಬಹುದೆಂಬುದನ್ನು ತಿಳಿಯಬಹುದು.




೧೯೯೧ರಿಂದೀಚೆಗೆ ಪ್ರತಿ ವರ್ಷವೂ ಭಾರತೀಯ ರಿಸರ್ವ್ ಬ್ಯಾಂಕು ಮುದ್ರಿಸಿ ಹೊರತರುವ 'ಭಾರತದಲ್ಲಿ ಕೃಷಿ ಬೆಳವಣಿಗೆ' ಎಂಬ ವಾರ್ಷಿಕ ಸಂಚಿಕೆಯಲ್ಲಿ, ಆರ್ಥಿಕ ಸುಧಾರಣೆಯ ನಂತರದ ವರ್ಷಗಳಲ್ಲಿ ಕೃಷಿ ಉತ್ಪಾದನೆಯು ಸಮಗ್ರ ಆಂತರಿಕ ಉತ್ಪನ್ನಕ್ಕೆ ತುಲನೆ ಮಾಡಿದಾಗ ಒಟ್ಟು ಉತ್ಪಾದನೆಯಲ್ಲಿ ಗಣನೀಯ ಇಳಿಕೆ ಕಂಡುಬಂದಿರುವುದನ್ನು ಒಪ್ಪಿಕೊಂಡಿದೆ. ಪ್ರಸ್ತುತ ಕೃಷಿ ಭೂಮಿಯನ್ನು ವಿಶೇಷ ಆರ್ಥಿಕ ವಲಯಗಳಿಗೆ ಹಾಗೂ ವಿದೇಶಿ ಕಂಪನಿಗಳಿಗೆ ಕನಿಷ್ಠ ಬೆಲೆಯಲ್ಲಿ ಸಾರಾಸಗಟಾಗಿ ಮಾರಾಟ ಮಾಡುವುದರ ಮೂಲಕ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಸಲುವಾಗಿ ಮುಂಬರುವ ದಿನಗಳಲ್ಲಿ ಕೃಷಿ ಉತ್ಪಾದನಾ ಮುಗ್ಗಟ್ಟನ್ನು ದೇಶ ಎದುರುನೋಡಬೇಕೆ, ಎಂಬುದರ ಬಗ್ಗೆ ಈಗಲೇ ಎಚ್ಚೆತ್ತುಕೊಳ್ಳುವುದು ಅಗತ್ಯ. ಇಲ್ಲದಿದ್ದಲ್ಲಿ ಮೂಲ ಕೃಷಿ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುವ ವಿಷಮ ಸ್ಥಿತಿ ಎದುರಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

ಸೆಬಿ (ಸ್ಟಾಕ್ ಎಕ್ಸ್‌ಚೇಂಜ್ ಬೋರ್ಡ್ ಆಫ್ ಇಂಡಿಯಾ) ಸಮೀಕ್ಷೆ ಅನುಸಾರ ೧೯೯೨ರಿಂದ, ಎಂದರೆ ಉದಾರೀಕರಣ ನೀತಿಯನ್ನು ಜಾರಿಗೊಳಿಸಿದಾಗಿನಿಂದ ೨೦೧೦ರವರೆಗೆ ೧೦೦.೯ ಬಿಲಿಯನ್ ಡಾಲರ್‌ಗಳಷ್ಟು ಹಣವನ್ನು ವಿದೇಶಿ ಕಂಪನಿಗಳು ದೇಶದ ವಿವಿಧ ಕ್ಷೇತ್ರಗಳಲ್ಲಿ ತೊಡಗಿಸಿವೆ. ಈ ಹೂಡಿಕೆಯ ಲಾಭವು ಆ ಕಂಪನಿಗಳಿಗೆ ಮಾತ್ರ ಸೇರುತ್ತದೆ. ತಂತ್ರಜ್ಞಾನ ಕ್ಷೇತ್ರದಲ್ಲಿ, ಅದರಲ್ಲೂ ಗಣಕ ತಂತ್ರಾಂಶ ಕ್ಷೇತ್ರದಲ್ಲಿ ಬಂಡವಾಳ ಹಿಂತೆಗೆತ ಕ್ಷೀಣಿಸಿದೆ. ಇದರ ಪರಿಣಾಮವನ್ನು ಹೇಗೆ ನಿರ್ವಹಿಸಬೇಕೆಂಬ ಪ್ರಶ್ನೆಗೆ ಉತ್ತರವು 'ಸುಧಾರಣೆ'ಗಳಲ್ಲಿವೆಯೆಂಬುದನ್ನು ಖಾತರಿ ಪಡಿಸಿಕೊಳ್ಳಬೇಕಾಗಿದೆ.

'ಆರ್ಥಿಕ ಸುಧಾರಣೆ'ಗಳ ಹಾದಿಯಲ್ಲಿ ಯೋಜನೆಗಳನ್ನು ಹಾಗೂ ಅದರ ಫಲಶ್ರುತಿಯನ್ನು ಮಾಪನ ಮಾಡಲು ಅನೇಕ ಪರಿಕರಗಳನ್ನು ರೂಪಿಸುವ ಕೆಲಸವನ್ನು ವಿಶ್ವಬ್ಯಾಂಕ್‌ಗೆ ಹೊರಗುತ್ತಿಗೆ ನೀಡಲಾಗಿದ್ದು, ಅದು ಆತ್ಯಾಕರ್ಷಕ ಪದಪುಂಜಗಳಿರುವ ಮಾಪನ ಪರಿಕರಗಳನ್ನು ಸಾದರಪಡಿಸುತ್ತದೆ. ಅದರಲ್ಲಿ 'ಆಂತರ್ಗಿಕ' ಅಥವಾ 'ಒಳಗೊಳ್ಳುವ ಬೆಳವಣಿಗೆ' (ಇನ್‌ಕ್ಲೂಸಿವ್-ಗ್ರೋತ್) ಎಂಬುದೊಂದು. ನಮ್ಮ ದೇಶದ ಮುಕ್ತಮಾರುಕಟ್ಟೆಯ ವ್ಯವಸ್ಥೆಯಲ್ಲಿ ಸಾಮಾಜಿಕ ವೈವಿಧ್ಯತೆಯನ್ನು ಹೊಂದಿರುವ ಜನಸಮುದಾಯಗಳನ್ನು ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಹೊರಗಿಟ್ಟು ಕೇವಲ ಆರ್ಥಿಕವಾಗಿ ಅವರನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನವು ಹೇಗೆ ಸುಧಾರಣೆ ಎನಿಸಿಕೊಳ್ಳುತ್ತದೆ ? ಜನರನ್ನು ಅನಾದಿಕಾಲದಿಂದಲೂ ಅವರು ವಾಸಿಸುವ ಪ್ರದೇಶ, ಪರಿಸರದಿಂದ ಒಕ್ಕಲೆಬ್ಬಿಸಿ, ಅಲ್ಲಿರುವ ನೈಸರ್ಗಿಕ ಸಂಪತ್ತಿನಿಂದ ಸರಕುಗಳನ್ನು ಉತ್ಪಾದಿಸಿ ಇನ್ನಾವುದೋ ದೇಶಕ್ಕೆ ಮಾರಾಟ ಮಾಡುವ ವಿದೇಶಿಯರಿಗೆ ದೇಶಿ ಸರ್ಕಾರಗಳು ನೈಸರ್ಗಿಕ ಸಂಪನ್ಮೂಲಗಳಾದ ಭೂಮಿ, ನೀರನ್ನು ಕಡಿಮೆ ಬೆಲೆಗೆ ನೀಡಿ, ಅದನ್ನವರು ಯಥೇಚ್ಛವಾಗಿ ತಮ್ಮ ಲಾಭಕ್ಕಾಗಿ ಬರಿದುಮಾಡುತ್ತಿರುವಾಗ 'ಸುಸ್ಥಿರ ಅಭಿವೃದ್ಧಿ'ಯನ್ನು ಮುಂಬರುವ ದಿನಗಳಲ್ಲಿ ಊಹಿಸಿಕೊಳ್ಳಲಸಾಧ್ಯ.

ದೇಶಿ ಶಿಕ್ಷಣ, ಕೌಶಲ್ಯ, ತಂತ್ರಜ್ಞಾನ, ನಿರ್ವಹಣಾ ಚತುರತೆಗೆ ಹಾಗೂ ನಾವೀನ್ಯತೆಗೆ ಎಲ್ಲಕ್ಕೂ ವಿದೇಶಿಗರನ್ನು ಅನುಸರಿಸಿ, ಅವರ ಹಾದಿಹಿಡಿಯುವುದು ಸಾಮಾನ್ಯವಾಗಿಬಿಟ್ಟಿದೆ. ಭೌತಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಮೊದಲ ಭಾರತೀಯರಾದ ಸಿ. ವಿ. ರಾಮನ್ ಅವರು ತಮ್ಮ ಪ್ರಯೋಗಕ್ಕೆ ಬೇಕಾದ ಸಲಕರಣೆಗಳನ್ನು ತಾವೇ ಸಿದ್ಧಪಡಿಸಿಕೊಳ್ಳಬೇಕೆಂದು ಹಾಗೂ ಅದಕ್ಕಾಗಿ ವಿದೇಶದಿಂದ ಆಮದು ಮಾಡಿಕೊಳ್ಳುವುದು ಅನವಶ್ಯಕವೆಂದು ಅಭಿಪ್ರಾಯ ಪಟ್ಟಿದ್ದರು. ಅವರ ಕಾಲಕ್ಕೂ ಹಾಗೂ ಪ್ರಸ್ತುತ ವಿಜ್ಞಾನ-ತಂತ್ರಜ್ಞಾನದಲ್ಲಿ ವಿಷಯವನ್ನು ಗ್ರಹಿಸುವ ಮತ್ತು ಪ್ರಯೋಗಿಸುವ ಉತ್ತಮ ಸಾಧನ-ಸಲಕರಣೆಗಳು ಇಂದು ಲಭ್ಯವಿದ್ದು, ಅವೆಲ್ಲವೂ ಅಭಿವೃದ್ಧಿಹೊಂದಿದ ದೇಶಗಳಲ್ಲೇ ದೊರೆಯುತ್ತವೆ. ಸರ್ಕಾರಗಳು ಸ್ಥಾನೀಯವಾದ ಜ್ಞಾನವನ್ನು ಸುಧಾರಿಸಿ, ಅಭಿವೃದ್ಧಿಪಡಿಸಿ, ಉಪಯೋಗಿಸುವ ನಿಟ್ಟಿನಲ್ಲಿ ಉತ್ತೇಜನ ನೀಡುವುದು ಉತ್ತಮ ಸುಧಾರಣೆಯಾಗಬಲ್ಲುದು. ಕರ್ನಾಟಕದ ಮಲೆನಾಡಿನ ಪ್ರದೇಶ ಹಾಗೂ ಕೇರಳದಲ್ಲಿನ ರೈತರು ಅಲ್ಲೇ ದೊರೆಯುವ ಪರಿಕರಗಳಿಂದ ತಾವು ಮಾಡುವ ವ್ಯವಸಾಯಕ್ಕೆ ಅನೇಕ ಸಾಧನಗಳನ್ನು ತಯಾರಿಸಿ ಉಪಯೋಗಿಸುವುದನ್ನು ನಾವು ಕಾಣಬಹುದು. ಇಲ್ಲಿ ಸಿ. ವಿ. ರಾಮನ್ ಅವರ ವಿಚಾರಧಾರೆಯು ಪ್ರಸ್ತುತ ಎನಿಸುತ್ತದೆ. ಆದರೆ ಕೇವಲ ಹತ್ತು 'ಜ್ಞಾನಿ'ಗಳನ್ನು ಜ್ಞಾನ ಆಯೋಗ ಮುಖೇನ ಸಂಘಟಿಸಿ ಅವರ ಹಣವನ್ನು ವ್ಯಯ ಮಾಡುವುದರಲ್ಲಿ ಅಗಾಧವಾದ ಫಲಿತಾಂಶವನ್ನು ಪಡೆಯಲು ಅಸಾಧ್ಯವೆಂಬುದನ್ನು ಸರ್ಕಾರಗಳು ಅರಿಯಬೇಕು.

ಭಾರತದಂತಹ ದೇಶಕ್ಕೆ 'ಆರ್ಥಿಕ ಸುಧಾರಣೆ' ಎಂಬ ನೀತಿಯು ತನ್ನಿಂದಾದ, ಸ್ವಪ್ರಯತ್ನಪೂರ್ವಕವಾದ ಕಾರ್ಯಯೋಜನೆಯೇನಲ್ಲ. ಅವನ್ನು ಬೇರೆ ಪರ್ಯಾಯವಿಲ್ಲದೆ ಒತ್ತಾಯಪೂರ್ವಕವಾಗಿ 'ಸುಧಾರಣೆ'ಗಳೆಂಬ ಹೆಸರಿನಲ್ಲಿ ನಮ್ಮ ಮೇಲೆ ಹೇರಲಾಗಿದೆ. ಇದು ಇಂದು ನವವಸಾಹತುಶಾಹಿ ರೂಪ ಪಡೆದುಕೊಂಡಿರುವ ಬಗ್ಗೆ ಎಚ್ಚರವಹಿಸಿ ತಡೆಗಟ್ಟುವ ನಿಟ್ಟಿನಲ್ಲಿ ಕಾರ್ಯತಂತ್ರಗಳನ್ನು ಒಗ್ಗಟ್ಟಿನಿಂದ ರೂಪಿಸಿ ಜಾರಿಗೆ ತರುವುದು ಅಗತ್ಯ. ಜನಪರವಲ್ಲದ ಸುಧಾರಣೆ, ಸುಧಾರಣೆಯೇ ಅಲ್ಲ. ಈ ಮಾತು ಆರ್ಥಿಕ ಕ್ಷೇತ್ರವೇ ಅಲ್ಲದೆ ಇತರ ಕ್ಷೇತ್ರಗಳಿಗೂ ಅನ್ವಯಿಸುತ್ತದೆ.

**ಬಿ. ಎನ್. ವೇಣುಗೋಪಾಲ್**
ನಂ. ೪೬೬ (೧೫೫ ಹೊಸ ನಂ.), ೮ನೇ ಮುಖ್ಯರಸ್ತೆ, ತ. ರಾ. ಸುಬ್ಬರಾವ್ ರಸ್ತೆ, ಹನುಮಂತನಗರ, ಬೆಂಗಳೂರು - ೫೬೦ ೦೧೯





ಅಹ್ಮದಾಬಾದಿನಿಂದ ೧೮ ಕಿಲೋ ಮೀಟರ್ ಉತ್ತರಕ್ಕೆ 'ಅಡಲಾಜ್' ಎಂಬ ಹೆಸರಿನ ಬಾವಿ ಇದೆ. ಇದೊಂದು ವಿಶಿಷ್ಟ ವಾಸ್ತುಶೈಲಿಯ ಸುಂದರ ಕೆತ್ತನೆಗಳುಳ್ಳ ಬಾವಿ. ವಘೇಲಾ ಅರಸ ಆರಂಭಿಸಿದ, ಅರಮನೆಯಂತಿರುವ, ಅಮೋಘ ವಾಸ್ತುಶೈಲಿಯ, ಅಷ್ಟಕೋನದ ಈ ಸುಂದರ ಶಿಲಾಬಾವಿಯ ನಿರ್ಮಾಣವನ್ನು ರಾಣಿ ರುಡಾಬಾಯಿ ಕ್ರಿ.ಶ. ೧೪೯೯ರಲ್ಲಿ ಮುಗಿಸುತ್ತಾಳೆ.

ಈ ಬಾವಿಯಲ್ಲಿ ೫ ಅಂತಸ್ತುಗಳಿವೆ. ಆಳ ೯೦ ಅಡಿ. ಈ ಬಾವಿಯ ತಳದ ಅಂತರ್ಜಲದ ಸೆಲೆ ಬತ್ತುವುದಿಲ್ಲ ಎನ್ನುತ್ತಾರೆ. ಇದರಲ್ಲಿ ಎರಡು ಬಾವಿಗಳಿವೆ. ಒಂದು, ಕುಡಿಯುವ ನೀರಿಗಾಗಿ. ಇನ್ನೊಂದು, ಇತರ ಕೆಲಸಗಳಿಗೆ ಬೇಕಾದ ಮಳೆ ನೀರು ಸಂಗ್ರಹಕ್ಕಾಗಿ. ಮಳೆ ನೀರು ಸಂಗ್ರಹದ ಬಾವಿ ಉತ್ತರ ಮೂಲೆಯ ಕೋನದಲ್ಲಿದೆ.

ಕಾವಲುಗಾರ ನೀಡುವ ಮಾಹಿತಿಯ ಪ್ರಕಾರ ಅಡಲಾಜಿಯ ಹಳ್ಳಿಯಲ್ಲಿ ಕುಡಿಯುವ ನೀರಿಗೆ ಬರ ಇತ್ತು. ಈ ಬಾವಿ ತೋಡುತ್ತಿರುವಾಗಲೇ ಹಳ್ಳಿಯ ಜನರು ಈ ಬಾವಿಯ ನೀರಿಗಾಗಿ ಬರುತ್ತಿದ್ದರು. ಅಲ್ಲಿ ಸುತ್ತ ಮುತ್ತ ಎಲ್ಲಿಯೂ ಇಷ್ಟು ಒಳ್ಳೆಯ ಬಾವಿ ಹಾಗೂ ನೀರು ದೊರಕುತ್ತಿರಲಿಲ್ಲ. ನೀರು ಸೇದುವ ಮೊದಲು ಬಾವಿಯ ಅಂತಸ್ತುಗಳ ಕಿಂಡಿಗಳಲ್ಲಿ ಅಳವಡಿಸಲಾದ (ಹಿಂದೂ) ದೇವತೆಗಳಿಗೆ ಕೈ ಮುಗಿದು ನೀರು ಸೇದಿ ಅಲ್ಲಿಯೇ ಕೊಂಚ ಕಾಲ ವಿಶ್ರಮಿಸಿ ಹೋಗುತ್ತಿದ್ದರು. ಎರಡು ಮಹಾದ್ವಾರಗಳ ಮಾದರಿಯಲ್ಲಿ ಈ ಬಾವಿಗೆ ಇಳಿಯಲು ಮೆಟ್ಟಲುಗಳಿವೆ. ಈ ಮೆಟ್ಟಲುಗಳ ಉದ್ದ ಸುಮಾರು ೨೦ ಅಡಿ. ಇವು ನೇರವಾಗಿ ಬಾವಿಗೆ ಇಳಿಯುವ ಮೆಟ್ಟಲುಗಳಲ್ಲ. ನೆಲಮಟ್ಟದಿಂದ ಇಳಿಯುವುದು ಕೆಳಗಿನ ಸಮತಟ್ಟು ನೆಲಕ್ಕೆ. ಇಲ್ಲಿಗೆ ಇಳಿದ ಮೇಲೆ ಬಿಸಿಲು ತಾಗುವುದಿಲ್ಲ. ಇಲ್ಲಿಂದಲೇ ತಂಪು ವಾತಾವರಣ ಆರಂಭವಾಗುತ್ತದೆ. ಇಲ್ಲಿ ದಿಕ್ಕು ಬದಲಿಸಿ ಬಾವಿಯ ಕಡೆ ಇಳಿಯಲು ಮೆಟ್ಟಲುಗಳಿವೆ. ಬಾವಿಯ ಹೊರಭಾಗದಲ್ಲಿ ಇರುವ ಉಷ್ಣಾಂಶಕ್ಕಿಂತ ಬಾವಿಯ ಒಳಭಾಗದ ನೆಲ ಮಹಡಿಯಲ್ಲಿ ೬ ಡಿಗ್ರಿ ಕಡಿಮೆ ಉಷ್ಣಾಂಶ ಇರುತ್ತದೆ. ಆ ಪ್ರದೇಶದ ಜನರಿಗೆ ಇದು ತಂಪಿನ ವಾತಾವರಣ.

ಇನ್ನೊಂದು ಮೆಟ್ಟಲು ಅಟ್ಟದಿಂದ (ತಾರಸಿಯಿಂದ) ನೇರವಾಗಿ ತಿರುವು ಪಡೆದು ಬಾವಿಗಿಳಿಯುತ್ತದೆ.

ಈ ಬಾವಿಯ ಮೊದಲ ಅಂತಸ್ತಿನವರೆಗೆ ಮಳೆಯ ದಿನಗಳಲ್ಲಿ ನೀರು ತುಂಬಿರುತ್ತಿತ್ತು ಎನ್ನುತ್ತಾನೆ ಕಾವಲುಗಾರ. ಈಗ ಒಳಬಾವಿಯ ಒಳಗೆ ನೀರು ಇದೆ. ಜನರು ಇಳಿಯುವ ಮೆಟ್ಟಲಿಂದ ಇಣುಕಿದರೆ ಬಾವಿಯ ಒಳಗೆ ಇರುವ ನೀರು ಕಾಣುತ್ತದೆ. ಬಾವಿಯನ್ನು ಕಬ್ಬಿಣದ ಪಟ್ಟಿಕೆಗಳಿಂದ ಮುಚ್ಚಿದ್ದಾರೆ. ಇದರ ಅಟ್ಟವು ಭೂಮಿಯ ಮಟ್ಟದಲ್ಲಿದೆ. ಅಟ್ಟದ ಮೇಲೆಯೂ ಕಬ್ಬಿಣದ ಜಾಲರಿಗಳ ಪಟ್ಟಿಕೆಗಳಿಂದ ಮುಚ್ಚಿದ್ದಾರೆ. ಅಷ್ಟಕೋನದ ಆಳಬಾವಿ ನೇರವಾಗಿ ಆಕಾಶಕ್ಕೆ ತೆರೆದಿದೆ.

ಇಡೀ ಬಾವಿಯ ಕಟ್ಟಡ ಸುಂದರ ಚಿತ್ರದಂತೆ ಅನುಭವವಾಗುತ್ತದೆ. ಕಲ್ಲಿನ ಗೋಡೆಗಳ ಮೇಲೆ, ಕಂಬಗಳ ಮೇಲೆ ಸುಂದರ ಚಿತ್ರಗಳ ರಚನೆಗಳಿವೆ. ಕೀರ್ತಿಮುಖ, ಕಮಲ, ಹಕ್ಕಿಗಳು, ಮೀನುಗಳು, ಹೂವುಗಳು, ಪುರಾಣಕ್ಕೆ ಸಂಬಂಧಿಸಿದ ಚಿತ್ರಗಳು, ಮಜ್ಜಿಗೆ ಕಡೆಯುವ ಮಹಿಳೆಯರ ಚಿತ್ರಗಳು, ನೃತ್ಯಗಾರ್ತಿಯರ ಚಿತ್ರಗಳು, ಸಂಗೀತಗಾರರು – ಹೀಗೆ ವೈವಿಧ್ಯಮಯ ಶಿಲ್ಪ ಚಿತ್ರಗಳಿವೆ. ಎಲ್ಲವೂ ಇಂಟರ್‌ಲಾಕ್ ಪದ್ಧತಿಯ ರಚನೆ. ಸಿಮೆಂಟ್ ಬಳಸಿಲ್ಲ. ಮೊದಲ ಮಹಡಿ ಇಳಿದು ಬಾವಿಯ ಕಡೆ ಇಳಿಯುವ ಮೆಟ್ಟಲ ಬಳಿ ಇಕ್ಕೆಲಗಳಲ್ಲಿ ಇಬ್ಬರು ಕುಳಿತುಕೊಳ್ಳಬಹುದಾದಷ್ಟು ಪುಟ್ಟ ರಥದಂತೆ ಇರುವ ಕೋಣೆಗಳಿವೆ.

ಈ ಮಾರ್ಗ ಟ್ರೇಡ್ ರೂಟ್ (ರೇಷ್ಮೆ ಮಾರ್ಗ) ಆಗಿತ್ತಂತೆ. ಈ ಮಾರ್ಗದಲ್ಲಿ ವ್ಯಾಪಾರಿಗಳು, ಪ್ರವಾಸಿಗರು, ಮತ್ತು ಯಾತ್ರಾರ್ಥಿಗಳು ಪ್ರಯಾಣಿಸುತ್ತಿದ್ದರು. ಅವರಿಗೆಲ್ಲ ಈ ಬಾವಿಯ ತಂಪುನೆಲ ವಿಶ್ರಾಂತಿ ಸ್ಥಳವೂ ಆಗಿತ್ತು ಎನ್ನುತ್ತಾರೆ.

ಇದು ಮರಳು ಶಿಲೆಗಳ ಕಟ್ಟಡ. ರಾಜಸ್ಥಾನದಿಂದ ಆನೆಗಳ ಮೂಲಕ ಮರಳು ಶಿಲೆಗಳನ್ನು ತರಲಾಯಿತು. ಇದರ ಕಂಭಗಳಲ್ಲಿ ಸಂಸ್ಕೃತ ಮತ್ತು ಪಾಲಿ ಭಾಷೆಯ ಬರಹಗಳಿವೆ. ಕಲಾಕೃತಿಯಂತೆ ಮನಸೂರೆಗೊಳ್ಳುವ ಈ ಅಡಲಾಜಿ ಬಾವಿ ಇಂಡೋ - ಇಸ್ಲಾಮಿಕ್ ವಾಸ್ತುಶೈಲಿಯ ಕೊಡುಗೆ. ಇದರ ನಿರ್ಮಾಣವನ್ನು ೫ ಮಂದಿ ಮುಸ್ಲಿಮ್ ವಾಸ್ತುಶಿಲ್ಪಿಗಳು ಮಾಡಿದ್ದರಂತೆ. ಈ ಬಾವಿಯ ಅಂದ ಕಂಡ ಮುಸ್ಲಿಮ್ ಅರಸ ಇಂತಹ ಬಾವಿಯನ್ನು ಇನ್ನೆಲ್ಲಿಯೂ ಕಟ್ಟದಿರಲಿ ಎಂದು ಇದನ್ನು ರಚಿಸಿದ ಐದು

# ವಿಶ್ವಪ್ರಸಿದ್ಧ ಅಡಲಾಜಿ ಸೋಪಾನಗಳ ಬಾವಿ

ಡಾ|| ಇಂದಿರಾ ಹೆಗ್ಗಡೆ





ವಾಸ್ತುಶಿಲ್ಪಿಗಳನ್ನು ಕೊಲ್ಲುತ್ತಾನೆ. (ಉಳಿದ ಇಬ್ಬರ ಮಾಹಿತಿ ಇಲ್ಲ. ಮೊದಲೆ ಸತ್ತಿರಬಹುದು). ಬಾವಿಯ ಅಟ್ಟದ ಭಾಗದ ಮೂಲೆಯಲ್ಲಿ ಅವರ ಐದು ಸಮಾಧಿಗಳಿವೆ.

**ಅಡಲಾಜಿ ಬಾವಿಯ ಇತಿಹಾಸ**

ಅಡಲಾಜಿ ಬಾವಿಗೊಂದು ದುರಂತ ಇತಿಹಾಸ ಇದೆ.

'ಅಂಡಲಾಜಿ' ಎನ್ನುವ ಈ ಹಳ್ಳಿಯ ಹೆಸರಿನಿಂದಲೇ ಈ ಬಾವಿ ಪ್ರಸಿದ್ಧಿಯಾಗಿ ಮುಂದೆ 'ಅಡಲಾಜಿ' ಎಂದುಳಿಯಿತು. ಅದುವರೆಗೆ 'ಅಂಡಲಾಜಿ' ಹಳ್ಳಿಯಲ್ಲಿ ಕುಡಿಯುವ ನೀರಿಗೆ ಬರ ಇತ್ತು. ೧೪೯೯ರವರೆಗೆ ಈ ಹಳ್ಳಿ ದಾಂಡ್ಯೆ ದೇಶವಾಗಿತ್ತು. ವಘೇಲಾ ವಂಶದ ವೀರಸಿನ್ಹ ಅದನ್ನು ಆಳುತ್ತಿದ್ದ. ಊರಿನ ಜನರಿಗೆ ಬೇಕಾಗುವ ಕುಡಿಯುವ ನೀರಿಗಾಗಿ ಈ ಬಾವಿಯ ಕೆಲಸವನ್ನು ಅರಸ ಆರಂಭಿಸಿದ್ದ. ದಾಂಡ್ಯೆ ದೇಶದ ನೆರೆಯ ದೇಶದಲ್ಲಿ ಮಹ್ಮದ್ ಬೇಗ್ ಎಂಬ ಮುಸ್ಲಿಮ್ ಅರಸ ಆಳುತ್ತಿದ್ದ. ಆತ ದಾಂಡ್ಯೆ ದೇಶವನ್ನು ಆಕ್ರಮಿಸಿ ವೀರಸಿನ್ಹನನ್ನು ಕೊಲ್ಲುತ್ತಾನೆ. ರಾಣಿ ರುಡಾಬಾಯಿ ವಘೇಲಾದ ಅರಸ ವೀರಸಿನ್ಹನ ಮಡದಿ. ವೀರಸಿನ್ಹನ ರೂಪಸಿ ರಾಣಿ. ಆಕೆ ರಾಜನ ಜೊತೆ ಸಹಗಮನ ಮಾಡಬೇಕಿತ್ತು. ಆದರೆ ತನ್ನ ಊರಿನ ಜನರಿಗೆ ಕುಡಿಯುವ ಮತ್ತು ಇತರ ಕೆಲಸಗಳಿಗಾಗಿ ತೋಡಲಾರಂಭಿಸಿದ ಬಾವಿಯ ಕೆಲಸ ಪೂರ್ಣಗೊಳಿಸದೆ ಆಕೆಗೆ ಸಾಯಲು ಇಚ್ಛೆ ಇರಲಿಲ್ಲ. ಜನರಿಗಾಗಿ ಹಿಡಿದ ಕೆಲಸ ಮುಗಿಯುವವರೆಗೆ ಬದುಕಲು ನಿರ್ಧಾರ ಮಾಡುತ್ತಾಳೆ. ಇಷ್ಟರಲ್ಲಿ ರಾಣಿ ರುಡಾಬಾಯಿಯ ಸೌಂದರ್ಯಕ್ಕೆ ಮನಸೋತು ಅವಳನ್ನು ಮದುವೆಯಾಗುವುದಾಗಿ ಪ್ರಸ್ತಾವನೆಯನ್ನು ಮಹ್ಮದ್ ಬೇಗ್ ಕಳುಹಿಸಿಕೊಡುತ್ತಾನೆ. ದುಃಖತಪ್ತ, ಆದರೆ, ಬುದ್ಧಿವಂತೆ ರಾಣಿ ೫ ಅಂತಸ್ತುಗಳ ಮೆಟ್ಟಲುಗಳುಳ್ಳ ಈ ಬಾವಿಯನ್ನು ಪೂರ್ಣಗೊಳಿಸಲು ಸಹಕಾರ ನೀಡಿದರೆ ಆತನ ಪ್ರಸ್ತಾವನೆಯನ್ನು ಒಪ್ಪುವುದಾಗಿ ಹೇಳುತ್ತಾಳೆ. ರಾಣಿಯ ಆಕರ್ಷಣೆಗೊಳಗಾಗಿದ್ದ ಮುಸ್ಲಿಮ್ ಅರಸ ಆಕೆಯ ಕರಾರನ್ನು ಒಪ್ಪುತ್ತಾನೆ. ರುಡಾಬಾಯಿ ಮುಸ್ಲಿಮ್ ವಾಸ್ತುಶಿಲ್ಪಿಗಳ ಸಹಾಯದಿಂದ ಬಾವಿಯ ಕೆಲಸವನ್ನು ಸಕಾಲಕ್ಕೆ ಪೂರ್ಣಗೊಳಿಸಿದರೂ ಅಪೂರ್ವ ಶಿಲ್ಪಕಲೆಯ ಬಾವಿಯ ಡೂಮ್‌ಅನ್ನು ಮುಗಿಸಿರಲಿಲ್ಲ. ಕಾದು ಬೇಸತ್ತ ಮುಸ್ಲಿಮ್ ಅರಸ ತನ್ನ ಕರಾರನ್ನು ಮುರಿದು ಈಕೆಯನ್ನು ಮದುವೆಯಾಗಲು ಮುಂದುವರಿಯುತ್ತಾನೆ. ಮರುದಿನವೇ ರಾಣಿ ರುಡಾಬಾಯಿ ಈ ಬಾವಿಗೆ ಪ್ರದಕ್ಷಿಣೆ ಮಾಡಿ ಪ್ರಾರ್ಥನೆ ಸಲ್ಲಿಸಿ ಬಾವಿಯ ನೀರಿಗೆ ಧುಮುಕಿ ಬಲಿದಾನ ಮಾಡುತ್ತಾಳೆ.

**ಕಾವಲುಗಾರ ನೀಡಿದ ಮಾಹಿತಿ ಹೀಗಿದೆ**

ಮುಸ್ಲಿಮ್ ಅರಸನ ಜೊತೆ ನಡೆದ ಹೋರಾಟದಲ್ಲಿ ವಘೇಲಾ ಅರಸ ಸಾವನ್ನಪ್ಪುತ್ತಾನೆ. ಆತನ ರಾಣಿ ರುಡಾಬಾಯಿ ಅಪ್ರತಿಮ ಸೌಂದರ್ಯವತಿ. ಮುಸ್ಲಿಮ್ ಅರಸನ ಕಿವಿಗೂ ಅವಳ ರೂಪದ ಪ್ರಶಂಸೆ ತಲುಪುತ್ತದೆ. ಆಗ ಆತನ ದೃಷ್ಟಿ ರಾಣಿ ರುಡಾಬಾಯಿಯ ಮೇಲೆ ಬೀಳುತ್ತದೆ. ಆಕೆಯನ್ನು ತಾನು ವರಿಸುವುದಾಗಿ ಕೇಳಿಕೊಳ್ಳುತ್ತಾನೆ. ಆತನನ್ನು ನಿರಾಕರಿಸಲು ಧೈರ್ಯ ಸಾಲದೆ, ರಾಣಿ ತಾನು ಕಟ್ಟಿಸುತ್ತಿರುವ ೫ ಅಂತಸ್ತುಗಳ ಅಷ್ಟಕೋನಗಳ ಬಾವಿ ಪೂರ್ಣಗೊಳ್ಳುವವರೆಗೆ ತಾನು ಮದುವೆಯಾಗಲಾರೆ ಎಂಬ ದೀಕ್ಷೆ ಪಡೆದುದಾಗಿ ಹೇಳುತ್ತಾಳೆ. ರುಡಾಬಾಯಿ ೭ ಮಂದಿ ಮುಸ್ಲಿಮ್ ವಾಸ್ತುಶಿಲ್ಪಿಗಳ ಸಹಾಯದಿಂದ ಬಾವಿಯನ್ನು ಕಟ್ಟಿದರೂ ಕೆಲಸವನ್ನು ಪೂರ್ಣಗೊಳಿಸುವುದಿಲ್ಲ. ಬಾವಿ ಪೂರ್ಣವಾಗುವುದನ್ನೇ ಮುಸ್ಲಿಮ್ ಅರಸ ಕಾಯುತ್ತಾನೆ. ದಶಕಗಳು ಕಳೆದರೂ ಬಾವಿ ಪೂರ್ಣ ಆಗುವುದಿಲ್ಲ. ಅವಳಿಗಾಗಿ ಪರಿತಪಿಸುತ್ತಿದ್ದ ಮುಸ್ಲಿಮ್ ಅರಸ ಒಂದು ಬಾರಿ ಅವಳನ್ನು ಮದುವೆಯಾಗಲು ಒತ್ತಡ ತರುತ್ತಾನೆ. ಆಗ ಹೆದರಿದ ರಾಣಿ ಅದೇ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅವಳ ಈ ಬಲಿದಾನವನ್ನು 'ಸಹಗಮನ' ಎಂದು ಊರವರು ನಂಬುತ್ತಾರೆ. 'ಸತಿ' ಹೋದ ಆಕೆಯನ್ನು ಬಾವಿಯ ಒತ್ತಿನಲ್ಲಿ ಇರುವ 'ಅಂಬಾ ಮಂದಿರ'ದಲ್ಲಿ ಪೂಜಿಸಲಾಗುತ್ತದೆ.

ಅಡಲಾಜಿಯ ಬಾವಿಯ ಸುಂದರ ಆಕಾರ, ಅದರ ಮೆಟ್ಟಲುಗಳು, ಅದರ ಒಳಗಿನ ಮಹಡಿಯಲ್ಲಿ ದೊರಕುವ ಪ್ರಶಾಂತ ಮತ್ತು ತಣ್ಣನೆಯ ವಾತಾವರಣ ಹಾಗೂ ಅದರೊಂದಿಗೆ ಕಟ್ಟಿಕೊಂಡ ರಾಣಿ ರುಡಾಬಾಯಿಯ ಬದ್ಧತೆ ಮತ್ತು ಸೇವಾಪರತೆಗೆ ನಮ್ಮನ್ನು ಮಂತ್ರಮುಗ್ಧರನ್ನಾಗಿಸುವ ಕೆಲಸವನ್ನು ಈಗಲೂ ಮಾಡುತ್ತಿದೆ.

ವಾಸ್ತುಶಾಸ್ತ್ರದ ವಿದ್ಯಾರ್ಥಿಗಳು ಬೆಂಗಳೂರಿನಿಂದಲೂ ಇಲ್ಲಿಗೆ ಪರಿವೀಕ್ಷಣೆಗೆ ಬರುತ್ತಾರೆ. ೨೦೧೦ರಲ್ಲಿ ಇದು ವಿಶ್ವ ಪರಂಪರೆಗೆ ಸೇರುವ ಮೂಲಕ ರಾಣಿ ರುಡಾಬಾಯಿಯ ಸೇವಾಪರತೆಯನ್ನು ಮತ್ತು ಬದ್ಧತೆಯನ್ನು ಜಗತ್ತಿಗೆ ಪರಿಚಯಿಸುವಂತಿದೆ ಈ ಬಾವಿ.

**ಡಾ॥ ಇಂದಿರಾ ಹೆಗ್ಗಡೆ**
ನಂ. ೬, ಕೃಷ್ಣ ರೆಸಿಡೆನ್ಸಿ, ೪ನೇ ಅಡ್ಡರಸ್ತೆ, ಅಮರಜ್ಯೋತಿನಗರ, ವಿಜಯನಗರ, ಬೆಂಗಳೂರು - ೫೬೦ ೦೪೦

## ವಿವೇಚನಾರಹಿತ ಪೆಟ್ರೋಲ್ ಬೆಲೆ ಏರಿಕೆಗೆ ನಿಮ್ಮ ಪ್ರತಿರೋಧವಿರಲಿ

**ಆತ್ಮೀಯ ಹೊಸತು ಓದುಗ ಬಂಧುಗಳೆ,**

**ತೈಲ ಕಂಪನಿಗಳು ಮತ್ತೆ ಪೆಟ್ರೋಲ್ ಬೆಲೆ ಏರಿಕೆ ಮಾಡಿವೆ. ಈ ಬಾರಿ ಅದು ಲೀಟರ್‌ಗೆ ೮.೨೪ ರೂಪಾಯಿಗಳಷ್ಟು ಹೆಚ್ಚಿದೆ. ಡೀಸೆಲ್, ಸೀಮೆಎಣ್ಣೆ ಹಾಗೂ ಎಲ್.ಪಿ.ಜಿ.ಯ ಬೆಲೆ ಏರಿಕೆಗೂ ತಯಾರಿ ನಡೆದಿದೆ. ಕೇಂದ್ರ ಸರಕಾರದ ವಕ್ತಾರರು ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿನ ತೈಲ ಬೆಲೆಯ ಕಡೆಗೆ ಕೈ ತೋರಿಸಿ ಮೌನವಾಗಿದ್ದಾರೆ. ಕೇಂದ್ರದ ಅಧಿಕಾರಾರೂಢ ಕಾಂಗ್ರೆಸ್ ಪಕ್ಷ ಪೆಟ್ರೋಲ್ ಬೆಲೆ ಏರಿಕೆಯನ್ನು ಸಮರ್ಥಿಸಿಕೊಂಡಿದೆ. ೨೦೧೦ರಿಂದಲೇ ತೈಲೋದ್ಯಮದ ಮೇಲಿನ ನಿಯಂತ್ರಣವನ್ನು ಸರಕಾರ ಹಿಂತೆಗೆದುಕೊಂಡಿದೆ. ಇದು ಮುಕ್ತ ಮಾರುಕಟ್ಟೆ ವ್ಯವಸ್ಥೆ, ಜಾಗತೀಕರಣದ ಪರಿಣಾಮ, ವ್ಯಾಪಾರಿ ಸಂಸ್ಥೆಗಳ ಪರವಾದ ನಿಲುವು.**

**ದೇಶದ ಪ್ರತಿಯೊಬ್ಬ ಪ್ರಜೆ ಈ ಬೆಲೆ ಏರಿಕೆಗೆ ಬಲಿಯಾಗುತ್ತಾನೆ. ಸಾರ್ವಜನಿಕ ಸಾರಿಗೆ, ಸರಕು ಸಾಗಣೆ (ಅತ್ಯಾವಶ್ಯಕ ಆಹಾರಧಾನ್ಯ, ಔಷಧಿ, ದಿನಬಳಕೆ ವಸ್ತುಗಳನ್ನು ಸೇರಿ) ಎಲ್ಲ ಬೆಲೆಯೂ ಜನಸಾಮಾನ್ಯರ ನಿಯೋಜಿತ ಬಜೆಟ್‌ಅನ್ನು ಮೀರಿಹೋಗುತ್ತದೆ. ೨೦೧೦ ಸೆಪ್ಟೆಂಬರ್‌ದಿಂದ ಇಂದಿನವರೆಗೆ ೧೨ ಬಾರಿ ಬೆಲೆ ಏರಿಸಲಾಗಿದೆ. ೨೦೧೦ರಲ್ಲಿ ೫೧.೮೩ ರೂ. ಇದ್ದದ್ದು ಈಗ ೮೧.೭೫ ರೂ.ಗೆ ತಲುಪಿದೆ. ದೇಶದಲ್ಲಿಯೇ ಹೆಚ್ಚು ಬೆಲೆ ನಮ್ಮ ರಾಜ್ಯದಲ್ಲಿ.**

**ಪೆಟ್ರೋಲ್‌ನ ಮೂಲದರ ೪೫ ರೂಪಾಯಿ. ಮಾರಾಟ ತೆರಿಗೆ, ಅಬ್ಕಾರಿ ತೆರಿಗೆ, ಆಮದು ತೆರಿಗೆ ಹೀಗೆ ಎಲ್ಲ ತೆರಿಗೆಗಳೂ ಸೇರಿ ಈಗ ೮೧.೭೫ ರೂಪಾಯಿ ಕೊಡಬೇಕಿದೆ. ಕಳೆದ ೫ ವರ್ಷದ ಅವಧಿಯಲ್ಲಿ ೧೮ ಲಕ್ಷ ಕೋಟಿಯಷ್ಟು ಹಣವನ್ನು ಕಾರ್ಪೊರೇಟ್ ಕಂಪನಿಗಳಿಗೆ ತೆರಿಗೆ ವಿನಾಯಿತಿ ನೀಡಿದ್ದಾರೆ. ಕರ್ನಾಟಕ ಸರಕಾರ ತನ್ನ ಪಾಲಿನ ತೆರಿಗೆ ಭಾಗವನ್ನು ಕೈಬಿಟ್ಟು ಪೆಟ್ರೋಲ್ ಬೆಲೆ ಭಾರ ತಗ್ಗುವಂತೆ ಮಾಡಬಹುದು (ಗೋವಾ ರಾಜ್ಯ ಮಾತ್ರ ಆ ಕೆಲಸ ಮಾಡಿದೆ).**

**ದಯಮಾಡಿ ಈ ಕೆಲಸ ಮಾಡಿ. ಈ ಕೆಳಗೆ ರಾಷ್ಟ್ರಪತಿ, ಪ್ರಧಾನಿ, ಹಣಕಾಸು ಸಚಿವರ ಜಾಲತಾಣ/ಮಿಂಚಂಚೆ ಕೊಟ್ಟಿದ್ದೇವೆ. ಪ್ರತಿಯೊಬ್ಬರು ಪತ್ರ ಬರೆಯಿರಿ, ಇ-ಮೇಲ್ ಕಳಿಸಿರಿ, ನಿಮ್ಮ ಸ್ನೇಹಿತರಿಗೂ ಹೇಳಿ. ಅವರ ಸ್ನೇಹಿತರಿಗೂ ಹೇಳಲು ಹೇಳಿ, ಲಕ್ಷಾಂತರ, ಕೋಟ್ಯಂತರ ಜನರ ಪ್ರತಿರೋಧ ನಮ್ಮನ್ನಾಳುವವರಿಗೆ ತಿಳಿಯಲಿ.**

**ಸಂಪಾದಕ**
**ಹೊಸತು**

### ಸರಕಾರಕ್ಕೆ ಪರ್ಯಾಯ ಸಲಹೆಗಳು

**✶ ಬಹುರಾಷ್ಟ್ರೀಯ ಕಂಪನಿಗಳಿಗೆ ನೀಡಿದ ತೆರಿಗೆ ವಿನಾಯಿತಿಗಳನ್ನು ರದ್ದುಮಾಡಿರಿ.**
**✶ ವಿವಿಧ ದೇಶಗಳ ಬ್ಯಾಂಕುಗಳಲ್ಲಿನ ನಮ್ಮ ದೇಶದ ಕಪ್ಪು ಹಣವನ್ನು ವಸೂಲಿ ಮಾಡಿ ಸರಕಾರದ ಬೊಕ್ಕಸಕ್ಕೆ ತನ್ನಿ.**
**✶ ನಮ್ಮ ದೇಶದ ಕೈಗಾರಿಕೋದ್ಯಮಿಗಳು ನಮ್ಮ ಸಾರ್ವಜನಿಕ ಬ್ಯಾಂಕ್‌ಗಳಿಗೆ ಕಟ್ಟಬೇಕಾದ ಸಾಲದ ಮೊತ್ತ ೭೪,೬೧೬ ಕೋಟಿ ಹಾಗೂ ಬಡ್ಡಿಯನ್ನು ವಸೂಲಿ ಮಾಡಿ ಮತ್ತು ಸರಕಾರಕ್ಕೆ ಕಟ್ಟದೆ ಉಳಿದ ಸಾವಿರಾರು ಕೋಟಿ ಮೊತ್ತದ ಹಣವನ್ನು ಕಟ್ಟುನಿಟ್ಟಾಗಿ ವಸೂಲಿ ಮಾಡಿ.**

**ಈ ಎಲ್ಲ ಮೂಲಗಳಿಂದ ಬರುವ ಲಕ್ಷಾಂತರ ಕೋಟಿ ಹಣದಲ್ಲಿ ಸಾರ್ವಜನಿಕರ ಮೇಲಾಗುವ ಹೊರೆಯನ್ನು ತಪ್ಪಿಸಬೇಕು.**

**೧. ಶ್ರೀಮತಿ ಪ್ರತಿಭಾ ಪಾಟೀಲ್** (www.presidentofindia.nic.in)
**೨. ಶ್ರೀ ಮನಮೋಹನ ಸಿಂಗ್** (www.pmindia.nic.in)
**೩. ಶ್ರೀ ಪ್ರಣವ್ ಮುಖರ್ಜಿ** (ಮಿಂಚಂಚೆ : pkm@sansad.nic.in)

> ಗಿರೀಶರ ಸಿನಿಮಾಗಳು ಒಳ್ಳೆಯ ಸಿನಿಮಾಗಳು ಮಾತ್ರವಲ್ಲ, ಅವು ಅಂದಂದಿನ ಸಾಮಾಜಿಕ ವ್ಯವಸ್ಥೆಯ ಕುರಿತ ನಿಖರವಾದ ಹೇಳಿಕೆ – ವ್ಯಾಖ್ಯಾನಗಳೇ ಆಗಿರುತ್ತವೆ. ಅವು ಪ್ರೇಕ್ಷಕರನ್ನು ಚಿಂತನೆಗೆ ಹಚ್ಚುವಂತಹವು. 'ಕೂರ್ಮಾವತಾರ'ದ ಕೊನೆಯ ದೃಶ್ಯದಲ್ಲಿ, ''ಸಾರ್, ನಾನೊಬ್ಬ ಕೆಟ್ಟ ನಟ. ಒಪ್ಕೊತೀನಿ. ಗಾಂಧಿ ಪಾರ್ಟ್ ಮಾಡೋಕೆ ಒಪ್ಕೊಂಡು ದೊಡ್ಡ ತಪ್ಪು ಮಾಡ್ದೆ. ಈಗ ನನಗೆ ಆ ಯೋಗ್ಯತೆಯೂ ಇಲ್ಲ, ಹ್ಯಾಗಾದರೂ ಮಾಡಿ ಶೂಟ್ ಮಾಡಿ. ಇವತ್ತಿಗೆ ಈ ರಗಳೆ ಎಲ್ಲ ಮುಗೀಲಿ. ಕೈ ಮುಗಿದು ಕೇಳ್ಕೋತೀನಿ. ಇವತ್ತೇ ಶೂಟ್ ಮಾಡಿ'' ಎಂಬ ಗಾಂಧಿ ಪಾತ್ರಧಾರಿ ಆನಂದರಾವ್ ಆಡುವ ಮಾತು ಅದೆಷ್ಟು ಸಂಕೇತಗಳನ್ನು ಬಿಂಬಿಸುತ್ತದೆ, ಅದೆಷ್ಟು ಮಾರ್ಮಿಕವಾಗಿದೆ !

ಯಾವುದೋ ಒಂದು ಸಿನಿಮಾದ ಅನುಭವದಲ್ಲಿರುವ ಅರ್ಥಧೋರಣೆ, ಅದರಲ್ಲಿರುವ ಜೀವನ ವ್ಯಾಖ್ಯಾನಗಳನ್ನು ನಿರ್ಧರಿಸುವಾಗ, ಆ ಸಿನಿಮಾ ಮಾಡಿದವರ ಮನಸ್ಸಿನಲ್ಲಿ ಅದೆಲ್ಲಾ, ಅಷ್ಟೆಲ್ಲಾ ಇತ್ತು ಎಂದು ಹೇಗೆ ತೀರ್ಮಾನಿಸುವುದು, ಎಂಬ ಪ್ರಶ್ನೆ ಸಿನಿಮಾ ಕುರಿತ ಚರ್ಚೆಗಳಲ್ಲಿ ಮಾತ್ರವಲ್ಲ, ಸಾಹಿತ್ಯಕ ಚರ್ಚೆಗಳಲ್ಲೂ ತೀರಾ ಸಾಮಾನ್ಯ. ಉತ್ತಮ ಸಾಹಿತ್ಯದಂತೆ ಉತ್ತಮ ಚಲನಚಿತ್ರವೂ ಸಹ ಚಿಂತನೆ, ಧೋರಣೆ, ಜೀವನಾನುಭವ ಮತ್ತು ಸತ್ಯದ ಪರಿಕಲ್ಪನೆಗಳಿಗೆ ಸಿದ್ಧಮಾದರಿಗಳನ್ನು ಇಟ್ಟುಕೊಳ್ಳದೆ, ತನ್ನ ತೀರ್ಮಾನಗಳನ್ನು ಹೇರದೆ ಪ್ರೇಕ್ಷಕರನ್ನು ಸಂವಾದಕ್ಕೆ ಆಹ್ವಾನಿಸುತ್ತದೆ. ಆದರೆ ಕಲಾಕೃತಿಗಳನ್ನು ಸೃಷ್ಟಿಸುವವರಾಗಲಿ, ಅವನ್ನು ಆಸ್ವಾದಿಸುವವರಾಗಲಿ ಶೂನ್ಯದ ನೆಲೆಯಿಂದ ಹೊರಡುವುದಿಲ್ಲ. ತಾವು ಬದುಕುವ ಕಾಲಘಟ್ಟದ ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ಪರಿಸ್ಥಿತಿಯನ್ನು ಬಿಂಬಿಸುವ ಪ್ರಜ್ಞಾಪಾತಳಿಯಲ್ಲಿ ತಮ್ಮದೇ ಆದ ತಾತ್ವಿಕ ಆಯ್ಕೆಗಳನ್ನು ಮಾಡಿಕೊಂಡಿರುತ್ತಾರೆ. ಕಲಾಕಾರರು ಕೃತಿಯ ಮೂಲಕ ತಮ್ಮ ಧ್ಯೇಯಧೋರಣೆ - ಆಯ್ಕೆಗೊಳಪಟ್ಟ ಎಲ್ಲ ಪರಿಕರ-ಅನುಭವಗಳನ್ನು ಸಹೃದಯರ ಅವಗಾಹನೆಗೆ ಒಪ್ಪಿಸುತ್ತಾರೆ. ಯಾವುದೇ ಸಾಹಿತ್ಯ ಕೃತಿಯಲ್ಲಿ ಮೂಲಕೃತಿಯೆಂದು ಪರಿಗಣಿಸಿ ಸಿನಿಮಾ ಅದರ ಚಿತ್ರ ಆವೃತ್ತಿಯಾಗಿ ಅದಕ್ಕೆ ಎಷ್ಟು ನಿಷ್ಠವಾಗಿದೆ ಅಥವಾ ಇಲ್ಲ ಎಂದು ತೀರ್ಮಾನಿಸುವುದಕ್ಕೂ ತುಂಬ ವ್ಯತ್ಯಾಸವಿದೆ. ಒಳ್ಳೆಯ ಕಥೆಯನ್ನು ಓದುವಾಗ ಆಗುವ ಅನುಭವವೇ ಬೇರೆ. ಅದೇ ಕಥೆ ದೃಶ್ಯಮಾಧ್ಯಮದಲ್ಲಿ ಚಿತ್ರೀಕರಣಗೊಂಡು ಸಿನಿಮಾದ ರೂಪ ಪಡೆದಾಗ, ಅದನ್ನು ನೋಡಿದಾಗ ಆಗುವ ಅನುಭವವೇ ಬೇರೆ.

ಕಥೆಯ ಕೇಂದ್ರಬಿಂದುವನ್ನು ಕೇವಲ ಭಾವುಕತೆಯ ಆಧಾರದ ಮೇಲೆ ಪರಿಗಣಿಸದೆ, ಅದರ ಸಾಮಾಜಿಕ, ರಾಜಕೀಯ ಮತ್ತು ಆಧ್ಯಾತ್ಮಿಕ ವೈರುಧ್ಯಗಳ ಮೂಲಕ ಒತ್ತುಕೊಟ್ಟು ಚಿತ್ರಕ್ಕೆ ಒಂದು ನಿರ್ದಿಷ್ಟ ಸ್ವರೂಪ ಕಟ್ಟಿಕೊಡುವುದು ನಿರ್ದೇಶಕನ ಗುರಿಯಾಗಿರಬೇಕು. ಯಾವುದೇ ಕಥೆಯನ್ನು ಅದರ ಸಾರ್ವಜನಿಕ ಸಂಬಂಧದಲ್ಲಿಟ್ಟು ವಿಮರ್ಶೆಗೆ ಒಡ್ಡಬೇಕು.

ಕನ್ನಡದ ಪ್ರಬುದ್ಧ ಕಥೆಗಾರರಾಗಿ ಹೊರಹೊಮ್ಮುತ್ತಿರುವ ಕುಂ. ವೀರಭದ್ರಪ್ಪನವರ 'ಕೂರ್ಮಾವತಾರ' ಇಂದಿನ ಜಾಗತೀಕರಣ ಯುಗದಲ್ಲಿ ಕುಸಿದುಹೋಗುತ್ತಿರುವ ಮಾನವೀಯ ಮೌಲ್ಯಗಳ ಮತ್ತು ಅದು ಹುಟ್ಟಿಹಾಕುತ್ತಿರುವ ಸಾಮಾಜಿಕ ತಳಮಳ, ಅಸಮಾನತೆಗಳ ಹಿನ್ನೆಲೆಯಲ್ಲಿ ಕಥಾವಸ್ತುವಿಗೆ ಸರಿಹೊಂದಿಸಿ ಸಮಕಾಲೀನ ತಲ್ಲಣಗಳನ್ನು ದೃಶ್ಯಮಾಧ್ಯಮದಲ್ಲಿ ಸೆರೆಹಿಡಿದು ಅದ್ಭುತ ಚಲನಚಿತ್ರವೊಂದನ್ನು ನಿರ್ದೇಶಿಸಿ ತಮ್ಮ ಎಂದಿನ ಕಲಾವಂತಿಕೆಯನ್ನು ಮೆರೆದಿದ್ದಾರೆ ಗಿರೀಶ್ ಕಾಸರವಳ್ಳಿ.

# ಸಮಕಾಲೀನ ತಲ್ಲಣಗಳ ಪ್ರತೀಕ
# ಕೂರ್ಮಾವತಾರ

● ಎಸ್. ಸುರೇಂದ್ರ



ಕುಂ. ವೀ. ಅವರ 'ಕೂರ್ಮಾವತಾರ' ಕಥೆ ಚಲನಚಿತ್ರಕ್ಕೆ ವಸ್ತುವಾಗುವಂತಹ ಒಂದು ನಿರ್ದಿಷ್ಟ ಆಯಾಮವನ್ನು ಹೊಂದಿದೆ. ಅದರಲ್ಲಿ ಜರುಗುವ ಘಟನೆಗಳೂ ಹಾಗೆಯೇ.

ವಿಷ್ಣು ಕೂರ್ಮಾವತಾರ ತಾಳಿ ಬೆನ್ನ ಮೇಲೆ ಮಂದರ ಪರ್ವತವನ್ನು ಹೊತ್ತು ದೇವದಾನವರು ಸಮುದ್ರ ಕಡೆಯುವುದಕ್ಕೆ ಅನುವು ಮಾಡಿಕೊಟ್ಟ. ಹೀಗೆ ಕೂರ್ಮದ ಬಗ್ಗೆ, ಎಂದರೆ ಆಮೆಯ ಬಗ್ಗೆ ನಮ್ಮ ಪುರಾಣಗಳಲ್ಲಿ ಹಲವೆಡೆ ಪ್ರಸ್ತಾಪವಿದೆ. ಕುಂ.ವೀ. ಅವರು ಜಾಗತೀಕರಣ ಪ್ರಕ್ರಿಯೆ ಇಂದು ಮಾನವೀಯ ಮೌಲ್ಯಗಳಿಗೆ ಮಾರಕವಾಗುತ್ತಿರುವ ಸಂದರ್ಭವನ್ನು ರೂಪಕವಾಗಿರಿಸಿಕೊಂಡು 'ಕೂರ್ಮಾವತಾರ'ವನ್ನು ಅತ್ಯಂತ ಅರ್ಥಪೂರ್ಣವಾದ ಕಥೆಯನ್ನಾಗಿಸಿದ್ದಾರೆ.

'ಕೂರ್ಮಾವತಾರ' ಗಾಂಧೀಜಿಯವರ ಬದುಕಿನ ದರ್ಶನವನ್ನು ಇಂದು ನಮ್ಮ ನಡುವೆ ಜರುಗುತ್ತಿರುವ ಆಗುಹೋಗುಗಳಿಗೆ ಸಂಬಂಧಿಸಿದಂತೆ ಪರಿಚಯಿಸುವ ಚಿತ್ರ. ಮೂಲ ಕಥಾವಸ್ತುವನ್ನು ದೃಶ್ಯಮಾಧ್ಯಮಕ್ಕೆ ಹೊಂದುವಂತೆ ರೂಪಾಂತರಗೊಳಿಸುವಲ್ಲಿ ತಾವು ಸಿದ್ಧಹಸ್ತರೆಂದು ಗಿರೀಶ್ ಮತ್ತೊಮ್ಮೆ ಸಾಬೀತುಪಡಿಸಿದ್ದಾರೆ. ಈ ಚಿತ್ರದಲ್ಲಿ ಗಾಂಧಿಯ ಪ್ರಸ್ತುತತೆ ಮತ್ತು ಅಪ್ರಸ್ತುತತೆ ಎರಡೂ ಅಂಶಗಳು ಚರ್ಚೆಗೆ ಬರುತ್ತವೆ.

ಒಬ್ಬ ನಿರ್ದೇಶಕ ಗಾಂಧಿ ಕುರಿತು ಧಾರಾವಾಹಿಯೊಂದನ್ನು ನಿರ್ಮಿಸಲು ಹೊರಡುತ್ತಾನೆ. ಆಗ ಗಾಂಧಿ ಪಾತ್ರಕ್ಕೆ ಸೂಕ್ತ ಪಾತ್ರಧಾರಿಯಾಗಿ ಸಿಗುವವರು ಬಹುಮಟ್ಟಿಗೆ ಗಾಂಧಿಯನ್ನೇ ಹೋಲುವ ಹಿರಿಯ ಸರ್ಕಾರಿ ನೌಕರ ಆನಂದರಾಯರು. ಈತ ಗಾಂಧಿಯ ಬಗ್ಗೆ ಯಾವುದೇ ಒಲವಿಲ್ಲದ, ಅಭಿನಯದಲ್ಲಿ ಅನುಭವವಿಲ್ಲದ ಮುಗ್ಧಜೀವಿ. ಅಲ್ಲದೆ ತಾನು, ತನ್ನ ಹುದ್ದೆ, ಇಷ್ಟಕ್ಕೆ ಮಾತ್ರ ತನ್ನ ಬದುಕನ್ನು ಮಿತಿಗೊಳಿಸಿಕೊಂಡು ಮಗ, ಸೊಸೆ, ಮೊಮ್ಮಗ, ಇವರೊಡನೆ ಹೆಸರಿಗೆ ಕುಟುಂಬ ಜೀವನ ನಡೆಸುತ್ತಿದ್ದರೂ ಅವರೊಡನೆ ಯಾವುದೇ ಬಗೆಯ ಕನಿಷ್ಠ ಆತ್ಮೀಯತೆಯನ್ನೂ ಹೊಂದಿರದ, ಸುತ್ತಮುತ್ತಲಿನ, ಹೊರ ಜಗತ್ತಿನ ಆಗುಹೋಗುಗಳಿಗೆ ವಿಮುಖನಾಗಿರುವ, ತಾನೊಬ್ಬ ದ್ವೀಪ ಎಂಬಂತೆ ಯಾಂತ್ರಿಕವಾಗಿ ಬದುಕು ಸಾಗಿಸುವ ನಿರ್ಲಿಪ್ತ ವ್ಯಕ್ತಿ. ಧಾರಾವಾಹಿಯಲ್ಲಿ ನಟಿಸಲು ಮೊದಮೊದಲು ಹಿಂದೆಮುಂದೆ ನೋಡಿದರೂ ಹಣದ ಮುಗ್ಗಟ್ಟಿನಲ್ಲಿರುವ ಮಗ, ಸೊಸೆ ಮತ್ತು ನಿರ್ದೇಶಕನ ಒತ್ತಾಯಕ್ಕೆ ಮಣಿದು ಗಾಂಧಿ ಪಾತ್ರದಲ್ಲಿ ನಟಿಸಲು ಒಪ್ಪಿಕೊಳ್ಳುತ್ತಾರೆ. ಚಿತ್ರೀಕರಣ ಕ್ರಿಯೆಯಲ್ಲಿ ಸಂಪೂರ್ಣವಾಗಿ ತೊಡಗಿಕೊಳ್ಳುತ್ತ ಕ್ರಮೇಣ ಗಾಂಧಿಯ ವೈಯಕ್ತಿಕ ಬದುಕು, ಅವರು ಪ್ರತಿನಿಧಿಸಿದ ಮೌಲ್ಯಗಳು ಮೊದಲಾದುವುಗಳ ಬಗ್ಗೆ ಗಂಭೀರ ಅಧ್ಯಯನದಲ್ಲಿ ತೊಡಗುತ್ತಾರೆ. ಆ ಮೂಲಕ ತಮ್ಮನ್ನು ತಾವೇ ಆತ್ಮವಿಮರ್ಶೆಗೆ ಒಳಪಡಿಸಿಕೊಳ್ಳುತ್ತಾರೆ.

''ಏನ್ ಸಾರ್, ನಿಮಗೆ ಸರಿಯಾಗಿ ಅಳುವುದಕ್ಕೂ ಬರೋಲ್ವೆ ?'' – ಎಂದು ನಿರ್ದೇಶಕನಿಂದ ಬೈಸಿಕೊಳ್ಳುವ ಆನಂದರಾವ್ ಚಿತ್ರೀಕರಣ ಸಾಗುತ್ತಿದ್ದಂತೆ ನಟನೆಯಲ್ಲಿ ಪ್ರಭುತ್ವ ಸಾಧಿಸಿ ಜನಮನ್ನಣೆಗೆ ಪಾತ್ರರಾಗುತ್ತಾರೆ. ಅದೇ ವೇಳೆ ತನ್ನ ಮಡದಿಯನ್ನು , ತನ್ನ ಕುಟುಂಬದವರನ್ನು ನಡೆಸಿಕೊಂಡ ಬಗ್ಗೆ, ತಾನು ಎಸಗಿದ ಅನ್ಯಾಯಗಳ ಬಗ್ಗೆ ಅರಿವಾಗುತ್ತಾ ಹೋಗುತ್ತದೆ. ಗಾಂಧಿ ಪಾತ್ರಧಾರಿಯಾಗಿ ಗಳಿಸುವ ಅಪಾರ ಜನಪ್ರಿಯತೆಯಲ್ಲೇ ಮುಳುಗಿ ಹೋಗುವ ರಾಯರಿಗೆ ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲು ಸಮಯವಾದರೂ ಎಲ್ಲಿದೆ ? ಆದರೆ ಇಲ್ಲಿನ ದುರಂತವೆಂದರೆ ಅವರ ಮಗ, ಸೊಸೆ, ಪರಿಚಯಸ್ಥರು ಆನಂದರಾಯರನ್ನು ಆವರಿಸಿಕೊಳ್ಳುವ ಜನಪ್ರಿಯತೆಯನ್ನೇ ಸರಕಾಗಿಸಿಕೊಂಡು ದುರುಪಯೋಗಪಡಿಸಿಕೊಳ್ಳುತ್ತಾರೆ. ಇವೆಲ್ಲಾ ಅವರ ಅರಿವಿಗೆ ಬಂದರೂ ಆತ ನಿಸ್ಸಹಾಯಕ. ತನಗೆ ಸಂದ ಇಮೇಜಿನಲ್ಲೇ ಬಂಧಿಯಾಗಿಬಿಡುತ್ತಾರೆ ಆನಂದರಾಯರು. ಇದಿಷ್ಟು 'ಕೂರ್ಮಾವತಾರ'ದ ಕಥಾಹಂದರ.

ಮೊಮ್ಮಗ ಮನೆಯ ಹತ್ತಿರದ ಬಡಾವಣೆಯಲ್ಲಿರುವ ಉದ್ಯಾನವನದಿಂದ ಹಿಡಿದು ತರುವ ಆಮೆಯೊಂದು ಆನಂದರಾಯರ ಬದುಕಿನ ಭಾಗವಾಗಿ ಬಿಡುತ್ತದೆ. ಅದೊಂದು ದೈವಾಂಶವುಳ್ಳ ಜೀವಿ, ತಮ್ಮ ಅದೃಷ್ಟ ದೇವತೆ ಎಂದು ಬಗೆದು ತಮ್ಮದೇ ಆದ ಭ್ರಮಾಲೋಕದಲ್ಲಿ ವಿಹರಿಸುತ್ತಾರೆ ರಾಯರು.

ಚಿತ್ರದಲ್ಲಿ ಆಮೆಯನ್ನು ಸಾಂಕೇತಿಕವಾಗಿ ಬಳಸಿಕೊಂಡಿದ್ದಾರೆ ಗಿರೀಶ್. ಅವರ ನಿರೂಪಣಾ ಶೈಲಿ ಆಮೆಯ ನಡಿಗೆಯಂತಿಲ್ಲ. ದೃಶ್ಯದಿಂದ ದೃಶ್ಯಕ್ಕೆ ಪ್ರತಿಯೊಂದು ಚಿತ್ರಿಕೆಯೂ (Shot) ನಿರೂಪಣೆಯ ವೇಗಕ್ಕೆ ಸರಿಸಮನಾಗಿ ಕ್ರಮಿಸುತ್ತ ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ಫ್ಲಾಶ್‌ಬ್ಯಾಕ್ ಮತ್ತು ಕ್ಲೋಸ್‌ಅಪ್ ತಂತ್ರಗಳನ್ನು ಸಮರ್ಥವಾಗಿ ಬಳಸಿಕೊಳ್ಳಲಾಗಿದೆ.

ಕ್ಲೈಮ್ಯಾಕ್ಸ್‌ನಿಂದಲೇ ಆರಂಭವಾಗುವ 'ಕೂರ್ಮಾವತಾರ' ನಿರ್ದೇಶಕರ ಪ್ರಯೋಗಶೀಲತೆಗೆ ಸಾಕ್ಷಿಯಂತಿದೆ. ಹಲವಾರು ರೀತಿಯಲ್ಲಿ ವಿಭಿನ್ನವೆನಿಸುವ ಈ ಚಲನಚಿತ್ರ ಹೊಸ ಭರವಸೆಗಳಿಗೆ ಎಡೆಮಾಡಿಕೊಡುತ್ತದೆ. ಗಿರೀಶ್ ತಮ್ಮ 'ಘಟಶ್ರಾದ್ಧ' ಚಿತ್ರದ ಹಂತದಿಂದ ಸಾಗಿ ಬಂದಿರುವ ಹಾದಿ ಇದು.

ಇಡೀ ಚಿತ್ರದ ಶ್ರೀಮಂತಿಕೆಯನ್ನು ಮತ್ತಷ್ಟು ಹೆಚ್ಚಿಸಿರುವುದು ಜಿ. ಎಸ್. ಭಾಸ್ಕರ್ ಅವರ ಅದ್ಭುತ ಛಾಯಾಗ್ರಹಣ. ಆಮೆಯ ನಿಧಾನದ ನಡಿಗೆ, ಮನೆಯೊಳಗಿನ ದೃಶ್ಯಗಳು, ಅತ್ತಿಂದಿತ್ತ ಮೆಲ್ಲನೆ ತೂಗಾಡುವ ಜೇಡರ ಬಲೆ, ನೆಳಲು - ಬೆಳಕುಗಳ ಸಂಯೋಜನೆ ಇವೆಲ್ಲವನ್ನು ಕ್ಯಾಮರಾದಲ್ಲಿ ಮನೋಜ್ಞವಾಗಿ ಸೆರೆಹಿಡಿದಿರುವ ಭಾಸ್ಕರ್ ಖ್ಯಾತ ಛಾಯಾಗ್ರಾಹಕರಾದ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಪುರಸ್ಕೃತ ವಿ. ಕೆ. ಮೂರ್ತಿ ಅವರನ್ನು ನೆನಪಿಸುತ್ತಾರೆ. ತಮ್ಮ ಕೈಚಳಕದ ಮೂಲಕ ನಿರ್ದೇಶಕರ ಉದ್ದೇಶಗಳನ್ನು ಪ್ರೇಕ್ಷಕರಿಗೆ ತಲುಪಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಗಾಂಧಿ ಪಾತ್ರಧಾರಿ ಶಿಕಾರಿಪುರ ಕೃಷ್ಣಮೂರ್ತಿ ಮತ್ತು ಗಾಂಧಿ ಇಬ್ಬರ ನಡುವಿನ ಹೋಲಿಕೆ ಅಚ್ಚರಿ ಹುಟ್ಟಿಸುವಂತಿದೆ. ಧಾರಾವಾಹಿ ನಿರ್ದೇಶಕನಾಗಿ ಅಪೂರ್ವ ಕಾಸರವಳ್ಳಿಯವರ ಅಭಿನಯ ಶ್ಲಾಘನೀಯ. ಕಸ್ತೂರಿ ಬಾ ಪಾತ್ರದಲ್ಲಿ ಹಿರಿಯ ನಟಿ ಜಯಂತಿ, ಬಾಲನಟ ಸುಮುಖ ಭಾರದ್ವಾಜ್, ಎಚ್. ಜಿ. ಸೋಮಶೇಖರರಾವ್ ಮತ್ತಿತರರು ತಮ್ಮ ತಮ್ಮ ಪಾತ್ರಗಳಿಗೆ ಜೀವ ತುಂಬಿದ್ದಾರೆ.

ಸ್ವಾತಂತ್ರ್ಯಾನಂತರದ ಅವಧಿಯಲ್ಲಿ ನಮ್ಮ ಸಾಮಾಜಿಕ ಮೌಲ್ಯಗಳು ಕುಸಿಯುತ್ತಿರುವುದು ಕಾಸರವಳ್ಳಿಯವರನ್ನು ಕಾಡುತ್ತಲೇ ಬಂದಿದೆ. ತಮ್ಮ 'ತಬರನ ಕಥೆ' ಮತ್ತಿತರ ಚಿತ್ರಗಳಲ್ಲಿ ಇದೇ ಪ್ರಶ್ನೆಯನ್ನು ಮುಂದಿಡುತ್ತಾರೆ.

ಗಿರೀಶರ ಸಿನಿಮಾಗಳು ಒಳ್ಳೆಯ ಸಿನಿಮಾಗಳು ಮಾತ್ರವಲ್ಲ, ಅವು ಅಂದಂದಿನ ಸಾಮಾಜಿಕ ವ್ಯವಸ್ಥೆಯ ಕುರಿತ ನಿಖರವಾದ ಹೇಳಿಕೆ - ವ್ಯಾಖ್ಯಾನಗಳೇ ಆಗಿರುತ್ತವೆ. ಅವು ಪ್ರೇಕ್ಷಕರನ್ನು ಚಿಂತನೆಗೆ ಹಚ್ಚುವಂತಹವು.

'ಕೂರ್ಮಾವತಾರ'ದ ಕೊನೆಯ ದೃಶ್ಯದಲ್ಲಿ, ''ಸಾರ್, ನಾನೊಬ್ಬ ಕೆಟ್ಟ ನಟ. ಒಪ್ಕೊತೀನಿ. ಗಾಂಧಿ ಪಾರ್ಟ್ ಮಾಡೋಕೆ ಒಪ್ಕೊಂಡು ದೊಡ್ಡ ತಪ್ಪು ಮಾಡ್ದೆ. ಈಗ ನನಗೆ ಆ ಯೋಗ್ಯತೆಯೂ ಇಲ್ಲ. ಹ್ಯಾಗಾದರೂ ಮಾಡಿ ಶೂಟ್ ಮಾಡಿ. ಇವತ್ತಿಗೆ ಈ ರಗಳೆ ಎಲ್ಲ ಮುಗೀಲಿ. ಕೈ ಮುಗಿದು ಕೇಳ್ಕೋತೀನಿ. ಇವತ್ತೇ ಶೂಟ್ ಮಾಡಿ'' ಎಂಬ ಗಾಂಧಿ ಪಾತ್ರಧಾರಿ ಆನಂದರಾವ್ ಆಡುವ ಮಾತು ಅದೆಷ್ಟು ಸಂಕೇತಗಳನ್ನು ಬಿಂಬಿಸುತ್ತದೆ, ಅದೆಷ್ಟು ಮಾರ್ಮಿಕವಾಗಿದೆ !

**ಎಸ್. ಸುರೇಂದ್ರ**

ನಂ. ೨೪, ಕೆನರಾ ಬ್ಯಾಂಕ್ ಕಾಲನಿ, ೧ನೇ ಅಡ್ಡರಸ್ತೆ, ೩ನೇ ಬ್ಲಾಕ್, ಜಯನಗರ (ಪೂರ್ವ), ಬೆಂಗಳೂರು - ೧೧








# ಕೆಪ್ಲರ್‌ಗೆ ಮುನ್ನ–ಶುಕ್ರಗ್ರಸ್ತ ಸೂರ್ಯಗ್ರಹಣ

ಬಿ. ಎಸ್. ಶೈಲಜಾ,
ಗೀತಾ ಕೈದಾಳ

ಶುಕ್ರಗ್ರಹ ಸೂರ್ಯನಿಗೆ ಅಡ್ಡವಾಗಿ ಹಾದುಹೋಗುವ ಅಪರೂಪದ ಘಟನೆಯೇ ಶುಕ್ರ ಸಂಕ್ರಮ – ಇದನ್ನು ೧೮೭೪ರಲ್ಲಿ ಚಿಂತಾಮಣಿ ರಘುನಾಥಾಚಾರಿ ಶುಕ್ರಗ್ರಸ್ತ ಸೂರ್ಯಗ್ರಹಣ ಎಂದು ಹೆಸರಿಸಿದ್ದು ಬಹಳ ಒಪ್ಪವಾಗಿದೆ. ಘಟನೆಯ ವಿವರಣೆಯನ್ನು ಅದು ಸೂಚಿಸುತ್ತದೆ.

ಶತಮಾನಕ್ಕೊಮ್ಮೆ ಘಟಿಸುವ ಈ ಅಪರೂಪದ ಖಗೋಳ ಕೌತುಕದ ಚಾರಿತ್ರಿಕ ದಾಖಲೆಗಳನ್ನು ಓದಿಕೊಳ್ಳುವಾಗ ಯೋಹಾನೆಸ್ ಕೆಪ್ಲರ್‌ನ ವ್ಯಕ್ತಿತ್ವ ಕಣ್ಣು ಮುಂದೆ ನಿಲ್ಲುತ್ತದೆ. ಹೀಗೆ ಶುಕ್ರ ಮತ್ತು ಬುಧ ಸೂರ್ಯನಿಗೆ ಅಡ್ಡವಾಗಿ ಹಾದುಹೋಗುವ ಸಾಧ್ಯತೆ ಇದೆ ಎಂಬುದನ್ನು ಮೊದಲಬಾರಿಗೆ ಗುರುತಿಸಿದವನು ಆತ ಎಂಬುದು ಹೆಗ್ಗಳಿಕೆ. ಇದನ್ನು ಪರಿಶೀಲಿಸಲು ಆತ ಬದುಕಿರಲಿಲ್ಲ. ಹೊರೊಕ್ಸ್ ಎಂಬ ಹದಿಹರೆಯದ ಹುಡುಗ ಲೆಕ್ಕಗಳನ್ನು ಮುಂದುವರೆಸಿ ೧೬೩೯ರಲ್ಲಿಯೂ ಕಾಣುವುದು ಎಂದು ಕಂಡುಹಿಡಿದ. ಅಷ್ಟೇ ಅಲ್ಲ, ಗೋಡೆಯ ಮೇಲೆ ಸೂರ್ಯನ ಬಿಂಬ ಮೂಡಿಸಿ ಅದನ್ನು ವೀಕ್ಷಿಸಿದ. ತನ್ನ ಸ್ನೇಹಿತ ಕ್ರಾಬ್‌ಟ್ರೀಗೆ ಪತ್ರ ಬರೆದು ಆತನೂ ವೀಕ್ಷಣೆ ನಡೆಸುವಂತೆ ಆಗ್ರಹಿಸಿದ್ದ. ಈಗ ಅವರಿಬ್ಬರೂ ಖ್ಯಾತನಾಮರಾಗಿರುವುದು ಸಹಜವೇ.

ಅದೇ ಸಮಯದಲ್ಲಿ ಭಾರತದಲ್ಲಿ ವಿಖ್ಯಾತ ಖಗೋಳಜ್ಞರು ಇದ್ದರು. ಡಾ|| ಬಾಲಚಂದ್ರರಾವ್ ಮತ್ತು ಡಾ|| ಪದ್ಮಜಾ ವೇಣುಗೋಪಾಲ್ ಬರೆದಿರುವ ಪುಸ್ತಕದಿಂದ ಸಂಕ್ರಮಗಳನ್ನು ಲೆಕ್ಕಹಾಕುವ ಸಾಮರ್ಥ್ಯ, ಅಂದರೆ ಗಣಿತಜ್ಞಾನ, ಭಾರತೀಯರಿಗೆ ಆಗಲೇ ಇತ್ತು ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಹಾಗಿದ್ದಲ್ಲಿ ಈ ಸಂಕ್ರಮಗಳ ಬಗ್ಗೆ ಅವರಿಗೆ ತಿಳುವಳಿಕೆ ಇರಲಿಲ್ಲವೇ ? ಎಂಬ ಪ್ರಶ್ನೆ ಏಳುತ್ತದೆ.

ಇತ್ತೀಚೆಗೆ ಶಾಸನಗಳಲ್ಲಿ ಖಗೋಳ ವೈಜ್ಞಾನಿಕ ಅಂಶಗಳನ್ನು ಪರಿಶೀಲಿಸುವಾಗ ವ್ಯತಿಪಾತ ಎಂಬ ಪದದ ಬಗ್ಗೆ ಕುತೂಹಲ ಮೂಡಿತು. ಈ ಪದದ ಅರ್ಥ ಸೂರ್ಯ ಮತ್ತು ಚಂದ್ರ ಎರಡೂ ವಿಷುವದ್ ವೃತ್ತದಿಂದ ಒಂದೇ ಕೋನದಲ್ಲಿವೆ ಎಂದು. ಉದಾಹರಣೆಗೆ ಸೂರ್ಯ +೨೦ ಡಿಗ್ರಿ ಉತ್ತರಕ್ಕೆ ಇರುವಾಗ ಚಂದ್ರ +೨೦ ಡಿಗ್ರಿಯಲ್ಲಿದ್ದ ಘಳಿಗೆಯೇ ವ್ಯತಿಪಾತ. ಈ ಪದ ಶಾಸನಗಳಲ್ಲಿ ಪದೇ ಪದೇ ಕಂಡುಬರುತ್ತದೆ. ಇದರ ಗೂಢಾರ್ಥವನ್ನು ತಿಳಿಯಲು ಆಯಾ ದಿನಗಳ ಸ್ಥಾನಗಳನ್ನು ಲೆಕ್ಕಹಾಕಿ ಪರಿಶೀಲಿಸಿದೆವು. ಕೆಲವೊಂದು ಸಂದರ್ಭಗಳಲ್ಲಿ ಇದು ಹೊಂದಾಣಿಕೆಯಾಗುತ್ತಿರಲಿಲ್ಲ. ಆದರೆ ಅವುಗಳಲ್ಲಿ ಕೆಲವು ಶುಕ್ರಗ್ರಹ ಸೂರ್ಯನನ್ನು ಹಾದುಹೋದ ಘಟನೆಗಳನ್ನು ಸೂಚಿಸಿದವು. ಆದ್ದರಿಂದ ಸಂಕ್ರಮಗಳನ್ನೂ ವ್ಯತಿಪಾತ ಎಂದೇ ಕರೆಯುತ್ತಿದ್ದರೆ ಎಂಬ ಅನುಮಾನ ಬಂದಿತು.

ಉದಾಹರಣೆಗೆ ಕನ್ನಡ ವಿವಿ ಪ್ರಕಟಿಸಿರುವ ಶಾಸನಗಳ ಮೊದಲನೆಯ ಸಂಪುಟ (ಎರಡನೇ ಸರಣಿ) ದಲ್ಲಿ೧೭೭ನೆಯ ಶಾಸನ. ಇದರಲ್ಲಿ ಮೃಗಶಿರಾ ಎಂಬ ನಕ್ಷತ್ರದ ಹೆಸರಿದೆ. ೯೨೨ ಶಕವರ್ಷ, ಶಾರ್ವರಿ ಸಂವತ್ಸರ ಮತ್ತು ಜ್ಯೇಷ್ಠ ಮಾಸದ ಬಹುಳ ದ್ವಾದಶಿ ಎಂದಿದೆ. ಇಲ್ಲಿ ಸೂರ್ಯ ಮತ್ತು ಚಂದ್ರಗಳ ವಿಕ್ಷೇಪಗಳು ಹೊಂದಿಕೆಯಾಗುವುದಿಲ್ಲ, ಆದರೂ ವ್ಯತಿಪಾತ ಎಂಬ ಪದವೂ ಇದೆ. ಅಂದು ಸೂರ್ಯ ಮತ್ತು ಶುಕ್ರ ಎರಡೂ ಮೃಗಶಿರಾ ನಕ್ಷತ್ರದ ಸಮೀಪವೇ ಇದ್ದವು. ಈ ತಾರೀಖು ಕ್ರಿ.ಶ. ೧೦೦೦ದ ಜೂನ್ ೩.

ಹೀಗೆಯೇ ೫ನೇ ಸಂಪುಟದ ೩೪೧ನೆಯ ಶಾಸನದಲ್ಲಿ ಶಕ ೯೮೦, ವಿಳಂಬ ಸಂವತ್ಸರದ ವೈಶಾಖ ಪುನ್ನಮಿ ಎಂದಿದೆ. ಇಲ್ಲಿರುವ ವ್ಯತಿಪಾತ ಎಂಬ ಪದ ಬುಧಗ್ರಹದ ಸಂಕ್ರಮವನ್ನು ಸೂಚಿಸುತ್ತಿರಬಹುದು. ದಿನಾಂಕ ಏಪ್ರಿಲ್ ೨೧, ಕ್ರಿ.ಶ. ೧೦೫೬. ಹೀಗೆಯೇ ಡಿಸೆಂಬರ್ ೨೧, ೧೦೭೭, ಅಕ್ಟೋಬರ್ ೪, ೧೧೨೬ ಮತ್ತು ಅಕ್ಟೋಬರ್ ೨೪, ೧೨೧೭ – ಈ ತಾರೀಖುಗಳಲ್ಲಿಯೂ ಬುಧಗ್ರಹದ ಸಂಕ್ರಮವನ್ನು ವ್ಯತಿಪಾತ ಎಂದು ಸೂಚಿಸಿರುವುದು ಕಂಡುಬಂದಿದೆ.

ಕ್ರಿ.ಶ. ೧೪೯೦ರ ಒಂದು ಶಾಸನದಲ್ಲಿ 'ರಾಕಾಲೋಕೇ ಶಕಾಬ್ದೇ ಸುರಪತಿ ಸಚಿವೇ ಸಿಂಹಯುತೇ ತುಲಾಯಮರುಧೇ .....' ಎಂದಿದೆ. ಇದನ್ನು ಓದಿದ ಕೀಲ್‌ಹಾರ್ನ್ ಇದು ಗುರುಗ್ರಹ ತುಲಾರಾಶಿಯಲ್ಲಿ ಇರುವುದನ್ನು ಸೂಚಿಸುತ್ತದೆ ಎಂದು ಅಭಿಪ್ರಾಯಪಟ್ಟರು. ಆದರೆ ಇನ್ನೊಬ್ಬ ಶಾಸನ ತಜ್ಞರಾದ ವೆಂಕಟಸುಬ್ಬಯ್ಯನವರು ಇದು ಶುಕ್ರಗ್ರಹಕ್ಕೆ ಅನ್ವಯಿಸುತ್ತದೆ ಎಂದು ಸೂಚಿಸಿದ್ದಾರೆ. ೧೯೧೮ರಲ್ಲಿ ಅವರು ಲೆಕ್ಕದ ಆಧಾರದಿಂದ ಮಾತ್ರ ಈ ವಿಷಯವನ್ನು ತಿಳಿಸಿದ್ದರು. ಈಗ ಲಭ್ಯವಿರುವ ಸಾಫ್ಟ್‌ವೇರ್‌ಗಳ ಸಹಾಯದಿಂದ ಇದನ್ನು ಖಚಿತಪಡಿಸಬಹುದು. ರಾಕಾಲೋಕೇ ಎಂಬುದನ್ನು ಕಟಪಯಾದಿ ಪದ್ಧತಿಯಿಂದ ಶಕವರ್ಷ ೧೩೦೨ ಎಂದು ತಿಳಿಯಬಹುದು. ಈ ಶಾಸನ ಸೂಚಿಸಿರುವ ತಾರೀಖು ಜುಲೈ ೨. ಆ ದಿನ ತುಲಾರಾಶಿಯಲ್ಲಿ ಯಾವ ಗ್ರಹವೂ ಇರಲಿಲ್ಲ, ಸಿಂಹರಾಶಿಯಲ್ಲಿ ಸೂರ್ಯನನ್ನು ಶುಕ್ರ ಸಂಧಿಸಿತು. ಇದು ಯುತಿ ಮಾತ್ರ - ಸಂಕ್ರಮ ಅಲ್ಲ, ತುಲಾಲಗ್ನದಲ್ಲಿ ಅಂದರೆ ತುಲಾರಾಶಿ ಉದಯಿಸುತ್ತಿರುವಾಗ ಯುತಿ ಸಂಭವಿಸಿತು ಎಂಬ ಅಂಶ ಇಲ್ಲಿ ಅಡಗಿದೆ. ಹೀಗೆ ಅನೇಕ ಶಾಸನಗಳಲ್ಲಿ ಖಗೋಳ ಕೌತುಕಗಳು ಅಡಗಿವೆ.

ವೇದ, ಉಪನಿಷತ್‌ಗಳಲ್ಲಿ ಖಗೋಳ ಕೌತುಕಗಳು ಅಡಗಿರಬಹುದಾದ ಸಾಧ್ಯತೆಯನ್ನು ಪ್ರೊ|| ಬಿ. ವಿ. ಸುಬ್ಬರಾಯಪ್ಪ ಮತ್ತು ಕೆ. ವಿ. ಶರ್ಮ ಹಿಂದೆಯೇ ಗುರುತಿಸಿದ್ದರು. ಛಾಂದೋಗ್ಯ ಉಪನಿಷತ್‌ನಲ್ಲಿ – 'ಅದು ಮುಂದಕ್ಕೆ ಸರಿಯಿತು; ಸೂರ್ಯನ ಪಕ್ಕಕ್ಕೆ ಬಂದಿತು; ಸೂರ್ಯನ ಮೇಲೆ ಕಪ್ಪು ಆಕಾರವಾಗಿ ಕಂಡಿತು' ಎಂದಿದೆ.

*ತದ್ವಕ್ಷರತದಾದಿತ್ಯಮಭಿತೋ ಆಶ್ರಯತ್ತದ್ಧಾ ।*
*ಏತದ್ಯದೇತದಾದಿತ್ಯಸ್ಯ ಮಧ್ಯೇ ಕ್ಷೋಭತ ಏವ ॥*

ಇಲ್ಲಿ ಕ್ಷೋಭತ ಎಂಬ ಪದಕ್ಕೆ ಕಪ್ಪು ಎಂದೂ ವ್ಯಾಖ್ಯಾನಿಸಬಹುದು;

ಖಗೋಳ ವಿಜ್ಞಾನಕ್ಕೆ ಸಂಬಂಧಿಸಿದ ಅತಿ ಹಳೆಯ ಕೃತಿಗಳಲ್ಲೊಂದು ಎಂಟನೆಯ ಶತಮಾನದಲ್ಲಿ ಲಲ್ಲ ಎಂಬುವನು ಬರೆದ 'ಶಿಷ್ಯವೃದ್ಧಿತಂತ್ರ' ಇದಕ್ಕೆ ವ್ಯಾಖ್ಯೆಯನ್ನು ಮಲ್ಲಿಕಾರ್ಜುನ ಸೂರಿ ಎಂಬುವನು ಬರೆದಿದ್ದಾನೆ. ಇದರಲ್ಲಿ ಶುಕ್ರ ಮತ್ತು ಬುಧಗ್ರಹಗಳು ಭೂಮಿ-ಸೂರ್ಯರ ನಡುವೆ ಹಾದುಹೋಗುವ ಸಂದರ್ಭವನ್ನು ಚರ್ಚಿಸಿದ್ದಾನೆ. ಎಲ್ಲ ಗೋಳಾಕಾರದ ಗ್ರಹಗಳೂ ಚಂದ್ರನ ಹಾಗೆ ಒಂದು ಪಾರ್ಶ್ವದಲ್ಲಿ ಮಾತ್ರ ಬೆಳಕಾಗಿರುತ್ತವೆ. ಸೂರ್ಯನಿಗೆ ವಿರುದ್ಧ ದಿಕ್ಕಿನಲ್ಲಿ ಕಪ್ಪಾಗಿರುತ್ತವೆ. ಸೂರ್ಯನಿಗಿಂತ ಮೇಲೆ ಇರುವಾಗ ಬೆಳಕಿನ ಭಾಗ ಕಾಣುತ್ತದೆ.... ಬುಧ ಮತ್ತು ಶುಕ್ರ ಸೂರ್ಯನಿಗಿಂತ ಕೆಳಗೆ ಬರುವ ಸಾಧ್ಯತೆ ಇದೆ. ಆದರೆ ಅವು ಚಂದ್ರನಂತೆ ಕಪ್ಪಾಗಿ ಕಾಣುವುದಿಲ್ಲ, ಏಕೆಂದರೆ ಅವು ಸೂರ್ಯನಿಗೆ ಹತ್ತಿರವಾಗಿ ಇರುವುದರಿಂದ ಯಾವಾಗಲೂ ಪ್ರಕಾಶ ಪಡೆಯುತ್ತವೆ...

ಇದರ ಅರ್ಥ ಯುತಿ (ಅಂದರೆ ಬುಧ/ಶುಕ್ರ ಸೂರ್ಯನ ನೇರಕ್ಕೆ ಬಂದಾಗ) ಸಂದರ್ಭದಲ್ಲಿಯೂ ಗ್ರಹಗಳು ಕಾಣುತ್ತವೆ ಎಂದು.



ಮುಂದೆ ಈ ಬಗ್ಗೆ ಚರ್ಚೆ ಕಾಣಸಿಗುವುದು ೧೬ನೆಯ ಶತಮಾನದ ಸಿದ್ಧಾಂತ ತತ್ವ ವಿವೇಕ ಎಂಬ ಪುಸ್ತಕದಲ್ಲಿ. ಇದರ ಕರ್ತೃ ಕಮಲಾಕರ ಭಟ್ಟ. ಬುಧ ಮತ್ತು ಶುಕ್ರಗಳು ಯಾವಾಗಲೂ ಪ್ರಕಾಶಿತವಾಗಿಯೇ ಕಾಣುತ್ತವೆ ಎಂಬುದನ್ನು ಆತ ಅಲ್ಲಗಳೆಯುತ್ತಾನೆ. ತಮಗೆ ಬೆಳಕು ನೀಡುವ ಸೂರ್ಯನ ಮೇಲೆ ತೂತಿನ ಆಕಾರವನ್ನು ಇವು ಸೃಷ್ಟಿಸುತ್ತವೆ ಎಂದು ಸ್ಪಷ್ಟವಾಗಿ ಬರೆದಿದ್ದಾನೆ. ಈ ಪುಸ್ತಕಕ್ಕೆ ವ್ಯಾಖ್ಯಾನ ಬರೆದಿರುವ ಪಂಡಿತ ಸುಧಾಕರ ದ್ವಿವೇದಿಯವರು ಟಿಪ್ಪಣಿಯೊಂದನ್ನು ಸೇರಿಸಿದ್ದಾರೆ. ಬಿಂಬಾಧಿಕಾರ ಎಂಬ ಈ ಪರಿಚ್ಛೇದದಲ್ಲಿ ಚರ್ಚೆ ಮುಂದುವರೆಯುತ್ತದೆ. ಬುಧ ಹಾಗೂ ಶುಕ್ರಗಳಿಗೆ ಯಾವಾಗಲೂ ಪ್ರಕಾಶ ಇರುವುದಾದರೆ ಅವು ಸೂರ್ಯನನ್ನು ಸಮೀಪಿಸಿದಂತೆ ಕಾಣಬೇಕಾಗಿತ್ತಲ್ಲವೇ? ಅಥವಾ ಹಗಲಿನಲ್ಲಿಯೂ ಕಾಣಬೇಕಾಗಿತ್ತಲ್ಲವೇ?

ಈ ಸಂದರ್ಭದಲ್ಲಿ ಹಿಂದಿನವರ ಹೇಳಿಕೆಯನ್ನು ಎಂದು ಸೂಚಿಸಲು 'ಆರ್ಷೇಯ' ಎಂಬ ಪದವನ್ನು ಬಳಸಲಾಗಿದೆ. ಅಂದರೆ ರಂಧ್ರದ ಹಾಗೆ ಕಪ್ಪಾಗಿ ಕಾಣುತ್ತದೆ ಎಂಬ ಅಂಶವನ್ನು ಈಗಾಗಲೇ ಯಾರೋ ಹೇಳಿದ್ದು ಅದನ್ನು ಕಮಲಾಕರ ಭಟ್ಟ ಸಮರ್ಥಿಸುತ್ತಿದ್ದಾನೆ ಎಂದು ಹೇಳಬಹುದು. ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಈತ ಯೋಹಾನೆಸ್ ಕೆಪ್ಲರ್‌ನ ಸಮಕಾಲೀನ. ಅಂದಮಾತ್ರಕ್ಕೆ ಕೆಪ್ಲರನ ಸಿದ್ಧಾಂತ ಇವನಿಗೆ ತಲುಪಿತ್ತು ಎಂದು ವಿಶ್ಲೇಷಿಸಲಾಗದು. ಏಕೆಂದರೆ ಕೊಪರ್ನಿಕಸ್, ಕೆಪ್ಲರ್, ಗೆಲಿಲಿಯೋ ಇವರ ಸಿದ್ಧಾಂತಗಳಿಗೆ ಧರ್ಮಾಕಾರಿಗಳು ಮನ್ನಣೆ ಕೊಡುತ್ತಿರಲಿಲ್ಲ. ಇದಾದ ನೂರು ವರ್ಷಗಳ ನಂತರ ಬಂದು ಜಯಸಿಂಗನನ್ನು ಭೇಟಿ ಮಾಡಿದ ಜೆಸ್ಯೂಟ್ ಪಾದ್ರಿಗಳೂ ಭೂ ಕೇಂದ್ರವಾದದ ಬಗ್ಗೆ ಚರ್ಚಿಸಲಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಭಾರತಕ್ಕೆ ಬಂದ ಐರೋಪ್ಯರಲ್ಲಿ ಹೆಚ್ಚಿನವರು ಧರ್ಮಾಕಾರಿಗಳೇ. ಆದ್ದರಿಂದ ಕೆಪ್ಲರನ ಸಿದ್ಧಾಂತ ಕಮಲಾಕರ ಭಟ್ಟನನ್ನು ತಲುಪಿರಲಾರದು. ಹಾಗಾದರೆ ಅವನ ಹಿರಿಯರಲ್ಲೇ ಯಾರೋ 'ರಂಧ್ರ ದರ್ಶನ'ವನ್ನು ಮಾಡಿರಬಹುದಲ್ಲವೇ? ಶುಕ್ರ ಸೂರ್ಯನ ಮುಂದೆ ಹಾದುಹೋಗುವಾಗ ಕಪ್ಪಾಗಿ ಕಾಣುತ್ತದೆ ಎಂದು ಹೇಳಿರಬಹುದಲ್ಲವೇ?

ಆಸ್ಟ್ರೇಲಿಯಾದಲ್ಲಿ ಸಿಕ್ಕಿರುವ ಒಂದು ಕಲ್ಲಿನ ಮೇಲೆ ಕೆತ್ತಿರುವ ಚಿತ್ರ ಶುಕ್ರ ಸಂಕ್ರಮವೇ ಇರಬಹುದು ಎಂಬ ಊಹೆ ಇದೆ. ಆದರೆ ಅದಕ್ಕೆ ಪೂರಕವಾದ ಯಾವುದೇ ಮಾಹಿತಿ ಇಲ್ಲ.

ಕ್ರಿ.ಪೂ. ೧೫ ನೆಯ ಶತಮಾನದ್ದಿರಬಹುದು ಎಂದು ಹೇಳಲಾದ ಬ್ಯಾಬಿಲೋನಿಯದ ಫಲಕವೊಂದರಲ್ಲಿರುವ ಚಿತ್ರವೂ ಶುಕ್ರ ಸಂಕ್ರಮದ್ದೇ ಎಂದು ಹೇಳಬಹುದು. ಆದರೆ ದಿನಾಂಕದ ಬಗ್ಗೆ ಖಚಿತವಾಗಿ ಹೇಳುವಂತಿಲ್ಲ.

ಅರಬ್ ಖಗೋಳಜ್ಞನಾದ ಅವಿಸೆನ್ನಾ ಎಂಬುವನು ಸೂರ್ಯನ ಮೇಲೆ ಮಚ್ಚೆಯೊಂದು ಕಂಡಿತು ಎಂದು ಬರೆದಿದ್ದಾನೆ. ಆತ ೧೦೩೨ರ ಶುಕ್ರ ಸಂಕ್ರಮವನ್ನು ನೋಡಿದ್ದಿರಬಹುದು.

ಈ ಅಪೂರ್ವ ದೃಶ್ಯವನ್ನು ನೋಡಿದವರು ಯಾರೇ ಆದರೂ ಹೇಗಾದರೂ ಅದನ್ನು ದಾಖಲಿಸಲು ಪ್ರಯತ್ನಿಸಿರಲೇಬೇಕು. ಎಲ್ಲೋ ಒಂದು ಮೂಲೆಯಲ್ಲಿ ಅಡಗಿ ಕುಳಿತಿರಬಹುದಾದ ಇಂತಹ ದಾಖಲೆಗಳನ್ನು ಹುಡುಕಿ ತೆಗೆಯುವುದೇ ಮೋಜು.

ಬಿ. ಎಸ್. ಶೈಲಜಾ ಮತ್ತು ಗೀತಾ ಕೈದಾಳ
ಜವಾಹರ್ ಲಾಲ್ ನೆಹರೂ ತಾರಾಲಯ, ಬೆಂಗಳೂರು



# ಸುಂದರ ಸತ್ಯ

ಎಲ್ಲವೂ ಒಂದು ದಿನ ಮುಗಿದುಹೋಗುತ್ತವೆ
ಬದುಕು ಪುಸ್ತಕದಲ್ಲಿ ಕಟ್ಟಕಡೆಯ ಸಹಿ
ತೇವ ಆರುವ ಮೊದಲೇ ಪಂಜರದ ಗಿಳಿ ಹಾರಿಹೋಗುತ್ತದೆ
ಕಥೆ ಕಂಚಿಗೆ ಸೇರಿಹೋಗುತ್ತದೆ

ಬಾಲ್ಯದಲ್ಲಿ ಕಮ್ಮಗಿನ ಅಮ್ಮನ ರುಚಿ
ಹೊಸ ಸ್ನೇಹದ ಕಾಗೆ ಎಂಜಲು
ನಲ್ಲೆಯ ಮೊದಲ ಮುತ್ತಿನ ಸಿಹಿ
ಕನಸುಗಳಾಗಿ ತಿರುಗಾಡುತ್ತವೆ
ರಪ ರಪ ಆಡುವ ನೆನಪುಗಳೆಲ್ಲ
ಒಂದೇ ಸಲಕ್ಕೆ ತೂಫಾನಿಗೆ ಚಿಗುರೆಲೆಗಳಂತೆ
ಅಲ್ಲಾಡಿಹೋಗುತ್ತವೆ

ಎಲ್ಲವೂ ಒಂದು ದಿನ ಹದಕ್ಕೆ ಬರುತ್ತವೆ
ಗಂಧದ ಕೊರಡಿನಂಥ ದೇಹದಲ್ಲಿ
ಅನುಭವಗಳ ಪರಿಮಳಗಳ ಪ್ರಗಾಢತೆ ಚದುರುತ್ತದೆ
ಇಂದ್ರಿಯಗಳ ಸಮ್ಮಿಲನ ಗಾನದಲ್ಲಿ
ಆಗಾಗ ಅಪಶ್ರುತಿಗಳು ಕೇಳಿಸುತ್ತವೆ
ಸಂಭಾಳಿಸುವ ಚೈತನ್ಯ ಸಂವಾದದಲ್ಲಿ ತೂಗುತ್ತದೆ
ತನುವಿನ ಅಣು ಅಣುವಿನಲ್ಲೂ
ವಿಷಾದ ಸೌಂದರ್ಯ ನಿಶ್ಶಬ್ದವಾಗಿ ಹರಡಿಕೊಳ್ಳುತ್ತದೆ
ಅಕಸ್ಮಾತ್ತಾಗಿ ಒಂದು ಸುಂದರ ಸತ್ಯ ಅನುಭವಕ್ಕೆ ಬರುತ್ತದೆ

ಪ್ರಾಣ ಒಂದೇ
ದೇಹಗಳೇ ಬೇರೆ ಬೇರೆ
ಮೌನ ಒಂದೇ
ಮಾತುಗಳೇ ಬೇರೆ ಬೇರೆ
ನಾವೆಲ್ಲರೂ ಒಂದೇ
ಪ್ರಪಂಚಗಳೇ ಬೇರೆ ಬೇರೆ.

ತೆಲುಗು ಮೂಲ: **ಕೆ. ಎಸ್. ರಮಣ**
ಕನ್ನಡಕ್ಕೆ: **ಕೆ. ವಿ. ಚಂದ್ರಜ್ಯೋತಿ**
ನಂ. ೨/೯೪೬, ಕೆ. ಆರ್. ಬಡಾವಣೆ
ತುಮಕೂರು - ೫೭೨ ೧೦೧

**ಶಿವಮೂರ್ತಿ ನಂದನ ಹೊಸೂರು**

# ಉಮ್ಮಿಯ ಪ್ರಸಂಗ

ವಿಶ್ವ ಎರಡು ವರ್ಷಗಳ ನಂತರ ಊರಿಗೆ ಬಂದಿದ್ದ. ಊರಿಗೆ ಬರಲೇಬಾರದೂಂತ ಇದ್ದೋನನ್ನ ಅವನಮ್ಮ ವರಾತ ಮಾಡಿ ಕರೆಸಿಕೊಂಡಿದ್ದಳು. ಬೆಟ್ಟಪ್ಪನಂಗೆ ಹಟ್ಟೀಲಿ ತಾನೂ ಲೆಕ್ಚರರ್ ಆಗ್ಬೇಕು ಅಂದ್ಕೊಂಡಿದ್ದೋನು ದಿಕ್ಕುತಪ್ಪಿ ಪ್ರೈಮರಿ ಶಾಲೆ ಮಾಸ್ತರಾಗಿ ಕೊಪ್ಪಳ ಸೇರ್‍ಕಂಡಿದ್ದ.

ಮನೇಲಿ ಎಲ್ರೂ ಹೊಲದ ಕೆಲಸಕ್ಕೆ ಹೋದ್ಮೇಲೆ, ಬೇಸರ ಆಗಿ ದೇವರಟ್ಟಿಗಾದರೂ ಹೋಗಿ ಬರೋಣಾಂತ ಎದ್ದು ಹೊರಟ. ವಿಶ್ವ ಊರ ದಾಟಿ ಬರ್‍ತಿದ್ದಂಗೆ ದೇವರಟ್ಟಿ ಕಡೇಲಿಂದ ಉತ್ತಮ್ರರ ಜಾತೀನ ಬೀಡಿ ಗಿಡ್ಡಯ್ಯನ ಮೂರನೇ ಮಗಳು ಉಮ್ಮಿ, ಅವರಕ್ಕ ಗೀತಾಂಜಲಿ ಜೊತೆ, ಊರುಕಡೆ ಬರ್‍ತಿದ್ಲು. ಜನ ನೋಡ್ಲೀಂತ ಉಮ್ಮಿಯ ವರ್ಷದ ಮಗೂನ ಆಡಿಸ್ಕೊಂತ ಬರ್‍ತಿದ್ರು.

ವಿಶ್ವ ರಸ್ತೆಯ ಒಂದು ಬದಿಗೆ ತಲೆ ತಗ್ಗಿಸಿ ನಡ್ಕೊಂಡು ಹೋಗ್ತಿದ್ದ.



''ಯಾಕಲೇ ಮಾದಿಗ, ನನ್ನ ಹಿಂಗೆ ನೋಡ್ತೀಯ'', ಉಮ್ಮಿ ತನ್ನ ಮಗನಿಗೆ ನೆಪ ಹಾಕ್ಕೊಂಡು ಅಂದ್ಲು. ವಿಶ್ವನಿಗೆ ಅದು ತನಗೇ ಅಂದದ್ದು ಅಂತ ಗೊತ್ತಾಯ್ತು. ತಕ್ಷಣ ಗೀತಾಂಜಲಿ ಹೇಳಿದಳು : ''ಏಯ್ ಉಮ್ಮಿ, ನನ್ನ ಮಗಂಗೆ ಕೆಟ್ಟಮಾತ ಆಡಬೇಡ್ವೆ.'' ''ಮನೆಹಾಳ ನನ್ನಮಗಂಗೆ ಇನ್ನೇನು ಅಂತಾರೆ ಬಾರೆ'' ಎಂದವಳೇ ಉಮ್ಮಿ ಒಮ್ಮೆ ವಿಶ್ವನನ್ನು ಕೆಕ್ಕರಿಸಿ ನೋಡಿ, 'ಥೂ' ಎಂದು ಉಗಿದು ಮುಂದೆ ಹೋದಳು.

ವಿಶ್ವನಿಗೆ ಏನೂ ಮಾತನಾಡಲು ತೋಚದೆ ಬಿರಬಿರನೆ ಹೆಜ್ಜೆ ಹಾಕುತ್ತಾ ಹೋಗಿ ಸುಸ್ತಾದಂತಾಗಿ ಮಾರಿಗುಡಿಯ ಕಟ್ಟೆಯ ಮೇಲೆ, ಬೇವಿನ ಮರದ ನೆರಳಲ್ಲಿ ಕುಳಿತ. ಅವಳಾಡಿದ ಮಾತು ಮತ್ತೆ ಕಿವಿಗೆ ಅಪ್ಪಳಿಸಿದಂತಾಯಿತು.

''ನಾನೇನು ತಪ್ಪು ಮಾಡಿದೆ ? ನಾನು ಎಂದೂ ಯಾರಿಗೂ ಕೆಟ್ಟದಾಗ ಬಾರದೆಂದು ಬಯಸುತ್ತಿರುವವನು. ಕೆಳಜಾತೀಲಿ ಹುಟ್ಟಿದ್ರೂ ಮೇಲು ಜಾತಿಯೋರ ಹಾಗೆ ಕೆಟ್ಟದಾಗಿ ನಡೆದುಕೊಂಡಿಲ್ಲ, ನಾನು ಮನಸ್ಸು ಮಾಡಿದ್ದಿದ್ದರೆ, ಏನು ಬೇಕಾದರೂ ಮಾಡಬಹುದಿತ್ತು.''

ಅವನಿಗೆ ಮತ್ತೆ ಹಳೆಯದೆಲ್ಲಾ ನೆನಪಿಗೆ ಬಂದಿತು.

ಹೊಸೂರಿನಲ್ಲಿ ಜಾತ್ಯಸ್ಥರದೇ ಮೇಲುಗೈ, ಅದರಲ್ಲೂ ಕೆರೆ ದಂಡೆಯ ವಂಶಸ್ಥರದೇ ಮೇಲುಗೈ. ಸ್ಥಿತಿವಂತರಾದರೂ ಅವರು ಕಚ್ಚೆ ಭದ್ರವಿಲ್ಲದವರು. ಕೆಳಜಾತಿ ಹೆಂಗಸರ ಜೊತೆ ಚಕ್ಕಂದ ಆಡೋರು. ಅವರಲ್ಲಿ ಶಕುನಿ ಪಾತ್ರದ ಬೀಡಿ ಗಿಡ್ಡಯ್ಯ ಮಹಾನ್ ಕಚ್ಚೆ ಹರುಕ. ಅವನ ಐದು ಜನ ಪುತ್ರಿಯರಲ್ಲಿ ಉಮ್ಮಿ ಮಧ್ಯದವಳು.

ಕಾಪಿ ಹೊಡ್ದು ಡಿಗ್ರಿ ಪಾಸು ಮಾಡಿ, ಲಾ ಪರೀಕ್ಷೆಯಲ್ಲೂ ಕಾಪಿ ಹೊಡೀವಾಗ ಸಿಕ್ಕಿಬಿದ್ದು, ಡಿಬಾರಾಗಿ, ಪ್ಯಾಟೇನಾಗೆ ಆಡಬಾರದ ಆಟ ಆಡಿ, ಮಾಡಬಾರದ್ದ ಮಾಡಿ, ರೌಡಿಗಳು ಪ್ರಾಣ ತೆಗೀತಾರೇಂತ ಹೆದ್ರಿ ಊರು ಸೇರಿಕೊಂಡ ಕೋಳಿನಂಜ ಈ ವಂಶಕ್ಕೆ ನಾಯಕ. ಜೊತೆಗೆ, ಈ ಪಂಚ ಪುತ್ರಿಯರಿಗೆ ಬಾಡಿಗಾರ್ಡು.

ಕೆಳಜಾತಿಯೋರ ಮನೇಲಿ ಕೋಳಿ ಕುಯ್ದರೆ ವಾಸನೆ ಹಿಡ್ಕೊಂಡೇ ಹೋಗಿ, ಒಂದು ಕೋಳಿ ಪೂರಾ ಒಬ್ನೆ ಹಿಡ್ದು ಬರ್‍ತಿದ್ದರಿಂದ ಇವನಿಗೆ ಕೋಳಿನಂಜ ಎಂಬ ಹೆಸರು. ಬಡವರ ಮನೆ ಹುಡ್ಗೀರ್‍ನೆಲ್ಲಾ ಬಡ್ದು ಬಾಯಿಗೆ ಹಾಕ್ಕೋತಿದ್ದ ಇವನನ್ನ ಎದುರಿಸಲಾರದೆ ಎಲ್ಲರೂ ಒಳಗೊಳಗೇ ಸಿಡಿಮಿಡಿಗೊಳ್ತಿದ್ದರು.

ಅದ್ಯಾವುದೋ ಗಳಿಗೇಲಿ ಬೀಡಿ ಗಿಡ್ಡಯ್ಯನ ಹಿರಿಮಗಳು ಜಯಬಾಲಿ ಎಲ್ಲರ ಕಣ್ಣುತಪ್ಪಿಸಿ, ಪಕ್ಕದ ಮನೆ ಬಂಗಾರಿಯ ಪಿಂಡಾನ ಹೊಟ್ಟೆಗೆ ಹಾಕ್ಕೊಂಡು ಬಿಟ್ಲು. ತಡಮಾಡದೆ ಕೋಳಿನಂಜ ಆ ಪಿಂಡಾನ ತೆಗೆಸಿ, ಪಡುವಲ ದಿಕ್ಕಿಗೆ ಹೋಗಿ, ಅಬ್ಬೆಪಾರಿ ಹನುಮನ್ನ ಹಿಡ್ಕೊಂಡು ಬಂದು, ಜಯಬಾಲೀನ ಅವನ ಕೊರಳಿಗೆ ಕಟ್ಟಿ, ಮನೆ ಅಳಿಯನನ್ನಾಗಿ ಮಾಡಿಕೊಂಡ.

ಎರಡನೆ ಮಗಳು ಗೀತಾಂಜಲಿ ಪಿ.ಯು.ಸಿ. ಮುಗಿಯೋ ಹೊತ್ತಿಗೆ ಎಲ್ಲಾ ವಿದ್ಯೆಗಳನ್ನು ಕಲ್ತು, ಮನೆ ಸೇರಿದೋಳು. ಮನೆಗೆ ಬಂದಿದ್ದ ಕೋಳಿ ನಂಜನ ಸ್ನೇಹಿತ ವಕೀಲ ರಮಣನಿಗೆ ಕಣ್ಣುಹೊಡ್ಡಿದ್ದೇ ತಡ, ರಮಣ ಕಾಳು ಹಾಕಿಬಿಟ್ಟ. ರಮಣ ಆಗಾಗ ಊರಿಗೆ ಬಂದು ರಾತ್ರಿ ಕೋಳಿನಂಜನ ಮನೇಲೇ ವಸತಿ ಮಾಡಿದಾಗ, ಕೋಳಿ ನಂಜ ಈ ಗೀತಾಂಜಲೀನ, ಧರ್ಮಸ್ಥಳದಲ್ಲಿ ಕದ್ದು ರಮಣನ ಕೊರಳಿಗೆ ಕಟ್ಟಲಿಕ್ಕೆ ಸಿದ್ಧ ಮಾಡಿಕೊಂಡ. ಅಷ್ಟರಲ್ಲಿ ರಮಣ ಅವಳನ್ನು ಸರ್ಕಾರಿ ಶಾಲೆ ಮೇಡಂ ಮಾಡಿದ್ದ.

ಈ ವಿಚಾರ ತಿಳಿದ ರಮಣನ ಹೆಂಡ್ತಿ ಸುಶೀಲ ರಾತ್ರೋರಾತ್ರಿ ಕಾರು ತೊಗೊಂಡು ಬಂದು, ಗೀತಾಂಜಲಿ ತೆಕ್ಕೆನಲ್ಲಿ ಕಾವು ತಕತಿದ್ದ ರಮಣನ ಕೊರಳ ಪಟ್ಟಿ ಹಿಡ್ದು ಎಳ್ಕೊಂಡು ಹೋಗಿ, ಕಾರಲ್ಲಿ ಹಾಕ್ಕೊಂಡು ಹೋದಳು.

ಇದರಿಂದ ನಿರಾಶೆಗೊಂಡ ಕೋಳಿನಂಜ ಮೂಡಲ ದಿಕ್ಕಿಗೆ ಪ್ರಯಾಣ ಮಾಡಿ ಯಾವುದೋ ಗುಡ್ಡದಳ್ಳಿಯ ಅಡ್ಡೆ ಮುದನ್ನ ಹಿಡ್ಕೊಂಡು ಬಂದು, ಅದೇ ಮಹೂರ್ತದಾಗೆ ಧರ್ಮಸ್ಥಳದಲ್ಲಿ, ಅಡ್ಡೆ ಮುದನ ಕೊರಳಿಗೆ ಗೀತಾಂಜಲೀನ ಕಟ್ಟಿಬಿಟ್ಟ.

ಆದರೆ ಗುಡ್ಡದಳ್ಳಿ ಅಡ್ಡೆಮಾದ ಹನುಮನ ಹಾಗೆ ಪೆದ್ದ ಆಗಿರಲಿಲ್ಲ. ಮಿಟುಕಲಾಡಿ ಗೀತಾಂಜಲಿಯ ಭಗವದ್ಗೀತೇನ ತಿಳ್ಕೊಂಡೋನೇ, ಮೋಸಹೋದೆ ಅಂದ್ಕೊಂಡು, ಏನೂ ಮಾಡಲಿಕ್ಕೆ ಆಗದೇನೇ, ಪಟ್ಟಂತ ಅವಳನ್ನ ಗುಡ್ಡದಳ್ಳಿಗೆ ಎತ್ಕಂಡೋಗಿ, ಅಲ್ಲೇ ಹತ್ತಿರದ ಶಾಲೆಗೆ ವರ್ಗ ಮಾಡಿಸಿಕೊಂಡು ಭದ್ರಮಾಡಿಕೊಂಡ. ಇದರಿಂದ ಕೈಯೊಳಗಿನ ತಿಂಡೀನ ಕಾಗೆ ಬಾಯಿಗಿಟ್ಟ ಮಗು ಅಳೋಹಾಗೆ ಪಕ್ಕದ ಮನೆ ತೂತು ಬಸವ ನೆಲ ಬಡ್ಕೊಂಡು ಗೋಳಾಡತಿದ್ದಾಗ ಜಯಬಾಲ ಬಂದು ಅವನಿಗೆ ಸಮಾಧಾನ ಮಾಡಿದ್ಲು.

ಬೀಡಿ ಗಿಡ್ಡನ ಮೂರನೆ ಮಗಳು ಉಮ್ಮಿ ಪಿ.ಯು.ಸಿ.ಗೆ ಸೇರ್‍ತಿದ್ದ ಹಾಗೇ ಪಕ್ಕದ ಬೆಂಚಲ್ಲೇ ಕೂತ್ಕೋತಿದ್ದ ಬೇಗಾವ ವಿಶ್ವನ ಮೇಲೆ ಕಣ್ಣುಹಾಕಿಬಿಟ್ಲು.

ವಿಶ್ವ ಕೆಳಜಾತಿಯೋನು. ಆದ್ರೂ ನೋಡಲಿಕ್ಕೆ ಚೆನ್ನಾಗಿದ್ದ, ಬುದ್ಧಿವಂತನಾಗಿದ್ದು, ತುಂಬ ಚೆನ್ನಾಗಿ ಓದ್ತಿದ್ದರಿಂದ, ಲೆಕ್ಚರರ್‌ಗಳಿಗೆಲ್ಲ ಅವನ ಮೇಲೆ ಬಹಳ ಪ್ರೀತಿ. ಅಮಾಯಕ ವಿಶ್ವನಿಗೆ ಒಂದೇ ಗುರಿ. ನಮ್ಮ ಹಟ್ಟಿ ಬೆಟ್ಟಪ್ಪನಂಗೆ ನಾನೂ ಲೆಕ್ಚರರ್ ಆಗಬೇಕು ಅನ್ನೋ ಕನಸಿನಿಂದ ಕಷ್ಟಪಟ್ಟು ಓದ್ತಿದ್ದ.

ಲೆಕ್ಚರರ್ ಪಾಠ ಮಾಡೋದರತ್ತಲೇ ಗಮನವಿರಿಸಿದ್ದ ವಿಶ್ವನನ್ನ ಕದ್ದು ಕದ್ದು ಉಮ್ಮಿ ನೋಡ್ತಿದ್ದುದು ವಿಶ್ವನಿಗೆ ತಿಳಿಯಲೇ ಇಲ್ಲ.

ಕಾಲೇಜು ಮುಗಿಸಿಕೊಂಡು ತಡವಾಗಿ ದೇವರಟ್ಟಿ ಕಡೇಲಿಂದ ಒಂಟಿಯಾಗಿ ಊರ್ಕಡೆ ಬರ್ತಿದ್ದ ವಿಶ್ವನ್ನ ಮಾರೀಗುಡಿ ಹತ್ತಿರ ಉಮ್ಮಿ ತಡೆದು ನಿಲ್ಲಿಸಿದಳು. ಮೇಲ್ಜಾತಿ ಬೀಡಿಗಿಡ್ಡಯ್ಯನ ಮಗಳು ಉಮ್ಮಿ ಕೆಳಜಾತಿಯವನಾದ ನನ್ನನ್ನೇಕೆ ತಡೆದಳೂಂತ ತಿಳಿದೇ, ವಿಶ್ವ ಪೆಚ್ಚಾಗಿ ಅವಳತ್ತ ನೋಡಿದ. ಉಮ್ಮಿ ಮೆಲ್ಲನೇ ಕಿರುನಗೆ ಬೀರಿ ಮುತ್ತುದುರಿಸಿದಳು.

''ವಿಶ್ವ, ಇಂಗ್ಲಿಷ್ ನೋಟ್ಸ್ ಕೊಡು, ಬರ್ಕೊಂಡು ನಾಳೆ ಕೊಡ್ತೀನಿ.''

ಉತ್ತಮ ಜಾತೀರು ಯಾರಾದ್ರು ನನ್ಜೊತೆ ಇವ್ಳು ಮಾತಾಡ್ತಿರೋದ ನೋಡಿದರೆ ನನಗೆ ಲತ್ತೆ ಬಿದ್ದಾವು ಅಂದ್ಕೊಂಡು ವಿಶ್ವ ತಕ್ಷಣ ಅವಳ ಕೈಗೆ ನೋಟ್ಸ್ ಕೊಟ್ಟು ಸರಸರನೇ ನಡೆದುಬಿಟ್ಟ.

''ಥೂ ಪುಕ್ಕಲು ನನ್ನ ಮಗನೇ'' ಅಂದ ಉಮ್ಮಿ ಬೇಸರದಿಂದ ಅವನನ್ನ ಹಿಂಬಾಲಿಸಿದಳು. ಕಾಲೇಜಲ್ಲೇ ಕೇಳಿದ್ರೆ ಕೊಡ್ತಿದ್ದೆ, ಇಲ್ಲಿ ಯಾಕೆ ಕೇಳಿದ್ಲು, ಅಂದುಕೊಂಡ ವಿಶ್ವ, ಅಯ್ಯೋ ದೊಡ್ಡೋರ ಮಕ್ಕಳ ವಿಚಾರ ನನಗ್ಯಾಕೆ ಅಂದ್ಕೊಂಡು ಮನೆ ಸೇರಿದ.

ಮಾರನೆಯ ದಿನ ಕಾಲೇಜಿಗೆ ಸರಸರನೆ ಹೋಗುತ್ತಿದ್ದ ವಿಶ್ವನಿಗೆ ಮಾರೀಗುಡಿ ಮರೆಯಿಂದ ಹೊರಬಂದ ಉಮ್ಮಿ ಅಡ್ಡ ನಿಂತಳು. ವಿಶ್ವ ಊರತ್ತ ತಿರುಗಿ ನೋಡಿದ, ರಸ್ತೆ ಖಾಲಿ. ಅವಳು ನೋಟ್ಸ್ ಎದುರು ಹಿಡಿದಳು, ಅವನು ಸರಕ್ಕನೆ ಕಸಿದುಕೊಂಡು, ಕಾಲೇಜಲ್ಲೇ ಕೊಡಬಹುದಿತ್ತು, ಮಾರೀಗುಡಿ ಹತ್ತಿರ ಮಾರಮ್ಮನ ಹಾಗೆ ಯಾಕೆ ತರುಬಿದಳೋ ಅಂದುಕೊಂಡು ಮುಂದೆ ಹೊರಟವನಿಗೆ ಉಮ್ಮಿ ಹೇಳಿದಳು.

''ಅದರೊಳಗೆ ಒಂದು ಕಾಗದ ಇದೆ ಓದ್ಕೊಳ್ಳೋ ವಿಶ್ವ.''

ಅವನಿಗೆ ಗಾಬರಿಯಾಯಿತು, ಭಯ ಕೂಡ. ಕಾಗದ! ಏನೋ ಗ್ರಾಚಾರ ಅಂದ್ಕೊಂಡು ಓಡುನಡಿಗೇಲೇ ಕಾಲೇಜು ತಲುಪಿದ.

ವಿಶ್ವನಿಗೆ ಭಯ, ಜೊತೆಗೆ ಕುತೂಹಲ. ಏನು ಕಾಗದ ಬರೆದಿರಬಹುದು? ಕ್ಲಾಸ್ ರೂಂಗೆ ಬಂದಾಗ ಯಾರೂ ಬಂದಿರಲಿಲ್ಲ, ಎಂದಿನಂತೆ ತನ್ನ ಜಾಗದಲ್ಲಿ ಕುಳಿತು ಬೆವರೊರೆಸಿಕೊಂಡ. ಅವನಿಗೆ ಅನುಮಾನ. ಲವ್ ಲೆಟರ್ ಇದ್ದೀತೆ? ಛೇ! ಛೇ! ನಾನೆಲ್ಲಿ, ಅವಳೆಲ್ಲಿ? ಇರಲಾರದು, ಕುತೂಹಲ ತಡೆಯದಾಯಿತು. ಪುಸ್ತಕ ತೆರೆದ. ಮಡಿಚಿದ ಹಾಳೆ. ನಡುಗುವ ಕೈಗಳಿಂದಲೇ ತೆರೆದ. ಅವನ ಊಹೆ ನಿಜವಾಗಿತ್ತು, ಪ್ರೇಮ ಪತ್ರ! ನಾನು ನಿನ್ನನ್ನ ಪ್ರೇಮಿಸುತ್ತೇನೆ... ಏನೇನೋ. ಭಯವಾಯಿತು. ಪರಪರನೆ ಕಾಗದ ಹರಿದು ಕಿಟಕಿಯಿಂದ ಹೊರಗೆಸೆದು ಎದ್ದು ಹೊರಬಂದ. ಮತ್ತೆ ಉಮ್ಮಿ ಎದುರಾದಳು. ಅವನು ಬೆದರಿದವನಂತೆ ಸ್ಟಾಫ್ ರೂಂ ಕಡೆ ದಾಪುಗಾಲು ಹಾಕಿದ.

ಕ್ಲಾಸು ಆರಂಭವಾಯಿತು. ಅವಳು ಯಥಾಪ್ರಕಾರ ಕದ್ದು ನೋಡುವುದನ್ನ ಗಮನಿಸಿದ. ಪಾಠ ಕೇಳದಾಯಿತು, ಕಸಿವಿಸಿಗೊಂಡ. ಕೊನೆಯ ಪೀರಿಯಡ್ ಮುಗಿಯುತ್ತಿದ್ದಂತೆ ಲೆಕ್ಚರರ್ ಜೊತೆ ಸ್ಟಾಫ್ ರೂಂಗೆ ಹೋಗಿ ತಪ್ಪಿಸಿಕೊಂಡ. ಲೇಟಾಗಿ ಅವನು ಊರಿಗೆ ಹೊರಟಾಗ, ಅವನಿಗೆ ಅವಳು ಮಾರಮ್ಮನ ಗುಡಿಯ ಬಳಿ ಕಾಯಬಹುದೆನಿಸಿ, ಹೊಲಗಳಲ್ಲಿ ಅಡ್ಡಬಿದ್ದು ಮನೆ ಸೇರಿಕೊಂಡ.

ರಾತ್ರಿ ಮಲಗಿದರೂ ವಿಶ್ವನ ಆತಂಕ ಕಡಿಮೆಯಾಗಲಿಲ್ಲ, ಇಪ್ಪತ್ತರ ಪ್ರಾಯದೊಳಗಿನ ಹಳ್ಳಿಯ ಮುಗ್ಧ ಹುಡುಗನ ಎದೆಯಲ್ಲಿ ಪ್ರೇಮದ ಆಹ್ವಾನಕ್ಕೆ ಪ್ರತಿಕ್ರಿಯೆ ಮೂಡುವುದಾದರೂ ಹೇಗೆ? ಅವನಿಗೆ ಯೋಚನೆಗಿಟ್ಟುಕೊಂಡಿತು.

''ನಾನು ಲೆಕ್ಚರರ್ ಆಗಬೇಕು, ಬೆಟ್ಟಯ್ಯನಂತೆ ಹಟ್ಟಿಯ ಎಲ್ಲರೂ ನನ್ನನ್ನ ಪ್ರೀತಿ, ಗೌರವದಿಂದ ಕಾಣಬೇಕು, ಅದಷ್ಟೇ ನನ್ನ ಕನಸು. ಈ ಉಮ್ಮಿ ಯಾಕೆ ಹೀಗೆ ಮಾಡಿದಳು? ನಾನು ಕೆಳಗಿನವನು. ಅವಳು ಮೇಲ್ಜಾತಿಯವಳು. ಸಾಮಾನ್ಯರಲ್ಲ ಅವರು. ಇದೇನಾದರೂ ಗೊತ್ತಾದರೆ ಅವರು ನನ್ನನ್ನೇ ಮರಕ್ಕೆ ಕಟ್ಟಿ ಹೊಡೀತಾರೆ, ಬೇಡ, ಬೇಡ, ಅವಳ ಸಹವಾಸವೇ ಬೇಡ'' ಎಂದುಕೊಳ್ಳುತ್ತಾ ಹಾಗೇ ನಿದ್ದೆಹೋದ.

ಮರುದಿನ ಕಾಲೇಜಿಗೆ ಹೊರಟಾಗ ಮತ್ತದೇ ಅಳುಕು. ಮೆಲ್ಲನೇ ಹೆಜ್ಜೆ ಹಾಕತೊಡಗಿದ. ಅವನಿಗಿಂತ ಮುಂದೆ ಉಮ್ಮಿ ಒಬ್ಬಳೇ ಹೋಗುತ್ತಿದ್ದಳು. ವಿಶ್ವ ಥಟ್ಟನೆ

## ಶ್ರೀ ಲಕ್ಷ್ಮಿಯಾಗಿ ಬನ್ನಿ

ಸದ್ದುಗದ್ದಲವಿಲ್ಲದೆ
ಗುಡಿ ಗೋಪುರಗಳಲ್ಲಿ
ಮಲಗಿರುವ ಬೆಳ್ಳಿ
ಬಂಗಾರ, ಮುತ್ತು ರತ್ನ
ವಜ್ರ ವೈಢೂರ್ಯಗಳೇ,
ಕತ್ತಲೆ ಕೋಣೆಗಳಲ್ಲಿ
ಅಪರಾಧಿಗಳಂತೆ
ಕುಳಿತಿರುವುದು ನಿಮಗೆ
ಶೋಭೆಯಲ್ಲ,
ನೀವೇನು ಕಳ್ಳರೋ
ಸುಳ್ಳರೋ ಮೋಸಗಾರರೋ
ವಂಚಕರೋ ಬಚ್ಚಿಟ್ಟುಕೊಳ್ಳಲು.
ಏಳಿ ಮೇಲೇಳಿ
ಎದ್ದೆದ್ದು ಬನ್ನಿ
ಬಡವರ ಬಾಳಿಗೆ
ಬೆಳಕಾಗಿ ಬನ್ನಿ
ತಿರಿದು ತಿನ್ನುವವರಿಗೆ
ಅನ್ನವಾಗಿ ಬನ್ನಿ
ಬೀದಿಯಲಿ ಬಿದ್ದಿರುವ
ನತದೃಷ್ಟರಿಗೆ
ವಸತಿಯಾಗಿ ಬನ್ನಿ
ರಾಷ್ಟ್ರದ ಉದ್ಧಾರಕ್ಕೆ
ಶ್ರೀ ಲಕ್ಷ್ಮಿಯಾಗಿ ಬನ್ನಿ
ವರಮಹಾಲಕ್ಷ್ಮಿಯಾಗಿ ಬನ್ನಿ.



**ಎಸ್. ಸಿ. ರಂಗನಾಥ್**
'ಮಾತೃಶ್ರೀ ನಿಲಯ', ಮನೆ ನಂ. ೯/೭, ೩ನೇ 'ಡಿ' ಮುಖ್ಯರಸ್ತೆ, ೯ನೇ ಕ್ರಾಸ್, ೮೦ ಅಡಿ ರಸ್ತೆ, ಸಾರಕ್ಕಿ ೧ನೇ ಹಂತ, ಜೆ.ಪಿ.ನಗರ, ಬೆಂಗಳೂರು - ೫೬೦ ೦೭೮

ನಿಂತುಬಿಟ್ಟ. ಅವಳು ಹಿಂದಿರುಗಿ ನಿಂತು ಇವನನ್ನ ನೋಡಿದಳು. ವಿಶ್ವನ ಎದೆ ಹೊಡೆದುಕೊಳ್ಳತೊಡಗಿತು. ಅತ್ತಿತ್ತ ನೋಡಿ ಪಕ್ಕದ ಹೊಲಕ್ಕೆ ನುಗ್ಗಿ ಓಡುತ್ತಲೇ ಬಂದು ಕಾಲೇಜು ಸೇರಿದ.

ಕ್ಲಾಸ್ ಪ್ರಾರಂಭಕ್ಕೆ ಎರಡು ನಿಮಿಷ ಮುಂಚೆ ಒಳಬಂದ ಉಮ್ಮಿ ಪಕ್ಕದ ಬೆಂಚಲ್ಲಿ ಕುಳಿತು ಅವನನ್ನೇ ಕೋಪದಿಂದ ನೋಡುತ್ತಾ ಪಿಸುಗುಟ್ಟಿದಳು, ''ತಪ್ಪಿಸಿಕೊಂಡು ಓಡಿಹೋಗ್ತೀಯ ? ಮನೆಗೇ ಬರ್ತೀನಿ.''

ಅವಳ ಮಾತು ಕೇಳಿ ವಿಶ್ವ ತಬ್ಬಿಬ್ಬಾದ. ಅವನೊಳಗೆ ಸುಂದರಿ ಹುಡುಗಿಯ ಪ್ರೇಮಾಹ್ವಾನಕ್ಕೆ ಉಂಟಾಗುವ ಭಾವನೆಗಳಿಗೆ ಬದಲಾಗಿ, ಭಯದ ಕಂಪನಗಳೇ ತುಂಬಿದವು. ಅನ್ಯಮನಸ್ಕನಾದ. ಕ್ಲಾಸು ಹೇಗೆ ಮುಗಿಯಿತೋ, ಎಲ್ಲರಿಗಿಂತ ಮೊದಲೇ ಹೊರಬಂದು ಓಡುನಡಿಗೆಯಲ್ಲೇ ಮನೆ ಸೇರಿ, ನೆಮ್ಮದಿಯ ನಿಟ್ಟುಸಿರಿಟ್ಟು ನೀರು ಕುಡಿದ.

ಉಮ್ಮಿ ಮಾತಿಗೆ ತಪ್ಪಲಿಲ್ಲ. ಸಂಜೆ ಮನೆಯ ಬಾಗಿಲಿಗೇ ಬಂದುಬಿಟ್ಟಳು. ''ವಿಶ್ವಾ'', ಅವಳ ಕೂಗು ಕೇಳಿ ಅವನ ತಾಯಿ ಕರಿಯವ್ವ ಹೊರಬಂದು ಅಚ್ಚರಿಯಿಂದ ಕೇಳಿದಳು :

''ಇದೇನವ್ವ, ನಮ್ಮ ಮನೆಗಂಟ ಬಂದಿದೀಯ, ಏನು ಇಸ್ಯ ?''

''ಏನಿಲ್ಲ ಕರಿಯವ್ವ, ವಿಶ್ವನತ್ರ ಪುಸ್ತಕ ಇಸ್ಕೋಬೇಕಿತ್ತು.'' ಅವಳ ಮಾತಿಗೆ ಕರಿಯವ್ವ ಕೂಗಿ ಕರೆದಳು :

''ಲೇ ಇಸ್ವಾ, ಬಾರ್ಲಾ ಇಲ್ಲಿ, ಉಮಕ್ಕ ಬಂದವ್ಳೆ, ಅದೇನೋ ಪುಸ್ಕ ಬೇಕಂತೆ.''

ವಿಶ್ವ ಅಂಜುತ್ತಲೇ ಬಂದು ನಿಂತ. ಅವಳು ಗೆಲುವಿನ ನಗೆ ಬೀರಿ ಹೇಳಿದಳು : ''ವಿಶ್ವ, ಇಂಗ್ಲಿಷ್ ನೋಟ್ಸ್ ಕೊಡು, ಬರೆದುಕೊಂಡು ಕೊಡ್ತೀನಿ.'' ವಿಶ್ವ ಗಲಿಬಿಲಿಯಾದರೂ ಯಾಂತ್ರಿಕವಾಗಿ ನೋಟ್ಸ್ ತಂದು ಅವಳಿಗೆ ಕೊಟ್ಟ. ಅವಳೊಂದು ಕಿರುನಗೆ ಬೀರಿ ಹೊರಟಳು. ಅವಳ ವೈಯ್ಯಾರದ ನಡಿಗೆ ಕಂಡ ಹಟ್ಟಿಯ ಅರೆಬರೆ ಗ್ರಾಜುಯೇಟ್ ಪಡ್ಡೆಗಳು ಅಚ್ಚರಿಯಿಂದ ಅವಳನ್ನೇ ದಿಟ್ಟಿಸಿದವು.

ವಿಶ್ವನಿಗೆ ಒಳಗೊಳಗೇ ತಳಮಳ. ಯಾರಿಗೂ ಹೇಳಲಿಲ್ಲ, ಮುಸುಕು ಹಾಕಿ ಮಲಗಿಬಿಟ್ಟ. ಬೆಳಿಗ್ಗೆ ಏಳುವ ವೇಳೆಗೆ ಏಳದೇ ಹೋದಾಗ ಕರಿಯವ್ವ ಅವನನ್ನ ಏಳಿಸಲು ಹೋದಳು. ಅವನ ಮೈ ಸುಡುತ್ತಿತ್ತು.

ಆ ದಿನ ವಿಶ್ವ ಕಾಲೇಜಿಗೆ ಹೋಗಲಿಲ್ಲ. ಕರಿಯವ್ವನೇ ದೇವರ ಹಟ್ಟಿಯ ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಇಂಜೆಕ್ಷನ್ ಮಾಡಿಸಿಕೊಂಡು ಬಂದನಂತರ, ಸಂಜೆಯ ವೇಳೆಗೆ ಜ್ವರ ಇಳಿದಿತ್ತು.

ವಿಶ್ವ ಕಾಲೇಜಿಗೆ ಬರದೇ ಇದ್ದುದರಿಂದ ಉಮ್ಮಿಯೇ ಸಂಜೆ ಮತ್ತೆ ಅವನ ಮನೆಯ ಬಳಿ ಬಂದಳು. ಅವನ ಸ್ಥಿತಿ ನೋಡಿ ಕಂಡೂ ಕಾಣದಂತೆ ಕಿಸಕ್ಕನೆ ನಕ್ಕು ನೋಟ್ಸ್ ಕೊಟ್ಟು ಹೋದಳು. ವಿಶ್ವನಿಗೆ ಗೊತ್ತಾಯಿತು. ಹಾವಿನ ಬುಟ್ಟಿ ತೆರೆದಂತೆ ಮೆಲ್ಲನೆ ಪುಸ್ತಕ ತೆರೆದ. ಲೆಟರ್ ಹಾವಿನಂತೆ ಮಲಗಿತ್ತು. ಯಾರಿಗೂ ಕಾಣದಂತೆ ಮೆಲ್ಲನೇ ತೆರೆದು ಓದಿದ. ಮತ್ತವೇ ಸಾಲುಗಳು. ಕೊನೆಯಲ್ಲಿ, ''ನಾನು ನಿನ್ನ ಬಿಡುವುದಿಲ್ಲ'' ಎಂದಿತ್ತು. ಈಗ ಅವನಿಗೆ ಹಿಡಿದಿದ್ದ ಜ್ವರ ಜರ್ರನೇ ಇಳಿದಂತಾಗಿ ಸಣ್ಣಗೆ ಬೆವರಿದ.

ಇದೇ ಚಿಂತೆಯಲ್ಲಿ ಮರುದಿನ ಮೆಲ್ಲನೆ ತಲೆಬಾಗಿ ನಡೆದು ಹೋಗುತ್ತಿದ್ದ. ಮಾರೀಗುಡಿಯ ಮರೆಯಿಂದ ಸರ್ರನೆ ಹೊರಬಂದ ಉಮ್ಮಿ ಅವನ ಕೈಹಿಡಿದು ದರದರನೇ ಅವನನ್ನ ಗೋಡೆಯ ಮರೆಗೆ ಎಳೆದುಕೊಂಡು ಹೋಗಿ, ಅವನನ್ನ ಚುಂಬಿಸಿಬಿಟ್ಟಳು. ಈ ಆಘಾತದಿಂದ ಅವನು ಚೇತರಿಸಿಕೊಳ್ಳುವ ಮೊದಲೇ, ಅವನನ್ನು ಬರಸೆಳೆದು ಬಾಚಿ ತಬ್ಬಿಕೊಂಡಳು.

ಅವನೊಳಗಿನ ಯುವ ವಿಶ್ವ ಎದ್ದುಬಿಟ್ಟ, ಅವನೂ ಅವನಿಗರಿಯದಂತೆ ಅವಳನ್ನ ತಬ್ಬಿದ. ಅವನೊಳಗೆ ಏನೇನೋ ಆತಂಕ, ತೊಳಲಾಟ, ಭಯ-ನಿಲುವು, ನಿಲುವು-ಭಯ, ಕೊನೆಗೆ ನಿಲುವು ಗೆದ್ದಿತು. ಇಬ್ಬರೂ ಒಟ್ಟಿಗೇ ಕಾಲೇಜಿಗೆ ಬಂದರು.

ವಿಶ್ವನ ಮನೆಗೆ ಉಮ್ಮಿಯ ಓಡಾಟ ಅತಿಯಾಯಿತು. ಅವನ ಪೆಟ್ಟಿಗೆಯ ತಳದಲ್ಲಿ ಅವಳ ಪ್ರೇಮ ಪತ್ರಗಳು ಭದ್ರವಾಗಿ ಅರಳತೊಡಗಿದವು. ಪಿ.ಯು.ಸಿ. ಪರೀಕ್ಷೆ ಮುಗಿವ ವೇಳೆಗೆ ಅವರು ಬಿಟ್ಟಿರದಾದರು. ಅಮಾಯಕ ಹುಡುಗನೆದೆಯಲ್ಲಿ ನವಿರು ಕನಸುಗಳು ಸ್ಫುಟಗೊಂಡವು.

ಹಟ್ಟಿಯ ಪಡ್ಡೆಗಳಿಗೆಲ್ಲಾ ಸಂಪೂರ್ಣ ಮನದಟ್ಟಾಗಿತ್ತು. ''ಇದುವರೆಗೂ ಈ ಉತ್ತಮಸ್ಥರೆಲ್ಲಾ ಹಟ್ಟಿಗೆ ನುಗ್ಗಿ ನಮ್ಮ ಎಣ್ಣಕ್ಳಿಗೆ ದಾರಿತಪ್ಪಿಸ್ತಿದ್ದರು, ಈಗ ಉತ್ತಮಸ್ಥರ ಹುಡ್ಗೀನೇ ದಾರಿತಪ್ಪಿ ಹಟ್ಟಿಗೆ ಬರ್ತಿದಾಳೆ, ಬಿಡಬೇಡ, ನಾವೆಲ್ಲಾ ನಿನ್ನ ಸಾಕಾರಕ್ಕೆ ಇದೀವಿ, ಕರ್ಕೊಂಡೋಗಿ ಮದ್ವೆ ಆಗು'' ಎಂದು ವಿಶ್ವನನ್ನ ಪ್ರೇರೇಪಿಸಿದರು. ವಿಶ್ವ ಗಾಳಿ ತುಂಬಿದ ಬಲೂನಾದ. ಪರೀಕ್ಷೆ ಮುಗಿದನಂತರ ಅವಳ ಮನೆಯ ಹಿಂಬದಿಯಲ್ಲೇ ಪತ್ರ ವ್ಯವಹಾರ ನಡೆಯತೊಡಗಿತು.

ಅದೊಂದು ದಿನ ಮಾಮೂಲಿನಂತೆ ವಿಶ್ವ ಬಂದು ಉಮ್ಮಿಯ ಮನೆಯ ಹಿಂದೆ ನಿಂತ. ಉಮ್ಮಿ ಮಾಳಿಗೆ ಮೇಲಿಂದ ಕಾಗದ ಕೆಳಗೆಸೆದಳು, ಅವನು ತೆಗೆದುಕೊಳ್ಳುವ ಮೊದಲೇ ಅದೆಲ್ಲಿಂದಲೋ ಬಂದ ಕಡ್ಡಿ ಲೋಕ ಅದನ್ನೆತ್ತಿಕೊಂಡ. ಉಮ್ಮಿ ಒಳಗೆ ಓಡಿದಳು. ವಿಶ್ವ ಮೆಲ್ಲನೇ ಜಾರಿಕೊಂಡ.

''ರಾತ್ರಿ ಹತ್ತುಗಂಟೆಗೆ ಸಿದ್ಧನಾಗಿ ಮಾರಿಗುಡಿ ಬಳಿ ಕಾಯುತ್ತಿರು. ಎಲ್ಲಾದರೂ ದೂರ ಓಡಿ ಹೋಗೋಣ'', ಎಂದು ಉಮ್ಮಿ ಬರೆದಿದ್ದ ಕಾಗದ ಓದಿ ಕೋಳಿನಂಜ ಕಿಡಿಕಿಡಿಯಾದ.

ರಾತ್ರಿ ಎಂಟು ಗಂಟೆಗೆ ಹೊರಗಡೆ ಹೋಗುವಂತಾಗಿ ತಿಪ್ಪೆಗಳ ಕಡೆ ಬಂದ ವಿಶ್ವನನ್ನ ಯಾರೋ ಐದಾರು ಜನ ಬಾಯಿ ಮುಚ್ಚಿ ಹೊತ್ತುಕೊಂಡು ಹೋಗಿ, ಕೋಳಿನಂಜನ ಹೊಲದ ಕೆಳಗಿನ ಹಳ್ಳದಲ್ಲಿ ಇಳಿಸಿದರು. ಕೋಳಿನಂಜನ ಜೊತೆ ಐದಾರು ಜನರೂ ಸೇರಿ ವಿಶ್ವನ ಮೈ ಮೇಲಿನ ಬಟ್ಟೆ ಹರಿಯುವ ಹಾಗೆ ಹೊಡೆದರು. ತಡೆಯಲಾರದೆ ವಿಶ್ವ ಕೋಪ ಬಂದು ಚೀರಿದ, ''ನಿಲ್ಲಿಸರಲೇ.'' ಎಲ್ಲರೂ ಹಾಗೇ ನಿಂತರು. ವಿಶ್ವ ಮುಂದುವರಿಸಿದ : ''ಬಡ್ಡೀ ಮಕ್ಕಳಾ, ನಾನೇನೋ ತಪ್ಪು ಮಾಡಿದೆ ? ನಿಮ್ಮ ತಂಗೀನೇ ಮೇಲೆ ಬಿದ್ದು ಬಂದಿದಾಳೆ, ನೀವಾದ್ರೆ ನಮ್ಮ ಹೆಣ್ಣುಮಕ್ಕಳನ್ನ ಕೆಡಿಸಬಹುದು, ನಾವಾದರೆ ನಿಮ್ಮ ಹುಡ್ಗೀರ್ನ ಮುಟ್ಟಬಾರದ ? ನಮ್ಮ ಮಧ್ಯೆ ಏನೂ ಆಗಿಲ್ಲ, ಈಗ ನೀವು ನನ್ನ ಏನು ಬೇಕಾದ್ರೂ ಮಾಡಬಹುದು, ನಾಳೆ ಬೆಳಿಗ್ಗೆ ನಿಮ್ಮ ಮಾನ ಹರಾಜಾಗಿಬಿಡುತ್ತೆ, ಅದೇನು ಮಾಡ್ತೀರೋ ಮಾಡಿರಲೇ.''

ಕೋಳಿನಂಜ ಥಟ್ಟನೇ ಅವನ ಕಾಲು ಹಿಡಿದು ಬೇಡಿದ, ''ತಪ್ಪು ಮಾಡಿದೆವು. ನಮ್ಮ ಮಾನ ಕಾಪಾಡೋ ವಿಶ್ವ.'' ವಿಶ್ವ ಮೌನವಾದ. ಎಲ್ಲರೂ ಕತ್ತಲಲ್ಲಿ ಕರಗಿದರು.

ವಿಷಯ ತಿಳಿದ ಹಟ್ಟಿಯ ಹುಡುಗರೆಲ್ಲಾ ಸೇರಿ ಆಳಿಗೊಂದು ಮಾತನಾಡತೊಡಗಿದಾಗ ಕರಿಯವ್ವ ಹೇಳಿದಳು :

''ನೋಡ್ರಪ್ಪಾ, ನಾವು ಬಲಹೀನರು, ಅವ್ರು ಬಲಿಷ್ಠರು, ಅವರ ಜೊತೆ ನಿಲ್ಲಾಕಾದೀತಾ ? ಏನೂ ಆಗಿಲ್ಲಾಂತ ಸುಮ್ಮನಿದ್ದುಬಿಡಿ.''

ಆಕೆಯ ಮಾತಿಗೆ ಎಲ್ಲರೂ ಮೌನವಾಗಿ ಎದ್ದು ಹೋದರು. ಕರಿಯವ್ವ ಮಗನಿಗೆ ಹೇಳಿದಳು, ''ಬಂಡೆಗೆ ಗುದ್ದಬೇಡ ವಿಶ್ವ, ಮೇಸ್ಟರ ಕೆಲಸದ ಟ್ರೈನಿಂಗ್‌ಗೆ ಹೋಗಿಬಿಡು.'' ವಿಶ್ವ ಅವರ ಮಾತಿಗೆ ಸಮ್ಮತಿಸಿದ.

ಟೀಚರ್ ಟ್ರೇನಿಂಗ್ ಮುಗಿಯುತ್ತಿದ್ದಂತೆ ವಿಶ್ವನಿಗೆ ಪ್ರೈಮರಿ ಶಾಲೆ ಮಾಸ್ಟರಾಗಿ ಆಯ್ಕೆಯಾಯಿತು. ಅವನೆದೆಯಲ್ಲಿ ಆ ನೋವು ಹಾಗೇ ಉಳಿಯಿತು. ಎದೆಯೊಳಗೆ ಉಮ್ಮಿಯನ್ನೇ ತುಂಬಿಕೊಂಡು ವಿಶ್ವ ಕೊಪ್ಪಳ ಸೇರಿದ.

ಹೊಡೆತ ಬಿದ್ದಷ್ಟೂ ಉಮ್ಮಿ ರೊಚ್ಚಿಗೆದ್ದಳು. ಕೋಳಿನಂಜನ ಮೇಲಿನ ಸೇಡಿಗಾಗಿ ಕೆಳಗಿನ ಸ್ವಾಮಿಯ ತೆಕ್ಕೆ ಸೇರಿದಾಗ, ನಂಜ ಎಚ್ಚರಾಗಿ, ದಿಕ್ಕೇ ಅರಿಯದವನಂತೆ ಯಾವಾವುದೋ ದಿಕ್ಕು ಸುತ್ತಿ ಭೂತನಹಳ್ಳಿಯ ಬೂದರಂಗನನ್ನ ಹುಡುಕಿ ಉಮ್ಮಿಯನ್ನ ಅವನಿಗೆ ಕಟ್ಟಿ ಭೂತನಹಳ್ಳಿಗೆ ಓಡಿಸಿದ.

ವಿಶ್ವನೆದೆಯ ನೋವಿನ ಕುದಿತ ಹೆಚ್ಚಾಯಿತು. ''ಅಸಹಾಯಕನಾದ ನಾನು ಏನು ಮಾಡಲು ಸಾಧ್ಯ ? ನನ್ನೊಳಗಿನ ನೋವನ್ನ ನಾನು ಯಾರಲ್ಲಿ ಹೇಳಿಕೊಳ್ಳಲಿ ?''

ವಿಶ್ವ ಥಟ್ಟನೆದ್ದ, ಸರಸರನೆ ಮನೆಗೆ ಬಂದು ಟ್ರಂಕ್‌ನ ತಳದಲ್ಲಿ ಭದ್ರವಾಗಿರಿಸಿದ್ದ ಉಮ್ಮಿಯ ಪ್ರೇಮಪತ್ರಗಳನ್ನೆಲ್ಲಾ ಜೇಬಿಗೆ ತುಂಬಿಕೊಂಡ. ದುಃಖ ಉಕ್ಕಿತು. ಹುಚ್ಚನಂತೆ ರಂಗನ ಬೆಟ್ಟದತ್ತ ನಡೆದ.

ರಂಗನ ದೇವಾಲಯ ನಿಶ್ಶಬ್ದವಾಗಿತ್ತು ಥಟ್ಟನೇ ದೇವರೆದುರು ಕುಸಿದು ಕುಳಿತು ಕೈಮುಗಿದು ಹೇಳಿದ :

''ಅಯ್ಯಾ ದೇವರೇ, ಮುಂದಿನ ಜನ್ಮವಿದ್ದರೆ ನನ್ನನ್ನ ಅಂತ್ಯಜನಾಗಿ ಹುಟ್ಟಿಸಬೇಡ, ಹುಟ್ಟಿಸಿದರೂ, ಎದೆಯಲ್ಲಿ ಪ್ರೇಮ ತುಂಬಬೇಡ, ತುಂಬಿದರೂ ಪ್ರೇಮಿಯಿಂದ ಅಗಲಿಸಿ ನಿರಾಶೆಗೊಳಿಸಬೇಡ.''

ವಿಶ್ವ ಎದ್ದು ನಿಧಾನವಾಗಿ ದೇಗುಲದ ಹಿಂದಿನ ಹೊಂಡದ ಬಳಿ ಬಂದು ಮೆಟ್ಟಿಲ ಮೇಲೆ ಕುಳಿತು ಉಮ್ಮಿ ಬರೆದಿದ್ದ ಪ್ರೇಮ ಪತ್ರಗಳನ್ನ ಒಂದೊಂದಾಗಿ ಕಲ್ಲಿಗೆ ಸುತ್ತಿ ನೀರಿಗೆಸೆದ. ಎಲ್ಲವೂ ನಿಧಾನವಾಗಿ ಹೊಂಡದ ತಳ ಸೇರಿದವು. ದುಃಖದ ಕಟ್ಟೆ ಒಡೆಯಿತು.

ಅವನು ಮೇಲೆದ್ದು ಹೊರಟಾಗ ಸೂರ್ಯ ಬೆಟ್ಟದ ಹಿಂದಕ್ಕೆ ಸರಿಯುತ್ತಿದ್ದ.

ಇನ್ನೆಂದೂ ಈ ಊರಿಗೆ ಬರಲೇಬಾರದೆಂದು ತೀರ್ಮಾನಿಸಿದ ವಿಶ್ವ ಮೆಲ್ಲನೇ ಬೆಟ್ಟ ಇಳಿಯತೊಡಗಿದ.

**ಶಿವಮೂರ್ತಿ ನಂದನ ಹೊಸೂರು**
ಜನತಾ ಕಾಲೋನಿ, ಪೊಲೀಸ್ ಠಾಣೆಯ ಹತ್ತಿರ, ಎಚ್. ಡಿ. ಪುರ
ಹೊಳಲ್ಕೆರೆ ತಾಲೂಕು, ಚಿತ್ರದುರ್ಗ ಜಿಲ್ಲೆ




# ಮುಂಜಾವಿಗೆ ಶುಕ್ರದ ಪಯಣ

**ಕ**ಳೆದ ತಿಂಗಳು ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಶುಕ್ರ, ಈ ತಿಂಗಳ ಆರಂಭದಲ್ಲಿ ಕಾಣೆಯಾದಂತೆ ಅನ್ನಿಸುವುದು. ಸಂಜೆಯ ಕೆಂಪಿನಲ್ಲಿ ಪಶ್ಚಿಮದ ಅಂಚಿನಲ್ಲಿ ಹುಡುಕಿದಲ್ಲಿ ಶುಕ್ರ ಕಾಣಬಹುದು; ಅದಕ್ಕೊಂದು ಸಂಗಾತಿಯೂ ಕಾಣಬಹುದು. ದಿನಗಳೆದಂತೆ ಶುಕ್ರ ದಿಗಂತದ ಅಂಚಿಗೆ ಸರಿಯುತ್ತದೆ. ಆದರ ಸಂಗಾತಿ ಬುಧ ಮಾತ್ರ ಮೇಲೇರುತ್ತದೆ. ಒಟ್ಟಿನಲ್ಲಿ ಸಂಜೆಯ ಆಕಾಶದಲ್ಲಿ ಮೂರು ಗ್ರಹಗಳಂತೂ ಖಚಿತ, ಶನಿ ಮತ್ತು ಮಂಗಳ ಕಳೆದ ತಿಂಗಳೂ ಇದ್ದವೇ. ಶುಕ್ರ ಹೋಯಿತು, ಬುಧ ಬಂದಿತು.

ಜೂನ್ ೬ರಂದು ಶುಕ್ರಗ್ರಸ್ತ ಸೂರ್ಯಗ್ರಹಣ ನಡೆಯಲಿದೆ. ಅಂದರೆ (ಚಂದ್ರನಿಗೆ ಬದಲಾಗಿ) ಶುಕ್ರಗ್ರಹ ಸೂರ್ಯನಿಗೆ ಅಡ್ಡವಾಗಿ ಹಾದು ಹೋಗುವುದು. ಈ ಘಟನೆಯನ್ನು ಸಂಕ್ರಮ ಎಂದು ಕರೆಯಬೇಕೆಂದು ದಿ| ಜಿ. ಟಿ. ನಾರಾಯಣರಾಯರು ಅಭಿಪ್ರಾಯಪಟ್ಟಿದ್ದರು (ನಾನು ಸಂಕ್ರಮಣ ಎಂದು ಬರೆದಿದ್ದೆ).

ಹೀಗೆ ಸಂಜೆಯ ಆಕಾಶದಿಂದ ಮುಂಜಾವಿನ ಆಕಾಶಕ್ಕೆ ಶುಕ್ರ ಪಯಣಿಸುವ ಘಟ್ಟವನ್ನು ಸಾಧಾರಣವಾಗಿ ಯುತಿ ಎಂದು ಹೆಸರಿಸಿದೆ. ಈಗಿನ ಸಂದರ್ಭದಲ್ಲಿ ಇದು ಗ್ರಹಣದಂತೆ ಕಾಣುವುದೇ ವಿಶೇಷ.

ಮುಂಜಾವಿಗೆ ತೆರಳಿದ ಶುಕ್ರ ದಿನೇದಿನೇ ಮೇಲೇರತೊಡಗುತ್ತದೆ. ಜೂನ್ ತಿಂಗಳ ಕೊನೆಗೆ ಗುರುಗ್ರಹದ ಜೊತೆಗೂಡಿ ಪೂರ್ವದಲ್ಲಿ ಕಂಗೊಳಿಸುತ್ತದೆ. ೧೭-೧೮ರ ಅವಧಿಯಲ್ಲಿ ಚಂದ್ರ ಈ ಜೋಡಿಯನ್ನು ಹಾದುಹೋಗುವುದು.

ಉ
ಸಪ್ತರ್ಷಿಮಂಡಲ
ಬುಧ
ಉತ್ತರ ಕಿರೀಟ
ಸಹದೇವ
ಸ್ವಾತಿ
ಪೂ
ಸಿಂಹ
ಪ
ಮಂಗಳ
ಕನ್ಯಾ
ಚಿತ್ರಾ
ಶನಿ
ಹಸ್ತ
ವೃಶ್ಚಿಕ
ಕಿನ್ನರ
ತ್ರಿಶಂಕು
ದ

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳನ್ನು ನಕ್ಷೆಯ ಸಹಾಯದಿಂದ ಗುರುತಿಸಬಹುದು. ನೆತ್ತಿಯಿಂದ ಸ್ವಲ್ಪ ಪಶ್ಚಿಮಕ್ಕೆ ಸರಿದಿರುವುದೇ ಸಿಂಹರಾಶಿ. ಆದರ ಪಕ್ಕದ್ದು ಕನ್ಯಾ. ಮಂಗಳ ಗ್ರಹ ಕನ್ಯಾದತ್ತ ಹೊರಟಿದೆ. ಈ ರಾಶಿಯ ಪ್ರಕಾಶಮಾನ ನಕ್ಷತ್ರ ಚಿತ್ರಾ. ಅದರ ಪಕ್ಕ ಈಗಾಗಲೇ ಶನಿಗ್ರಹ ವಿರಾಜಮಾನವಾಗಿದೆ. ಪೂರ್ವದಲ್ಲಿ ಉದಯಿಸುತ್ತಿರುವುದು ವೃಶ್ಚಿಕರಾಶಿ; ಅದರಲ್ಲಿಯ ಪ್ರಕಾಶಮಾನ ನಕ್ಷತ್ರ ಜ್ಯೇಷ್ಠಾ. ಈ ತಿಂಗಳ ಹುಣ್ಣಿಮೆಯಂದು ಚಂದ್ರ ಈ ನಕ್ಷತ್ರದ ಪಕ್ಕದಲ್ಲಿಯೇ ಕಾಣುತ್ತದೆ. ಆದ್ದರಿಂದ, ಈ ತಿಂಗಳ ಹೆಸರು ಜ್ಯೇಷ್ಠಾ ಎಂದಿದೆ. ಆ ದಿನ (೩ರಂದು) ಚಂದ್ರಗ್ರಹಣವೂ ಇದೆ. ಆದರೆ, ನಮಗೆ ಅದರ ನೋಟ ಲಭ್ಯವಿಲ್ಲ.

ದಕ್ಷಿಣದಲ್ಲಿ ಕಿನ್ನರ (ಸೆಂಟಾರಸ್) ಸ್ಪಷ್ಟವಾಗಿ ಕಾಣುತ್ತದೆ. ಅದರ ಪಕ್ಕ ತ್ರಿಶಂಕು ಅಥವಾ ದಕ್ಷಿಣ ಶಿಲುಬೆ ಇದೆ.


ಜೂನ್ ೩೦ರ ಮುಂಜಾನೆ ಪೂರ್ವದಿಕ್ಕಿನಲ್ಲಿ ಶುಕ್ರ ಮತ್ತು ಗುರು

ಕನ್ಯಾರಾಶಿಯ ದಕ್ಷಿಣಕ್ಕೆ ಕಾಣುವ ಪುಂಜ ಕಾರ್ವಸ್ ಅಥವಾ ಹಸ್ತ. ಉತ್ತರಕ್ಕೆ ಕಾಣುವ ಕೆಂಪು ನಕ್ಷತ್ರ ಸ್ವಾತಿ. ಆ ನಕ್ಷತ್ರಪುಂಜಕ್ಕೆ ಬೂಟೆಸ್ (ಸಹದೇವ) ಎಂಬ ಹೆಸರಿದೆ. ಇನ್ನೂ ಮುಂದಕ್ಕೆ ಪರಿಚಿತ ಸಪ್ತರ್ಷಿಮಂಡಲ ಇದೆ. ಸಹದೇವದ ಪಕ್ಕದಲ್ಲಿ ಕಾಣುವ ಚಿಕ್ಕ ಪುಂಜ ಉತ್ತರ ಕಿರೀಟ (ಕರೋನ ಬೋರಿಯೋಲಿಸ್).

ಜೂನ್ ೨೭ರಂದು ಸಹದೇವದ ದಿಕ್ಕಿನಿಂದ ಹೊರಟಂತೆ ಕಾಣುವ ಉಲ್ಕಾವೃಷ್ಟಿ ಗರಿಷ್ಠ ಮುಟ್ಟಲಿದೆ. ಇದಕ್ಕೆ ಬೂಟೆಡ್ಸ್ ಎಂದೇ ಹೆಸರು. ೧೯೮ರಲ್ಲಿ ಇದನ್ನು ಮೊದಲ ಬಾರಿಗೆ ಗುರುತಿಸಿದರು. ಗಂಟೆಗೆ ೧೦೦ ಉಲ್ಕೆಗಳು ಕಂಡಿದ್ದವು. ಆ ಮುಂದಿನ ವರ್ಷಗಳಲ್ಲಿ ಅಷ್ಟೇನೂ ಚಟುವಟಿಕೆ ಇರಲಿಲ್ಲ. ೨೦೦೪ರಲ್ಲಿ ಪುನಃ ವೃಷ್ಟಿ ಉಂಟಾಗಿತ್ತು.

ಈ ತಿಂಗಳ ೨೧ರಂದು ಭೂಮಿ ತನ್ನ ಕಕ್ಷೆಯಲ್ಲಿ ಮುಖ್ಯ ಹಂತವೊಂದನ್ನು ತಲುಪಲಿದೆ. ಅದೇ ದಕ್ಷಿಣಾಯನ.

**ಖಗೋಳ ದಿನಚರಿ**

೧ ಚಂದ್ರ-ಶನಿ ಜೋಡಿ
ಬುಧ-ಶುಕ್ರ ಜೋಡಿ
೩ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ
೪ ಹುಣ್ಣಿಮೆ ೧೬:೪೨ಕ್ಕೆ (ಚಂದ್ರಗ್ರಹಣ ನಮಗೆ ಕಾಣುವುದಿಲ್ಲ)
೬ ಶುಕ್ರಗ್ರಸ್ತ ಸೂರ್ಯಗ್ರಹಣ
೧೧ ಚಾಂದ್ರಮಾಸದ ಕೊನೆಯ ಪಾದ
೧೬ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ
೧೭ ಗುರು-ಚಂದ್ರ ಜೋಡಿ (ಆಚ್ಛಾದನೆ ನಮಗೆ ಕಾಣುವುದಿಲ್ಲ)
೧೮ ಶುಕ್ರ-ಚಂದ್ರ ಜೋಡಿ
೧೯ ಅಮಾವಾಸ್ಯೆ ೨೦:೩೨ಕ್ಕೆ
೨೧ ದಕ್ಷಿಣಾಯನ ೦೪:೩೯ಕ್ಕೆ
ಬುಧ-ಚಂದ್ರ ಜೋಡಿ
೨೭ ಚಾಂದ್ರಮಾಸದ ಮೊದಲ ಪಾದ
ಶುಕ್ರದ ಹಿನ್ನಡೆ ಮುಕ್ತಾಯ
೨೮ ಚಂದ್ರನ ಪಕ್ಕ ಶನಿ
ಜುಲೈ ೧ ಬುಧ ಗ್ರಹದ ಗರಿಷ್ಠ ಕೋನೋನ್ನತಿ

ಕಳೆದ ತಿಂಗಳು ಹುಣ್ಣಿಮೆ ಮತ್ತು ಪುರಭೂ ಅಮೆರಿಕಕ್ಕೆ ಅನುಕೂಲಕರವಾಗಿತ್ತು. ನಮಗೆ ಬೆಳಗಿನ ೯:೦೦ ಗಂಟೆ. ಆದರೆ ೧೨ ಗಂಟೆಗಳ ಅಂತರದಲ್ಲಿ ಬೆಳಕು ಅಥವಾ ಗಾತ್ರದ ವ್ಯತ್ಯಾಸ ಅಷ್ಟೇನೂ ಹೆಚ್ಚುವುದಿಲ್ಲ. ಹುಣ್ಣಿಮೆಯ ಘಳಿಗೆಯಲ್ಲಿಯೇ ಚಂದ್ರ ಭೂಮಿಗೆ ಹತ್ತಿರವಾಗಿ ಇದ್ದದ್ದನ್ನು ಅಲ್ಲಿಯ ಮಾಧ್ಯಮಗಳು ಸೂಪರ್‌ಮೂನ್ ಎಂದು ಬಣ್ಣಿಸಿದ್ದರಿಂದ ಅದು ಬಹಳ ದೊಡ್ಡ ಸುದ್ದಿಯಾಯಿತು. ಇಲ್ಲಿಯೂ ಅದು ಪ್ರಚಾರ ಪಡೆಯಿತು. ಅನೇಕರು ಹುಣ್ಣಿಮೆಯ ಚಂದ್ರನನ್ನು ಬಹುಶಃ ಮೊದಲ ಬಾರಿಗೆ ಗಮನಿಸಿ ನೋಡಿದರು. ಆದರೆ ಬರಿಗಣ್ಣಿಗೆ ವ್ಯತ್ಯಾಸ ತಿಳಿಯಿತೇ ? ಈ ತಿಂಗಳಲ್ಲಿ ಚಂದ್ರ ಪುರಭೂ ಬಿಂದುವನ್ನು ತಲುಪಿದ ೨೨ ಗಂಟೆಯಲ್ಲಿ ಹುಣ್ಣಿಮೆಯಾಗುತ್ತಿದೆ. ಈ ತಿಂಗಳ ೩ ಮತ್ತು ೪ರಂದು ಚಂದ್ರನನ್ನು ನೋಡಿ. ಕಳೆದ ತಿಂಗಳ ಸೂಪರ್‌ಮೂನ್‌ಗೂ ಇದಕ್ಕೂ ಏನಾದರೂ ಸಾಮ್ಯ/ವ್ಯತ್ಯಾಸವಿದೆಯೇ ಎಂದು ಗುರುತಿಸಿ.

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

ಎಸ್. ನಟರಾಜ ಬೂದಾಳು

# ಅಲ್ಲಮಪ್ರಭು ಮತ್ತು ಅಶ್ವಘೋಷ

## ಎಲ್. ಬಸವರಾಜು ಅನುಸಂಧಾನ



**ಎಲ್. ಬಸವರಾಜು ಅವರು ಅಶ್ವಘೋಷನ ಬುದ್ಧ ಚರಿತೆ ಮತ್ತು ಸೌಂದರನಂದ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಕನ್ನಡದಲ್ಲಿ ದೊರಕುವ ಬೌದ್ಧ ಧಾರ್ಮಿಕ ಮತ್ತು ತಾತ್ವಿಕ ಪಠ್ಯಗಳ ಅವಲೋಕನ, ಅನೇಕ ಪ್ರಮುಖ ಸಂಗತಿಗಳನ್ನು ಅನಾವರಣ ಮಾಡುತ್ತದೆ. ಸಾಮಾನ್ಯವಾಗಿ ಸಮುದಾಯಗಳು ತಾತ್ವಿಕಪಠ್ಯಗಳನ್ನು ಆಯ್ಕೆಮಾಡಿಕೊಂಡರೆ ಧಾರ್ಮಿಕ ಸಂಸ್ಥೆಗಳು ಪಾಂಥಿಕ ಪಠ್ಯಗಳನ್ನು ಮುಂದಿಡುತ್ತವೆ. ಆದುದರಿಂದ ದರ್ಶನವೊಂದರ ಪೂರ್ಣಪಠ್ಯಕ್ಕಾಗಿ ಧಾರ್ಮಿಕ ಸಂಸ್ಥೆಗಳು ಮುಂದಿಡುವ ಪಠ್ಯಗಳನ್ನು ಅವಲಂಬಿಸುವಾಗ ಎಚ್ಚರಿಕೆಯಿಂದಿರಬೇಕಾಗುತ್ತದೆ. ಸದ್ಯದ ಸಂದರ್ಭದಲ್ಲಿ ಧಾರ್ಮಿಕ ಆವರಣವನ್ನು ಪ್ರವೇಶಿಸುವುದೆಂದರೆ ನೇರವಾಗಿ ರಣರಂಗವನ್ನು ಹೊಕ್ಕಂತೆಯೇ ಆಗುತ್ತದೆ.**

''ಪ್ರಭುದೇವರು ತಮ್ಮ ವಚನ ಹಾಗೂ ಸ್ವರ ವಚನಗಳ ಸಂಪಾದನಾ ಕಾರ್ಯವನ್ನು ಈ ಅಲ್ಲಮನ ವಚನ ಚಂದ್ರಿಕೆಯ ಮೂಲಕ ಅರ್ಧಶತಮಾನದ ಹಿಂದೆ ನನ್ನಿಂದ ಮಾಡಿಸಿಕೊಂಡರು'' – ಇದು ಅಲ್ಲಮನ ವಚನ ಚಂದ್ರಿಕೆಯ ಮೂರನೆಯ ಆವೃತ್ತಿಗೆ ಡಾ|| ಎಲ್. ಬಸವರಾಜು ಅವರು ನುಡಿದ ಮಾತು. ಈ ನಿರಸನ ಮತ್ತು ವಿನಯವನ್ನು ಅವರು ನಿರಂತರವಾಗಿ ಉಳಿಸಿಕೊಂಡು ಬಂದಿದ್ದಾರೆ. ಅವರು ಕನ್ನಡದ ಜನಸಮೂಹಕ್ಕೆ ಕೊಟ್ಟ ಅಲ್ಲಮನ ವಚನ ಚಂದ್ರಿಕೆ, ಅಶ್ವಘೋಷನ ಬುದ್ಧಚರಿತೆ ಹಾಗೂ ಸೌಂದರನಂದ ಕೃತಿಗಳು ಕೇವಲ ಅನುವಾದ, ಸಂಪಾದನೆಗಳಲ್ಲ, ಅವು ಕನ್ನಡದ ತಿಳುವಳಿಕೆಯನ್ನು ವಿಶ್ವಾತ್ಮಕಗೊಳಿಸುವ ಗಂಭೀರ ಪ್ರಯತ್ನಗಳಾಗಿವೆ. ಅವರ ಅಲ್ಲಮನ ವಚನ ಚಂದ್ರಿಕೆಯು 'ಯಾವ ಕ್ರಮವಿಡಿದ ಸಂಪಾದನೆ ?' – ಎಂಬ ಪ್ರಶ್ನೆಗೆ ಉತ್ತರವನ್ನು ಅವರೇ ಕೊಟ್ಟಿದ್ದಾರೆ. ಬೆಡಗಿನ ವಚನಗಳ ಅರ್ಥನಿರ್ಣಯ, ಅಲ್ಲಮ ಪರಂಪರೆಯ ನಿರ್ಣಯ, ಅಲ್ಲಮನ ವಚನಗಳ ಆಕರ ಮೂಲಗಳು, ಅಲ್ಲಮನ ಚಾರಿತ್ರಿಕ ಆವರಣ – ಇವಿಷ್ಟು ವಚನ ಚಂದ್ರಿಕೆಯ ಕಟ್ಟೋಣಕ್ಕೆ ಅವರು ಆರಿಸಿ ಕೊಂಡಿರುವ ಸಾಮಗ್ರಿ. ಕನ್ನಡದಲ್ಲಿ ಅಲ್ಲಮನ ಅನುಸಂಧಾನ ಕಠಿಣ ಎಂಬ ಎಚ್ಚರ ಸಾಧಕ ಸಮೂಹಕ್ಕೂ ಇದೆ, ಬೌದ್ಧಿಕ ಸಮೂಹಕ್ಕೂ ಇದೆ. ಆದರೂ ಅಲ್ಲಮನ ಅನುಸಂಧಾನದ ಸಂಭ್ರಮ ಮತ್ತು ಆಕರ್ಷಣೆ ಎರಡು ಸಮೂಹಗಳಿಗೂ ನಿರಂತರವಾಗಿ ಇದ್ದೇ ಇದೆ. ಅಲ್ಲಮ ಎನ್ನುವ ಹೆಸರನ್ನು ಕುರಿತು, ಅದು ಸೂಚಿಸುವ ಅನೇಕ ದರ್ಶನ ಪರಂಪರೆಗಳನ್ನು ಕುರಿತು ಶಂ. ಬಾ. ಜೋಶಿ, ಕಪಟರಾಳ ಕೃಷ್ಣರಾಯ, ರಹಮತ್ ತರೀಕೆರೆ, ಮುಂತಾಗಿ ಅನೇಕ ವಿದ್ವಾಂಸರು ಗಂಭೀರ ಚರ್ಚೆಗಳನ್ನು ಮಾಡಿದ್ದಾರೆ. ಡಿ. ಆರ್. ನಾಗರಾಜ ಅಲ್ಲಮನನ್ನು ಮತ್ತೊಂದು ದಿಕ್ಕಿನಿಂದ ನೋಡುವ 'ಆಕರ್ಷಕ' ನೋಟವನ್ನು ಅವರ 'ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ'ಯಲ್ಲಿ ನೀಡಿದ್ದಾರೆ.

ಅಲ್ಲಮಮಾರ್ಗದ ಬಗೆಗೆ ಎಲ್. ಬಸವರಾಜು ಅವರ ಕೆಲವು ನಿಲುವುಗಳನ್ನು ಕುರಿತು ಚರ್ಚಿಸಬಹುದು. ಮೊದಲನೆಯದಾಗಿ ಎಲ್. ಬಿ. ಅವರೇ ಹೇಳುವಂತೆ, ''ಬಸವೇಶ್ವರನು ತನ್ನ ಪ್ರಭಾವಕ್ಕೊಳಗಾದ ಜನರ ಮನದಲ್ಲಿ ಭಕ್ತಿಯನ್ನು ಅರಳಿಸುವ ಜ್ಯೋತಿಸ್ವರೂಪವಾದ ಮೂಲ ವಿಗ್ರಹ. ಅಲ್ಲಮಪ್ರಭುದೇವನು ಆ ಭಕ್ತಿಗೆ ಪ್ರೇರಕವೂ ಪೂರಕವೂ ಆದ ಜ್ಞಾನವನ್ನು ದೇಶ ದೇಶಗಳಲ್ಲಿ ಪ್ರಸರಿಸಲು ಇರುವ ಉತ್ಸವ ಮೂರ್ತಿ.'' ವೀರಶೈವ 'ವಿಚಾರದಲ್ಲಿ' ಅಲ್ಲಮನನ್ನೂ ಒಳಗೊಂಡಂತೆ ನೂರಾರು ಶರಣರಿದ್ದಾರೆ. ಆದರೆ ವೀರಶೈವ ಆಚಾರದಲ್ಲಿ ಇರುವ ಶರಣರೆಂದರೆ ಸಿದ್ಧರಾಮ, ಚೆನ್ನಬಸವಣ್ಣ ಮತ್ತು ಬಸವಣ್ಣ ಮಾತ್ರ. ಅಲ್ಲಮನಂತೂ ಇಲ್ಲ. ಎಲ್. ಬಿ. ಅವರಿಗೆ ಬಸವನೇ ಕೇಂದ್ರ ಮತ್ತು ಮೂಲಮೂರ್ತಿ. ಅಲ್ಲಮನ ಸ್ಥಾನ ಉತ್ಸವ ಮೂರ್ತಿಗಿಂತ ಹೆಚ್ಚಿಲ್ಲ. ಇನ್ನು ಅಲ್ಲಮನನ್ನು ಅಲ್ಲಮನಾಥನೆಂದೋ, ಮಂಟೇಸ್ವಾಮಿಯೆಂದೋ, ಷಾ ಆಲಂಪ್ರಭು ಎಂದೋ ನೋಡುವುದಿರಲಿ, ಆ ಬಗೆಗೆ ಮಾತನಾಡಲೂ ಎಲ್. ಬಿ. ಸಿದ್ಧರಿಲ್ಲ. ನಾಥಪಂಥದ ಸಂಬಂಧವನ್ನು ಖಡಾಖಂಡಿತವಾಗಿ ನಿರಾಕರಿಸುವ ಎಲ್. ಬಿ., ''ಮತ್ಸ್ಯೇಂದ್ರನೇ ಅನಿಮಿಷಯ್ಯನೆಂಬುದಂತೂ ಬಾಲಭಾಷೆ'' ಎನ್ನುತ್ತಾರೆ. ಈ ಸಿಟ್ಟಿನ ಹಿಂದೆ ಯಾವ ಸಮರ್ಥನೆಗಳೂ ಕಾಣಿಸುವುದಿಲ್ಲ.

ಬಹಳ ದೀರ್ಘ ಕಾಲದಿಂದ - ಸಿಂಗಳದ ಸಿದ್ಧ ಬಸವರಾಜ ದೇವರಿಂದ ಹಿಡಿದು ಇಮ್ಮಡಿ ಸಿದ್ದೇಶ್ವರ ಸ್ವಾಮಿಯವರವರೆಗೆ ವಚನ ವ್ಯಾಖ್ಯಾನದ ಉದ್ಯೋಗ ನಡೆದಿದೆ. ಈವರೆಗೆ ಸಮಗ್ರ ವಚನ ತಾತ್ವಿಕತೆಯನ್ನು ಕಾಶ್ಮೀರ ಶೈವದ ಮೂಲಕವೋ, ತಮಿಳಿನ ಶೈವ ಸಿದ್ಧಾಂತದ ಮೂಲಕವೋ ನೋಡಿ ಕಂಡದ್ದನ್ನು ಹೇಳುತ್ತಿದ್ದೇವೆಯೇ ಹೊರತು ನಾಥಪಂಥದ ಮೂಲಕವಾಗಲೀ, ಸಿದ್ಧಪಂಥಗಳ ಮೂಲಕವಾಗಲೀ, ಬೌದ್ಧ ತಾತ್ವಿಕತೆಯ ಮೂಲಕವಾಗಲೀ ನೋಡುವ ಪ್ರಯತ್ನಗಳಾಗಿಲ್ಲ. ಇವೆಲ್ಲ ಹೊರಗಿನಿಂದ ತಂದು ಅನ್ವಯಿಸಿಕೊಳ್ಳಬೇಕಾದ ತಾತ್ವಿಕ ಆಕರಗಳಲ್ಲ. ಬದಲಿಗೆ ವಚನ ತಾತ್ವಿಕತೆಯು ಇವುಗಳ ಒಡನಾಟದಲ್ಲಿ, ಕೊಡು ಕೊಳುಗೆಯಲ್ಲಿ ರೂಪುಗೊಂಡದ್ದು. ಉದಾಹರಣೆಗೆ ಬುದ್ಧಚರಿತೆ, ಮತ್ತು ಸೌಂದರನಂದದ ಉದ್ದಕ್ಕೂ ಎಲ್. ಬಿ. ಅವರಿಗೆ ಸಮಾನ ತಾತ್ವಿಕತೆಯ ನೂರಾರು ವಚನಗಳು ನೆನಪಿಗೆ ಬಂದು ಅವುಗಳನ್ನು ಅಡಿ ಟಿಪ್ಪಣಿಗಳಲ್ಲಿ ಕೊಡುತ್ತಾ ಹೋಗುತ್ತಾರೆ. ಆದರೆ ವಚನ ಸಂಗ್ರಹಗಳಲ್ಲಿ, ವಚನ ವ್ಯಾಖ್ಯಾನಗಳಲ್ಲಿ ತಪ್ಪಿಯೂ ಬೌದ್ಧ ತಾತ್ವಿಕತೆಯ ಕಾರಿಕೆಗಳಾಗಲೀ, ಸುತ್ತಗಳಾಗಲೀ ನೆನಪಾಗುವುದಿಲ್ಲ. ನಮ್ಮ ಸಂಕಥನ ಕ್ರಮದಲ್ಲಿಯೇ ಇಂತಹ ಅನೇಕ ಮುಚ್ಚಿದ ಬಾಗಿಲುಗಳಿರುವುದರಿಂದ ಹೀಗಾಗುತ್ತಿರಬಹುದು.

''ಶರಣರ ವಚನ ಸಾಹಿತ್ಯಕ್ಕೆ ಸಂಸ್ಕೃತದಲ್ಲಿರುವ ಸ್ತೋತ್ರ-ಗದ್ಯ ಸಾಹಿತ್ಯವೇ ಮೂಲಕವೂ ಪ್ರೇರಕವೂ ಆಗಿರಬಹುದು'' ಎನ್ನುವ ಎಲ್. ಬಿ. ಅವರ ನಿಲುವಿನ ಬಗೆಗೆ ಈಗಾಗಲೇ ಸಾಕಷ್ಟು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ವಚನ ಸಂಗ್ರಹದ ಒಂದು ಮುಖ್ಯ ಕ್ರಮವಾದ ಶೂನ್ಯಸಂಪಾದನೆಗಳ ಸಂವಾದ ರೂಪಕ್ಕೂ ಸ್ತೋತ್ರರೂಪಕ್ಕೂ ಇರುವ ಅಪಾರ ವ್ಯತ್ಯಾಸ

ವೈರುಧ್ಯಗಳನ್ನು ಕಡೆಗಣಿಸಲಾಗದು. ತ್ರಿಪಿಟಕಗಳ ಮಾದರಿಯಾದ 'ವಾರ್ತಿಕ' ಕ್ರಮಕ್ಕೆ ಹತ್ತಿರವಾದುದು ಶೂನ್ಯ ಸಂಪಾದನೆಯ ಕ್ರಮ. ಅಂದರೆ ತಾತ್ವಿಕತೆಯನ್ನು ಮುಂದಿಡುವಾಗ ಕೇಳಿದ ಪ್ರಶ್ನೆ, ಅದಕ್ಕೆ ಮಾತ್ರ ಹೇಳಿದ ಉತ್ತರ, ಈ ಸಂಬಂಧವಾಗಿ ಹೇಳದೆ ಬಿಟ್ಟಿರುವ ಸಂಗತಿ, ಮತ್ತು ಈ ಬಗೆಗೆ ಇತರರ ಅಭಿಪ್ರಾಯಗಳಿಗೆ ಪ್ರತಿಕ್ರಿಯೆ - ಇಷ್ಟೂ ಸೇರಿದ 'ವಾರ್ತಿಕ' ಮಾದರಿಯ ವಚನ ನಿರೂಪಣೆಯನ್ನು ನಿರಾಕರಿಸಿ ಏಕಾಕಿ ನಿರೂಪಣೆಯ ಸ್ತೋತ್ರಮಾರ್ಗವನ್ನು ಎಲ್. ಬಿ. ಸಮರ್ಥಿಸುತ್ತಾರೆ.

ಬೆಡಗಿನ ವಚನಗಳನ್ನು ಕುರಿತಂತೆ ಅನೇಕ ಅಭಿಪ್ರಾಯಗಳು ವ್ಯಕ್ತವಾಗಿವೆ. ಎಲ್. ಬಿ. ವ್ಯಕ್ತಪಡಿಸುವ ನಿಲುವು ಪ್ರಮುಖವಾದುದು. ಅವರು, ''ಬೆಡಗಿನ ವಚನಗಳ ಅಂತರಾರ್ಥವು ಅಥವಾ ಆ ಸಾಂಕೇತಿಕ ಪದಗಳಿಗೆ ಇರುವ ಪ್ರತ್ಯೇಕವಾದ ನಿಯತಾರ್ಥವು ಆಕಸ್ಮಿಕ ವಾದುದಲ್ಲ, ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಯಿಸುವ ಸ್ವಚ್ಛಂದ ರೀತಿಯದ್ದಲ್ಲ. ಈ ಬೆಡಗಿನ ಸಂಪ್ರದಾಯವು ಅನೂಚಾನ ವಾದುದು'' ಎನ್ನುತ್ತಾರೆ. ಬೆಡಗಿನ ಬಳಕೆಯ ಉದ್ದೇಶವನ್ನು ಕುರಿತಂತೆ ''ಅದು ಒಂದು ತಂತ್ರ - ಕುತೂಹಲವನ್ನು ಕೆರಳಿಸಲು ಅದ್ಭುತವನ್ನು, ವಿರೋಧಾಭಾಸವನ್ನು, ಅರ್ಥಾಂತರತೆಯನ್ನು ಅನುಸರಿಸುವುದು ಮಾನವನ ಸಂಸ್ಕೃತಿ ಮತ್ತು ಎರಡನೆಯದಾಗಿ ವಿಷಯವನ್ನು ಗೌಪ್ಯ ವಾಗಿಟ್ಟು, ಅಧಿಕಾರಿಯಾದವನಿಗೆ ಮಾತ್ರ ತಿಳಿಯಬೇಕು'' ಎನ್ನುತ್ತಾರೆ. ಕೇಳುವವರ ಕುತೂಹಲ ಕೆರಳಿಸುವ ಪಾರಂಪರಿಕ ತಂತ್ರವಾಗಿಯೋ ಅಥವಾ ಅದನ್ನು ಪಡೆಯುವ ಅಧಿಕಾರವುಳ್ಳ ಸಾಧಕನಿಗೆ ಮಾತ್ರ ದಕ್ಕಲಿ ಎಂದೋ ಬೆಡಗನ್ನು ಬಳಸುತ್ತಾರೆ ಎನ್ನುವ ಮಾತನ್ನು ನಿರಾಕರಿಸಲಾಗದು. ಆದರೆ ಬೆಡಗಿನ ಕ್ರಮದಲ್ಲಿ ಸಾಮಾನ್ಯವಾಗಿ ಕಾಣಬರುವ ಅವಳಿ ವೈರುಧ್ಯಗಳನ್ನು ಎದುರುಬದುರಾಗಿಸಿ ಅವುಗಳನ್ನು ದಾಟಿಸುವ ಕ್ರಮ, ಸ್ಥಿತಗೊಂಡ ಸಂಬಂಧಗಳನ್ನು, ಕುರುಹುಗಳನ್ನು ಮುರಿದು, ಕಲಸಿ ಅವು ಮತ್ತೆ ಚಲಿಸುವಂತೆ ಮಾಡಲು ಅವುಗಳ ಮೇಲೆ ಪ್ರಹರಿಸುವ ಕ್ರಮ ಮತ್ತು ನಿಸ್ತೇಜಗೊಂಡ ಭಾಷೆಗೆ ಅದರ ಜಾಡು ತಪ್ಪಿಸಿ ಇನ್ನೊಂದು ದಾರಿ ಹಿಡಿದು ಮುನ್ನಡೆಯುವ ಶಕ್ತಿಯನ್ನು ಅದಕ್ಕೆ ಒದಗಿಸಿಕೊಳ್ಳುವ ಪ್ರಯತ್ನಗಳಾಗಿ ಕೂಡ ಬೆಡಗನ್ನು ಕಾಣಲು ಸಾಧ್ಯವಿದೆ.

ವೀರಶೈವ ಪುರಾಣಗಳನ್ನಾಧರಿಸಿ ಅಲ್ಲಮನನ್ನು ಅರ್ಥೈಸಿಕೊಳ್ಳುವ ವಿಧಾನವನ್ನು ಎಲ್. ಬಿ. ಅನುಸರಿಸಿದ್ದಾರೆ. ಮಹಲಿಂಗನ ಏಕೋತ್ತರ ಶತಸ್ಥಲ, ಸಿಂಗಳದ ಸಿದ್ಧಬಸವರಾಜದೇವರ 'ಎಲ್ಲ ಪುರಾತನರ ಬೆಡಗಿನ ವಚನಗಳು' ಮತ್ತು ಕಲ್ಲುಮಠದ ಪ್ರಭುದೇವರ 'ಲಿಂಗಲೀಲಾ ಲಾಸ ಚಾರಿತ್ರ' – ಈ ಕೃತಿಗಳನ್ನಾಧರಿಸಿದ, ಪ್ರಧಾನವಾಗಿ ವೀರಶೈವ ಆಚಾರ ಮತ್ತು ಶಿವಾದ್ವೈತವನ್ನೇ ನೆಮ್ಮಿದ ಷಟ್‌ಸ್ಥಲವಾದಿ ನಿಲುವು. ಇಂತಹ ಏಕಾಕಿ ನಿಲುವಿಗೆ ಅಲ್ಲಮ ಗಂಭೀರ ತೊಡಕುಗಳನ್ನು ಮುಂದಿಡು ತ್ತಾನೆ. ಹಾಗಾಗಿಯೇ ಡಿ. ಆರ್. ನಾಗರಾಜ ಅಲ್ಲಮನ ಪ್ರತಿಭಾಧೈರ್ಯದ ಮೂಲವಿರುವುದು ಬೌದ್ಧ ಪ್ರತೀತ್ಯ ಸಮುತ್ಪಾದತತ್ತ್ವದಲ್ಲಿ ಎನ್ನುತ್ತಾರೆ. ಅಲ್ಲಮ ತಾನು, ''ಯಾರ ಮಗನೂ ಅಲ್ಲ, ಯಾರ ಶಿಷ್ಯನೂ ಅಲ್ಲ'' ಎಂಬ ದೇವನಾಂಪ್ರಿಯ ನಿಲುವಿನ 'ಪ್ರತ್ಯೇಕ ಬುದ್ಧ.' ಪ್ರತ್ಯೇಕ ಬುದ್ಧರಿಗೆ ಯಾವ ಗುರುವಿನ ಹಂಗೂ ಇರುವುದಿಲ್ಲ, ಯಾವ ದರ್ಶನ ಮಾರ್ಗದ ಹಂಗೂ ಇರುವುದಿಲ್ಲ. ಹೀಗೆಂದು ಅಲ್ಲಮನನ್ನು ಕಂಡರಿಸಿದ ಚಾಮರಸ ಮತ್ತು ಎಳಂದೂರ ಹರೀಶ್ವರರನ್ನು ಎಲ್. ಬಿ. ''ತಮಗಿಷ್ಟ ಬಂದಂತೆ ಶರಣರ ಕಥೆಗಳನ್ನು ಅಸ್ತವ್ಯಸ್ತ ಮಾಡಿರುವುದರಿಂದ ಖಂಡನೀಯರು ಮತ್ತು ಅನನುಕರಣೀಯರು'' ಎನ್ನುತ್ತಾರೆ. ಅಲ್ಲಮ ಮಾರ್ಗವೇ ಹರಿವ ನದಿಗೆ ಮೈಯೆಲ್ಲಾ ಕಾಲು ಎನ್ನುವಂಥದ್ದು. ದ್ವೈತಾದ್ವೈತಗಳನ್ನು ದಾಟಿದ ಅನೇಕಗಳು ಅನೇಕಗಳಾಗುವ ಈ ಮಾರ್ಗವನ್ನು ನಡೆಯುವ ಎಲ್ಲರ ಜೊತೆಗೂ ಅಲ್ಲಮ ಬರುತ್ತಾನೆ. ಎಲ್. ಬಿ. ಕೂಡ ಅಂತಹ ಒಬ್ಬ ಅಲ್ಲಮ ಮಾರ್ಗಿ.

-೨-

ಎಲ್. ಬಸವರಾಜು ಅವರು ಅಶ್ವಘೋಷನ ಬುದ್ಧ ಚರಿತೆ ಮತ್ತು ಸೌಂದರನಂದ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಕನ್ನಡದಲ್ಲಿ ದೊರಕುವ ಬೌದ್ಧ ಧಾರ್ಮಿಕ ಮತ್ತು ತಾತ್ವಿಕ ಪಠ್ಯಗಳ ಅವಲೋಕನ, ಅನೇಕ ಪ್ರಮುಖ ಸಂಗತಿಗಳನ್ನು ಅನಾವರಣ ಮಾಡುತ್ತದೆ. ಸಾಮಾನ್ಯವಾಗಿ ಸಮುದಾಯಗಳು ತಾತ್ವಿಕ ಪಠ್ಯಗಳನ್ನು ಆಯ್ಕೆಮಾಡಿ ಕೊಂಡರೆ ಧಾರ್ಮಿಕ ಸಂಸ್ಥೆಗಳು ಪಾಂಥಿಕ ಪಠ್ಯಗಳನ್ನು ಮುಂದಿಡುತ್ತವೆ. ಆದುದರಿಂದ ದರ್ಶನವೊಂದರ ಪೂರ್ಣ ಪಠ್ಯಕ್ಕಾಗಿ ಧಾರ್ಮಿಕ ಸಂಸ್ಥೆಗಳು ಮುಂದಿಡುವ ಪಠ್ಯ ಗಳನ್ನು ಅವಲಂಬಿಸುವಾಗ ಎಚ್ಚರಿಕೆಯಿಂದಿರಬೇಕಾಗುತ್ತದೆ. ಸದ್ಯದ ಸಂದರ್ಭದಲ್ಲಿ ಧಾರ್ಮಿಕ ಆವರಣವನ್ನು ಪ್ರವೇಶಿಸುವುದೆಂದರೆ ನೇರವಾಗಿ ರಣರಂಗ ವನ್ನು ಹೊಕ್ಕಂತೆಯೇ ಆಗುತ್ತದೆ.




ಕನ್ನಡದಲ್ಲಿ ಬೌದ್ಧ ಸಾಹಿತ್ಯದ ಪ್ರಕಟಣೆ ೧೯೦೭ ರಿಂದಲೇ ಪ್ರಾರಂಭ ವಾಗಿದೆ. ಬಿದರೆ ಅಶ್ವಥ ನಾರಾಯಣ ಅವರ ಬೌದ್ಧಾವತಾರ, ಧಮ್ಮಪದ, ಬುದ್ಧಗೀತೆ, ಜಾತಕ ಕತೆ ಗಳಿಂದ ಪ್ರಾರಂಭವಾಗಿ, ಎಂ. ಗೋವಿಂದ ಪೈ ಅವರ ಸಿಗಾಲಸುತ್ತ, ಧಮ್ಮಪದ, ಎಂ.ಆರ್.ಶ್ರೀ., ಸಾಲಿ ರಾಮಚಂದ್ರರಾಯರ ಜಾತಕ ಕತೆಗಳು, ಎಸ್. ನರಸಿಂಹ ಶಾಸ್ತ್ರಿಗಳ ಬುದ್ಧ ಗೀತಾವಳಿ, ಜಿ. ಪಿ. ರಾಜರತ್ನಂ ಅವರ ಚೀನಾದೇಶದ ಬೌದ್ಧ ಯಾತ್ರಿಕರು, ಬೌದ್ಧ ಧರ್ಮದ ಇತಿಹಾಸ, ಕಡವ ಶಂಭುಶರ್ಮ, ಎಸ್. ವಿ. ಪರಮೇಶ್ವರ ಭಟ್ಟ ಮತ್ತು ಎಲ್. ಬಸವರಾಜು ಅವರು ಬೇರೆ ಬೇರೆಯಾಗಿ ಕನ್ನಡಕ್ಕೆ ತಂದ ಸೌಂದರನಂದ, ಬುದ್ಧ ಚರಿತೆಗಳು ಮತ್ತು ಈ ಲೇಖನದ ಲೇಖಕ ಕನ್ನಡಕ್ಕೆ ತಂದ ನಾಗಾರ್ಜುನನ ಮೂಲಮಧ್ಯಮಕಕಾರಿಕಾ ಇತ್ಯಾದಿ ಕೃತಿಗಳು ಕನ್ನಡಕ್ಕೆ ಬಂದಿವೆ. ಮೂಲಮಧ್ಯಮಕಕಾರಿಕಾ, ಜಾತಕ ಕತೆಗಳು ಮತ್ತು ಧಮ್ಮಪದ ಹಾಗೂ ಸುತ್ತಗಳ ಹೊರತಾಗಿ ಉಳಿದವೆಲ್ಲ ಸರ್ವಾಸ್ತಿವಾದದ ಪಠ್ಯಗಳೇ ಆಗಿರುವುದು ಆಕಸ್ಮಿಕವಲ್ಲ. ಬೌದ್ಧ ಧರ್ಮದಲ್ಲಿ ನಾಲ್ಕು ಪ್ರಸ್ಥಾನಗಳಿವೆ. ಸರ್ವಾಸ್ತಿವಾದ, ಸೌತ್ರಾಂತಿಕವಾದ, ವಿಜ್ಞಾನವಾದ ಮತ್ತು ಶೂನ್ಯವಾದ ಅಥವಾ ಮಧ್ಯಮ ಮಾರ್ಗ. ಮೊದಲಿನ ಎರಡನ್ನು ಹೀನಯಾನವೆಂದೂ ಕೊನೆಯ ಎರಡನ್ನು ಮಹಾಯಾನವೆಂದೂ ವರ್ಗೀಕರಿಸುತ್ತಾರೆ. ನಮ್ಮ ಎದುರಿಗಿರುವ ಲೋಕವನ್ನು ಏನೆಂದು ವರಿಸಿಕೊಡುತ್ತಾರೆ ಎಂಬುದರ ಮೇಲೆ ಇವುಗಳ ವರ್ಗೀಕರಣವಾಗಿದೆ. ವಸ್ತುವಾದಿಯಾದ ಸರ್ವಾಸ್ತಿವಾದವು ಸಾಂಖ್ಯಕ್ಕೆ ಹತ್ತಿರವಾಗಿ ಇರುವುದರಿಂದ ಮತ್ತು ಹಿಂದೂ ತಾತ್ವಿಕತೆಗೆ ಅದನ್ನು ನಿಭಾಯಿಸಲು ಸಾಧ್ಯವಾಗಿರುವುದರಿಂದ ಸರ್ವಾಸ್ತಿವಾದದ ಪಠ್ಯಗಳನ್ನು ಬೌದ್ಧ ತಾತ್ವಿಕತೆಯ ಕೇಂದ್ರ ಪಠ್ಯಗಳನ್ನಾಗಿ ಎದುರಿಗೆ ಇಟ್ಟುಕೊಳ್ಳುವರೇ ವಿನಾ ನಿಜವಾದ ಬೌದ್ಧ ತಾತ್ವಿಕತೆಯಾದ ವಿಜ್ಞಾನವಾದ (ಯೋಗಾಚಾರ) ಮತ್ತು ಮಧ್ಯಮ ಮಾರ್ಗಗಳ ಪಠ್ಯಗಳನ್ನು ಇದುವರೆಗೆ ಎದುರಾಗಲು ಹೋಗಿಲ್ಲ. ಇದರ ಹಿಂದಿನ ಸಾಂಸ್ಕೃತಿಕ ರಾಜಕಾರಣವನ್ನು ಅರ್ಥಮಾಡಿಕೊಳ್ಳಲು, ಇಲ್ಲಿಯ ತಾತ್ವಿಕ ಸಂಘರ್ಷದ ಸ್ವರೂಪವನ್ನು ಪರಿಚಯ ಮಾಡಿಕೊಳ್ಳಬೇಕಾಗುತ್ತದೆ.

ಎದುರಿಗಿನ ಲೋಕಸತ್ತೆಯು ನಿಜವಾಗಿ ಸ್ವತಂತ್ರವಾಗಿ ಇದೆ ಎಂಬುದು ಸರ್ವಾಸ್ತಿವಾದದ ಪ್ರಮುಖ ನಿಲುವು. ಈ ನಿಲುವನ್ನು ಹಿನ್ನೆಲೆಗೆ ಇಟ್ಟುಕೊಂಡು ಈ ಪ್ರಸ್ಥಾನವು ಬೌದ್ಧ ಪರಿಕಲ್ಪನೆಗಳಾದ ಧರ್ಮ, ಅನಾತ್ಮವಾದ, ದುಃಖ, ಪ್ರತೀತ್ಯ ಸಮುತ್ಪಾದ ಮುಂತಾದುವುಗಳನ್ನು ವಿವರಿಸುವ ಪ್ರಯತ್ನ ಮಾಡುತ್ತದೆ. ಬುದ್ಧಗುರು ತನ್ನ ಕಾಲಕ್ಕೆ ಎದುರಿಗಿದ್ದ ಒಟ್ಟು ೬೩ ಚಿಂತನಾ ಪ್ರಸ್ಥಾನಗಳನ್ನು ಅಧ್ಯಯನ ಮಾಡಿ ಅವುಗಳನ್ನು ಎರಡು ಗುಂಪುಗಳನ್ನಾಗಿ ಮಾಡಲು ಸಾಧ್ಯವೆಂದು ತೋರಿಸುತ್ತಾನೆ. ಒಂದು ಗುಂಪು ಲೋಕದ ಈ ಸಮಸ್ತವೂ ಸ್ವತಂತ್ರವಾಗಿ 'ಇದೆ' ಎಂದು ನಂಬುತ್ತದೆ ಮತ್ತು ಇನ್ನೊಂದು ಗುಂಪು 'ಇಲ್ಲ' ಎಂದು ವಾದಿಸುತ್ತದೆ. ಆದರೆ ಬುದ್ಧಗುರು ಹೀಗೆ ಲೋಕವನ್ನು ಇದೆ ಎನ್ನಲೂ ಬರುವುದಿಲ್ಲ, ಇಲ್ಲ ಎನ್ನಲೂ ಬರುವುದಿಲ್ಲ ಇದೆ, ಇಲ್ಲ, ಇದೆ ಇಲ್ಲ ಎರಡೂ ಅಲ್ಲ, ಇದೆ ಇಲ್ಲ ಎರಡೂ ಹೌದು (ಇದನ್ನು ಚತುಷ್ಕೋಟಿ ಎನ್ನುತ್ತಾರೆ.) – ಈ ಕ್ರಮದಲ್ಲಿ ಲೋಕವನ್ನು ವಿವರಿಸಲು ಬಾರದು ಎನ್ನುತ್ತಾನೆ. ಜ್ಞಾನವು ಇಂದಿಗೂ ಲೋಕದ ಬಗೆಗೆ ಇದೇ ನಿಲುವನ್ನು ಹೊಂದಿದೆ. ಈಗ ನಡೆಸುತ್ತಿರುವ ಹೆಡ್ರಾನ್ ಘರ್ಷಣೆಯ ನಂತರ ಉತ್ತರ ಹೇಳಬಹುದೇನೋ. ಅಲ್ಲಿಯವರೆಗೆ ಕಾಯಿರಿ ಎನ್ನುತ್ತಿದೆ. ಲೋಕದ ಪ್ರತಿ ವಿದ್ಯಮಾನವೂ ಸಂಬಂಧದಲ್ಲಿ ಉಂಟಾಗಿ ಸಂಬಂಧ

ಭಂಗಗೊಂಡಾಗ ವಿಸರ್ಜನೆಗೊಳ್ಳುತ್ತದೆ ಎನ್ನುವ ಪ್ರತೀತ್ಯ ಸಮುತ್ಪಾದ ತತ್ವವನ್ನು ಲೋಕವಿವರಣೆಗೆ ಬುದ್ಧಗುರು ಮುಂದಿಟ್ಟನು. ಹಾಗೆ ವಿವರಿಸುವಾಗ ಲೋಕವನ್ನು ಇದೆ ಎನ್ನುವವರಿಗೆ ಇಲ್ಲವೆಂದೂ, ಇಲ್ಲವೆನ್ನುವವರಿಗೆ ಇದೆ ಎಂದೂ, ಇದೆ, ಇಲ್ಲ ಎರಡೂ ಸರಿ ಎನ್ನುವವರಿಗೆ ಇದೆ, ಇಲ್ಲ ಎರಡೂ ಸರಿಯಲ್ಲವೆಂದೂ, ಇದೆ, ಇಲ್ಲ ಎರಡೂ ಸರಿಯಲ್ಲ ಎನ್ನುವವರಿಗೆ ಇದೆ, ಇಲ್ಲ ಎರಡೂ ಸರಿ ಎಂದೂ ವಿವರಿಸಿ ಆ ನಿಲುವುಗಳನ್ನು ನಿರಾಕರಿಸುವುದರ ಮೂಲಕ ನಿವಾರಿಸಿದನು. ಈ ನಿರಾಕರಣೆ ಮತ್ತು ನಿವಾರಣೆಗಳು ಪಾಂಥಿಕ ಶಠತ್ವದ ವಿದ್ವಾಂಸರಿಂದಾಗಿ ಒಂದೊಂದು ಪಂಥಗಳಾಗಿ ಸ್ಥಾಪಿತವಾದವು. (ನೋಡಿ: ಜೆ. ಜೆ. ಕಲೂಪಹಾನ: ನಾಗಾರ್ಜುನನ ಮೂಲ ಮಧ್ಯಮಕಕಾರಿಕಾದ ಪ್ರಸ್ತಾವನೆ ಪುಟ ೬).

ಹಿಂದೂ ವೈದಿಕ ಆತ್ಮವಾದಕ್ಕೆ ಅಪಾಯಕಾರಿಯಾಗಿ ಹತ್ತಿರಕ್ಕೆ ಬಂದ ಸರ್ವಾಸ್ತಿವಾದವನ್ನು ನಂತರದ ಎಲ್ಲ ಬೌದ್ಧ ಪ್ರಸ್ಥಾನಗಳೂ ಮೊದಲ ಪ್ರತಿಪಕ್ಷವಾಗಿ ಮುಂದಿಟ್ಟುಕೊಳ್ಳುತ್ತಾರೆ. ತಮ್ಮ ತಾತ್ವಿಕತೆಗೆ ವಿರುದ್ಧವೆಂಬ ಕಾರಣಕ್ಕೆ ಅದನ್ನು ವಿರೋಧಿಸದೆ ಅದು ಮುಂದಿಡು ತ್ತಿರುವ ವಿವರಣೆಯಂತೆ ಲೋಕ ಇಲ್ಲವೆಂಬ ಕಾರಣಕ್ಕೆ ಅದನ್ನು ನಿರಾಕರಿಸುತ್ತಾರೆ. ಸರ್ವಾಸ್ತಿವಾದಿಗಳು ಬದಲಾವಣೆಯನ್ನು ಒಪ್ಪಿಕೊಂಡರೂ ಬದಲಾಗದ 'ಧರ್ಮ'ವೊಂದನ್ನು ಮತ್ತು ಅದು ವ್ಯಕ್ತವಾಗುವ 'ಕ್ಷಣ' ವೊಂದು ಇದೆ ಮತ್ತು ಈ ಕ್ಷಣಗಳ ಸರಮಾಲೆಯೇ ಲೋಕದ ಎಲ್ಲ ವಿದ್ಯಮಾನಗಳು ಎನ್ನುತ್ತಾರೆ. ಬದಲಾವಣೆಯ ನಡುವೆಯೂ 'ಶಾಶ್ವತ ಕಾರಣ' ವೊಂದನ್ನು ಮುಂದಿಡುತ್ತಾರೆ. ಅಂದರೆ ಬದಲಾವಣೆ ಉಂಟು, ಆದರೆ ಆ ಬದಲಾವಣೆ ಯಾವಾಗಲೂ ಹೀಗೆಯೇ ಆಗುತ್ತದೆ ಎಂದು ವಾದಿಸುತ್ತಾರೆ. ಈ ನಿಶ್ಚಿತ ಬದಲಾವಣೆಯನ್ನು ನಂತರದ ಬೌದ್ಧರು ಬಹಳ ಎಚ್ಚರದಿಂದ ಹಾಗೂ ಅಷ್ಟೇ ದೃಢವಾಗಿ ನಿರಾಕರಿಸಿದ್ದಾರೆ. ಸಾಂಖ್ಯಕ್ಕೆ ಹತ್ತಿರವಾದ, ಆತ್ಮವಾದಕ್ಕೆ ಹತ್ತಿರವಾದ ಸರ್ವಾಸ್ತಿವಾದದ ನಿಲುವನ್ನು ವೈದಿಕ ನಿಲುವಿನ ಯಾವ ತಾತ್ವಿಕರೂ ಗಂಭೀರವಾಗಿ ವಿರೋಧಿಸುವುದಿಲ್ಲ, ಹಾಗಾಗಿಯೇ ಕನ್ನಡದಲ್ಲಿ ಬಂದಿರುವ ಬಹುಪಾಲು ಪಠ್ಯಗಳು ಸರ್ವಾಸ್ತಿವಾದದ ಪಠ್ಯಗಳೇ ಆಗಿವೆ.

ಎಲ್. ಬಿ.ಯವರು ಕನ್ನಡಕ್ಕೆ ತಂದಿರುವ ಸೌಂದರನಂದ ಕೃತಿಗೆ ಪ್ರೊ|| ಕೆ. ಜಿ. ನಾಗರಾಜಪ್ಪನವರ ಮೌಲಿಕವಾದ ಮುನ್ನುಡಿ ಇದೆ. ಅವರ ಒಂದು ಮಾತನ್ನು ಇಲ್ಲಿ ಉಲ್ಲೇಖಿಸಬೇಕೆನಿಸುತ್ತದೆ. ಅಶ್ವಘೋಷನ ಮೇಲೆ ವೇದ ಕಾವ್ಯದ ಪ್ರಭಾವ ಬಿದ್ದಿರಬಹುದೆಂಬ ಊಹೆಯೂ ಇದೆ. ಏಕೆಂದರೆ ವಾದದಲ್ಲಿ ಸೋತು ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ಬ್ರಾಹ್ಮಣ ವಿದ್ವಾಂಸ ಅಶ್ವಘೋಷ. ಅವನಿಗೆ ಬ್ರಾಹ್ಮಣ ಧರ್ಮ ಮತ್ತು ಬ್ರಾಹ್ಮಣ ಸಂಘ-ಸಂಸ್ಥೆಗಳ ಬಗೆಗೆ ಹಾಗೂ ಯಜ್ಞಯಾಗಾದಿಗಳ ಬಗೆಗೆ ಅಪಾರ ಗೌರವವಿತ್ತೆಂಬುದು ಸ್ಪಷ್ಟ. ದಶಾವತಾರದಲ್ಲಿ ಬುದ್ಧ ಅಡಕವಾದ ಮೇಲಂತೂ ಬೌದ್ಧ ಧರ್ಮದ ವೈಚಾರಿಕ ಚಿಂತನೆಗಳು ಈ ನೆಲದಲ್ಲಿ ಮೊಳಕೆಯೊಡೆಯಲೇ ಇಲ್ಲ, ಅಂದಿನ ಬೌದ್ಧ ವಿಹಾರಗಳು ಇಂದು ದೇವಾಲಯ ಅಥವಾ ಅನ್ಯಮತ ಪೀಠಗಳಾಗಿವೆ.''

ಅಶ್ವಘೋಷ ಸರ್ವಾಸ್ತಿವಾದಿ. ಅವನ ಚಾರಿತ್ರಿಕ ಹಿನ್ನೆಲೆಯ ಬಗೆಗೆ ತೀರಾ ಮಸುಕು ಮಸುಕಾದ ವಿವರಣೆಗಳಿವೆ. ಕಾನಿಷ್ಕನ ಕಾಲದವನಿರಬೇಕೆಂದು ಊಹಿಸುತ್ತಾರೆ. ಅವನ ಕೃತಿಗಳನ್ನು ಗಮನಿಸಿದಾಗ ಎದ್ದು ಕಾಣುವ ಅಂಶವೆಂದರೆ ಚರಿತ್ರೆಯನ್ನು ಪುರಾಣವಾಗಿಸುವ ಅಸಾಧು ಕ್ರಮ. ಈ ಎರಡೂ ಕೃತಿಗಳನ್ನು ಅಶ್ವಘೋಷ ವಾಲ್ಮೀಕಿಯ ರಾಮಾಯಣ ಮತ್ತು ವ್ಯಾಸರ ಮಹಾಭಾರತಕ್ಕೆ ಸಂವಾದಿಯಾಗುವಂತೆ ರಚಿಸಿದ್ದಾನೆ, ಬುದ್ಧನನ್ನು ಅವತಾರಿ ಪುರುಷನನ್ನಾಗಿಸಿದ್ದಾನೆ. ದಶಾವತಾರದಲ್ಲಿ ಬುದ್ಧನನ್ನು ಸೇರಿಸುವ ಮೊದಲ ಪ್ರಯತ್ನವೇ ಈ ಸೌಂದರನಂದ ಮತ್ತು ಬುದ್ಧ ಚರಿತೆಗಳು. ಬುದ್ಧಗುರು ತನ್ನ ತಾತ್ವಿಕತೆಯನ್ನು ಕತೆಯನ್ನಾಗಿಸದೆ, ಪುರಾಣವನ್ನಾಗಿಸದೆ ಅತ್ಯಂತ ಸರಳವಾದ ಮತ್ತು ಸ್ಪಷ್ಟವಾದ ಮಾತುಕತೆಯ ರೂಪದಲ್ಲಿ ಮುಂದಿಟ್ಟನು. ಈ ಮಾತುಕತೆಯ ರೂಪವನ್ನು ತ್ರಿಪಿಟಕಗಳಲ್ಲಿ ಅಳವಡಿಸಿಕೊಳ್ಳಲಾಗಿದೆ. ಆದರೆ ಈ ಮಾತುಕತೆಯನ್ನು ದೊಡ್ಡ ಪ್ರಮಾಣದಲ್ಲಿ ಅಪ ವ್ಯಾಖ್ಯಾನಿಸುವ ಪ್ರಯತ್ನಗಳು ನಂತರ ನಡೆದವು.



ಅಶ್ವಘೋಷನ ಕೃತಿಗಳಲ್ಲಿನ ಕೆಲವು ಸಂಗತಿಗಳನ್ನು ಲಘುವಾಗಿ ಪರಿಗಣಿಸುವಂತಿಲ್ಲ, ಉದಾಹರಣೆಗೆ, ಬುದ್ಧ ಗುರುವಿನ ತಂದೆ ಶುದ್ಧೋದನ ಸಾಕ್ಯ ಬುಡಕಟ್ಟಿನವನು. ಆದರೆ ಅಶ್ವಘೋಷ ಅವನನ್ನು ಕಪಿಲ ಗೌತಮನ ಶಿಷ್ಯನನ್ನಾಗಿಸಿದ್ದೂ ಅಲ್ಲದೆ, ಶ್ರೀರಾಮನ ಇಕ್ಷ್ವಾಕು ವಂಶದವನನ್ನಾಗಿಸಿಬಿಡುತ್ತಾನೆ!

ಬುದ್ಧಮಾರ್ಗವೆನ್ನುವುದು ಕುಟುಂಬ ನಿವೃತ್ತಿ ಮಾರ್ಗ ವೆಂದೂ, ಅದು ದುಃಖ ನಿವಾರಣಾ ಮಾರ್ಗಕ್ಕಿಂತ ಹೆಚ್ಚಾಗಿ ಪರಾವೃತ್ತಿಯೇ ಅದರ ಆದ್ಯತೆಯೆಂಬುದು ಅಶ್ವಘೋಷನ ನಿಲುವು. ಅವನಿಗೆ ಋಣತ್ರಯಗಳು ಆದರಣೀಯ. ಪಿತೃಋಣವನ್ನು ಸಂತಾನ ಪ್ರಾಪ್ತಿಯಿಂದಲೂ, ಋಷಿಋಣವನ್ನು ವೇದಾಧ್ಯಯನದಿಂದಲೂ, ದೇವಋಣ ವನ್ನು ಯಜ್ಞಯಾಗಾದಿಗಳಿಂದಲೂ ತೀರಿಸಬೇಕೆನ್ನುತ್ತಾನೆ. ಆದರೆ ಬುದ್ಧಗುರು ವೇದ ಪ್ರಮಾಣವನ್ನು ಸೇರಿದಂತೆ ಎಲ್ಲ ಪ್ರಮಾಣಗಳನ್ನೂ, ಯಜ್ಞಯಾಗಾದಿಗಳನ್ನೂ ಸ್ಪಷ್ಟವಾಗಿ ತಿರಸ್ಕರಿಸಿದನೆಂದು ತ್ರಿಪಿಟಕಗಳ ಸೂತ್ರಗಳು ತಿಳಿಸುತ್ತವೆ. ಸಾಮಾನ್ಯ ಬ್ರಾಹ್ಮಣ ನಿಲುವಾದ 'ದಕ್ಷಿಣ ತಿರಸ್ಕಾರ'ವನ್ನು, ಅಶ್ವಘೋಷನೂ ಅನುಮೋದಿಸುತ್ತಾನೆ. 'ಅನಾರ್ಯರಿರುವ ದಕ್ಷಿಣ ದಿಕ್ಕಿನ ಕಡೆಗೆ ಒಂದು ಹೆಜ್ಜೆಯೂ ಹೋಗಬೇಡ – ಆರ್ಯರು, ಬ್ರಹ್ಮರ್ಷಿಗಳು, ರಾಜರ್ಷಿಗಳಿರುವ ಉತ್ತರಕ್ಕೇ ಹೋಗುವಂತೆ' ವೃದ್ಧ ಋಷಿಯೊಬ್ಬನ ಕಡೆಯಿಂದ ಬುದ್ಧನಿಗೆ ಉಪದೇಶ ಕೊಡಿಸುತ್ತಾನೆ!

ಬುದ್ಧಗುರು ಮಧ್ಯಮಮಾರ್ಗವನ್ನು ವಿವರಿಸಿಕೊಟ್ಟ ನೆಂಬುದನ್ನು ಮತ್ತು ಅದು ಬೌದ್ಧ ತಾತ್ವಿಕತೆಯ ಕೇಂದ್ರವೆಂಬುದನ್ನು ಯಾವ ಬೌದ್ಧ ಪ್ರಸ್ಥಾನಗಳೂ ನಿರಾಕರಿಸಲು ಸಾಧ್ಯವಿಲ್ಲ, ಮಧ್ಯಮಮಾರ್ಗ ಅಥವಾ ಶೂನ್ಯತಾವಾದವನ್ನು ಎಲ್ಲ ಪ್ರಸ್ಥಾನಗಳೂ ಒಪ್ಪಿಕೊಳ್ಳುತ್ತವೆ. ಆದರೆ ಮಧ್ಯಮಮಾರ್ಗವು ಇತರ ಪ್ರಸ್ಥಾನಗಳ ನಿಲುವು ಗಳನ್ನು ನಿರಾಕರಿಸುತ್ತದೆ. ಮಧ್ಯಮಮಾರ್ಗವೆನ್ನುವುದು ಲೋಕವನ್ನು ಸರಿಯಾಗಿ ವಿವರಿಸುವ ಕ್ರಮ. ಈ ಲೋಕವನ್ನು ಇದೆ, ಇಲ್ಲ ಎಂದು ವಿವರಿಸಲು ಸಾಧ್ಯವಿಲ್ಲ, ಬದಲಿಗೆ ಅದು ಸದಾ ಬದಲಾಗುತ್ತಿರುವ ಹರಿಯುತ್ತಿರುವ ಪ್ರವಾಹವೆಂದು ಅದು ವಿವರಿಸಿಕೊಡುತ್ತದೆ. ಸರ್ವಾಸ್ತಿ ವಾದಿಗಳು ಲೋಕವನ್ನು 'ಇದೆ' ಎಂದು ವಿವರಿಸಿ ಕೊಂಡವರು. ಅವರಿಗೆ ಮಧ್ಯಮಮಾರ್ಗದ ಲೋಕ ವಿವರಣೆಯನ್ನು ಒಪ್ಪಿಕೊಂಡರೆ ತಮ್ಮ ನಿಲುವು ಬಿದ್ದು ಹೋಗುತ್ತದೆ ಎಂಬುದು ತಿಳಿದಿದೆ. ಈ ಸಂದಿಗ್ಧದಿಂದ ಪಾರಾಗಲು ಅವರು ಮಧ್ಯಮಮಾರ್ಗದ ಕೇಂದ್ರ ವಿವರಣೆಗಳಿಗೆ ಹೋಗದೆ ಕೆಲವಂಶಗಳನ್ನು ಮಾತ್ರ ಮುಂದಿಟ್ಟುಕೊಳ್ಳುತ್ತಾರೆ.

ಅಶ್ವಘೋಷ ಮಧ್ಯಮಮಾರ್ಗವನ್ನು, ''ಕ್ಲೇಷಕಾರಿಯಾದ ತಪಸ್ಸೂ ಬೇಡ, ಬುದ್ಧಿಗೆಡಿಸುವ ವಿಷಯಾಸಕ್ತಿಯೂ ಬೇಡ. ಈ ಎರಡರ ಅತಿರೇಕವಿಲ್ಲದ ಮೂರನೆಯ ಮಾರ್ಗ' ಎನ್ನುತ್ತಾನೆ. ಅಪ್ರಿಯ ಸಂಯೋಗ, ಪ್ರಿಯ ವಿಯೋಗ, ಜರೆ ಮರಣಗಳೇ ದುಃಖ ಕಾರಣ ಗಳೆಂದು ಮಧ್ಯಮಮಾರ್ಗವನ್ನು ವಿವರಿಸಿಕೊಳ್ಳುತ್ತಾನೆ. ಈ ವಿವರಣೆಗಳು ಸರಿಯಾಗಿಯೇ ಇವೆ. ಆದರೆ ಮುಖ್ಯ ನಿಲುವಾದ ಲೋಕವಿವರಣೆಯನ್ನು ಎದುರಾಗದೆ ಅರುಗಾಗಿಹೋಗುತ್ತಾನೆ ಈ ಸಂಗತಿಗಳನ್ನು ಅಶ್ವಘೋಷ ಪ್ರಶ್ನಿಸಹೋಗುವುದಿಲ್ಲ: ೧. ವರ್ಣಾಶ್ರಮ ವ್ಯವಸ್ಥೆ ೨. ವೇದ ಮುಂತಾದ ಪ್ರಮಾಣಗಳು ೩. ದೈವ ಅಥವಾ ಏಕಮೂಲವಾದ ೪. ಪವಾಡಗಳು ಇತ್ಯಾದಿ. ಇವುಗಳ ಬಗೆಗೆ ಬುದ್ಧಗುರುವಿನ ನಿಲುವುಗಳು ಖಚಿತವಾಗಿ ವಿವರಿಸ ಲ್ಪಟ್ಟಿವೆ. ಇವುಗಳೇ ಸಮೂಹದ ಸಂಕಟಕ್ಕೆ ಕಾರಣವಾಗಿವೆ ಎಂಬ ಅರಿವನ್ನು ಬುದ್ಧಗುರು ಸರಳವಾಗಿ ತಿಳಿಸಿಕೊಟ್ಟಿದ್ದಾನೆ. ಆದರೆ ಬೌದ್ಧ, ನಾಥ ಮುಂತಾದ ಶ್ರಮಣ ಧಾರೆಗಳ ತಾತ್ವಿಕತೆಯ ಅಪವ್ಯಾಖ್ಯಾನ ಅವುಗಳ ಒಳಗೇ ನಡೆಯುವುದು ಒಂದು ಸಮಸ್ಯೆಯಾದರೆ, ಅಂತಹ ಕೃತಿಗಳು ಕನ್ನಡಕ್ಕೆ ಬರುವಾಗ ದೊಡ್ಡ ಪ್ರಮಾಣದಲ್ಲಿ ವೈದಿಕೀಕರಣಗೊಂಡು ಬರುವುದು ಇನ್ನೊಂದು ಸಮಸ್ಯೆಯಾಗಿದೆ.

**ಎಸ್. ನಟರಾಜ ಬೂದಾಳು**
'ಗೌರಿ', ಸಪ್ತಗಿರಿ ಬಡಾವಣೆ, ನಳಂದ ಶಾಲೆ ಹಿಂಭಾಗ
ತುಮಕೂರು - ೫೭೨೧೦೨

ಹೊಸ ಓದು

## ಇಂಗಾಲದ ಜಾಡು

ಮಾಧವ ಐತಾಳ್

**ಪುಟ :** ೧೫೬

**ಬೆಲೆ : ರೂ.** ೧೧೦

**ಋತ ಪುಸ್ತಕ,** ನಂ. ೮೯೧ ಮೊದಲ ಮಹಡಿ, ೩ನೇ ಎ ಮುಖ್ಯರಸ್ತೆ, ಡಿ ಬ್ಲಾಕ್ ೨ನೇ ಹಂತ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಒಂದು ದೇಶದ ಅಭಿವೃದ್ಧಿಯನ್ನು ಯಾವ ಮಾನದಂಡದಿಂದ ಅಳೆಯುವುದು ? ಅಭಿವೃದ್ಧಿ ಒಂದು ಹಂತದವರೆಗೆ ಇರದೆ ಮೇರೆ ಮೀರಿದಲ್ಲಿ ಅದು ಅವನತಿಯಲ್ಲವೆ ? ಕಳೆದ ನೂರು ವರ್ಷಗಳಲ್ಲಿ ಅಭಿವೃದ್ಧಿ ಸಾಧಿಸಿದ ದೇಶಗಳು ಭೂಮಿ-ಆಕಾಶ-ನೀರು-ಗಾಳಿಗಳನ್ನೆಲ್ಲ ಮಲಿನಗೊಳಿಸಿ ಜಾಗತಿಕ ಪರಿಸರ ಮಾಲಿನ್ಯವಾಗಲು ಕಾರಣವಾಗಿವೆ. ಇದೀಗ ಅಭಿವೃದ್ಧಿಯ ಹಾದಿಯಲ್ಲಿರುವವರ ಸರದಿ. ಕೈಗಾರಿಕಾ ತ್ಯಾಜ್ಯ, ಮಿತಿಮೀರಿದ ವಾಹನದಟ್ಟಣೆ, ಅಣುಸ್ಥಾವರ ಮುಂತಾದವು ವಾತಾವರಣಕ್ಕೆ ಸೇರಿಸುವ ಅಪಾಯಕಾರಿ ಹಾನಿಕಾರಕ ವಸ್ತುಗಳೆಷ್ಟೊ! ಇಂದು ಜಾಗತಿಕ ಮಟ್ಟದಲ್ಲಿ ಹವಾಮಾನ ಬದಲಾವಣೆಯುಂಟಾಗಿ ಹೊಸ ಸಮಸ್ಯೆ ಸೃಷ್ಟಿಯಾಗಿದೆ. ಕ್ಯೋಟೋ ಒಪ್ಪಂದ, ಕೋಪನ್‌ಹೇಗನ್‌ನಲ್ಲಿ ನಡೆದ ಜಾಗತಿಕ ಶೃಂಗಸಭೆಗಳಲ್ಲಿ ಇದನ್ನು ಚರ್ಚಿಸಲಾಗಿದ್ದು ಶ್ರೀಮಂತ ರಾಷ್ಟ್ರಗಳು ಸುಲಭದಲ್ಲಿ ಇದನ್ನು ಬಗೆಹರಿಸಲು ಸಹಕರಿಸುತ್ತಿಲ್ಲ. ವರದಿಗಳಲ್ಲೂ ಗೊಂದಲಗಳು. ಈ ಪುಸ್ತಕದಲ್ಲಿ ಇಂಗಾಲದ ಬಗ್ಗೆ ತಿಳಿಸಿದ್ದು ಇಂಗಾಲದ ಡೈ ಆಕ್ಸೈಡ್ ವಾತಾವರಣ ಸೇರಿದಾಗ ಉಂಟಾಗುವ ಸಮಸ್ಯೆಗಳನ್ನು ತಿಳಿಸಿದ್ದಾರೆ. ಮನುಷ್ಯ ಎಚ್ಚೆತ್ತು ಅತಿಯಾಗಿ ಉಪಯೋಗಿಸುವ ಕೆಲವು ಐಶಾರಾಮಿ ವಸ್ತುಗಳಿಗೆ ಕಡಿವಾಣ ಹಾಕಿದಲ್ಲಿ ಇನ್ನೂ ಕೂಡ ಹಾನಿಯಾದ ಪರಿಸರವನ್ನು ಸಂರಕ್ಷಿಸಬಹುದು. ಭೂಮಿಯ ಮೇಲಿನ ಎಲ್ಲ ಜೀವಿಗಳೂ ಪ್ರಕೃತಿ ನೀಡಿದಷ್ಟನ್ನು ಬಳಸಿಕೊಂಡಿವೆ. ಮನುಷ್ಯ ಮಾತ್ರ ಎಲ್ಲ ಜೀವಜಾಲವನ್ನೂ ನಿರ್ನಾಮ ಮಾಡಿ ತಾನೂ ಅಪಾಯ ತಂದುಕೊಂಡಿದ್ದಾನೆ. ಇಂಥ ಹತ್ತು ಹಲವು ಉಪಯುಕ್ತ ಮಾಹಿತಿಗಳಿಲ್ಲಿವೆ.

## ಬೊಜ್ಜುದೇಹ

*ಡಾ|| ವಿ. ಪರಮೇಶ್ವರ*

**ಪುಟ :** ೯೭ **ಬೆಲೆ : ರೂ.** ೧೦೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಆಹಾರದಲ್ಲಿನ ಕೊಬ್ಬಿನ ಅಂಶ ಕರಗದೆ ಶರೀರದಲ್ಲಿ ಶೇಖರಗೊಂಡು ದೇಹದ ತೂಕ ಹೆಚ್ಚಿ ಗಾತ್ರ ಹೆಚ್ಚಾದಾಗ ಬೊಜ್ಜು ಎನಿಸಿಕೊಳ್ಳುತ್ತದೆ. ಇದನ್ನು ಒಂದು ವ್ಯಾಧಿಯೆಂದು ಪರಿಗಣಿಸಿ ಬೊಜ್ಜನ್ನು ಇಳಿಸಲು ಪ್ರಪಂಚದಾದ್ಯಂತ ವಿವಿಧ ಚಿಕಿತ್ಸೆಗಳ ಮೊರೆಹೋಗಲಾಗಿದೆ. ಪ್ರತಿಯೊಂದು ಕೆಲಸಕ್ಕೂ ಯಂತ್ರಗಳನ್ನವಲಂಬಿಸಿ ಶ್ರಮಜೀವನಕ್ಕೆ ವಿದಾಯ ಹೇಳಿ ಐಶಾರಾಮಿ ಜೀವನ ನಡೆಸುವ ಶ್ರೀಮಂತ ವರ್ಗದ ಜನರಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ. ಮಿತಿಮೀರಿದ ಆಹಾರ ಸೇವನೆಯೂ ಇದಕ್ಕೆ ಕಾರಣ. ಅಧಿಕ ರಕ್ತದೊತ್ತಡ, ಹೃದಯಾಘಾತ, ಮಧುಮೇಹ ಮುಂತಾದವುಗಳಿಗೆ ಬೊಜ್ಜುದೇಹ ಕಾರಣವಾಗುತ್ತದೆ. ಬೊಜ್ಜನ್ನು ನಿವಾರಿಸಲು ಯಾವ ಕ್ರಮ ಕೈಗೊಳ್ಳಬೇಕು, ಯಾವ ಆಹಾರ ಸೇವಿಸಬೇಕು ಮುಂತಾದ ಉಪಯುಕ್ತ ಮಾಹಿತಿ ಈ ಪುಸ್ತಕದಲ್ಲಿದೆ. ಆರಾಮ ಜೀವನ ತ್ಯಜಿಸಿ ದೈಹಿಕ ಶ್ರಮದ ಕೆಲಸಗಳನ್ನು ಸಾಧ್ಯವಾದಷ್ಟೂ ಹೆಚ್ಚಿಸಬೇಕಾದ ಅಗತ್ಯವನ್ನು ಒತ್ತಿಹೇಳಲಾಗಿದೆ. ತೂಕವನ್ನು ಇಳಿಸಿ ಬೊಜ್ಜನ್ನು ಕರಗಿಸಲು ತೆಗೆದುಕೊಳ್ಳಬೇಕಾದ ಕ್ರಮವನ್ನು ತಿಳಿಸಲಾಗಿದೆ. ೨೦, ೨೧ನೇ ಶತಮಾನದಲ್ಲಿ ಬೊಜ್ಜುದೇಹದ ವ್ಯಾಧಿಯು ಅಪಾಯಕಾರಿ ಮಟ್ಟ ತಲುಪಿ ಆತಂಕ ಸೃಷ್ಟಿಸಿದ್ದನ್ನು ವಿಶ್ವ ಆರೋಗ್ಯ ಸಂಸ್ಥೆ ಗುರುತಿಸಿ ಎಲ್ಲ ದೇಶದವರಿಗೂ ಎಚ್ಚರಿಕೆಯನ್ನು ಘೋಷಿಸಿದೆ. ಜೋಕೆ ! ಡೆನ್ಮಾರ್ಕ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತನ್ನ ದೇಶದ ಬೊಜ್ಜುದೇಹದ ನಾಗರಿಕರಿಗೆ ಹೊಸ ತೆರಿಗೆ ವಿಧಿಸಿ ಸರ್ಕಾರದ ಬೊಕ್ಕಸಕ್ಕೂ ಬೊಜ್ಜು ಬರಿಸಿದೆ.

## ಮಗುವಿರಲಿ ಮನೆಯಲ್ಲಿ ನಗುವಿರಲಿ ಮನದಲ್ಲಿ (ಬಂಜೆತನದ ಅರಿವು)

*ಶ್ವೇತಾ ನರಗುಂದ*

**ಪುಟ :** ೮೮ **ಬೆಲೆ : ರೂ.** ೫೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಮಗುವೊಂದು ಮನೆಯಲ್ಲಿ ಜನಿಸಿದರೆ ಆ ಸಂಭ್ರಮ ಹೇಳತೀರದು. ಮನುಷ್ಯ ಅಷ್ಟೇ ಅಲ್ಲ, ಸಕಲ ಜೀವಿಗಳೂ ತಮ್ಮ ಸಂತಾನವನ್ನು ಪ್ರೀತಿಸಿ ಕಾಪಾಡುತ್ತವೆ. ಆದರೂ ಅದೆಷ್ಟೋ ದಂಪತಿಗಳಿಗೆ ಸಕಲ ಸೌಭಾಗ್ಯಗಳಿದ್ದರೂ ಮಕ್ಕಳಿಲ್ಲದ ಕೊರತೆಯೊಂದು ಸದಾ ಕಾಡುತ್ತದೆ. ಇದುವರೆಗೂ ಮಕ್ಕಳಾಗದಿರಲು ಸ್ತ್ರೀಯೆ ಕಾರಣವೆಂದು ದೂಷಿಸಿ ಬಂಜೆಪಟ್ಟವನ್ನು ಸಮಾಜ ಆಕೆಗೇ ಆರೋಪಿಸಿತ್ತು. ಸಂತಾನಹೀನತೆ ಎಂದರೇನು ? ಅದು ಹೆಣ್ಣಿಗೆ ಮಾತ್ರ ಅಂಟಿದ ಶಾಪವೇ ? ಅದು ಪುರುಷರಲ್ಲೂ ಇರಲು ಸಾಧ್ಯವೆ ? ಪ್ರಜನನಾಂಗಗಳು ಸುಸ್ಥಿತಿಯಲ್ಲಿದ್ದರೂ ಯಾಕೆ ಮಗು ಜನಿಸುತ್ತಿಲ್ಲ ? ಈ ಪ್ರಶ್ನೆಗಳಿಗೆಲ್ಲ ಇಂದಿನ ಆಧುನಿಕ ವೈದ್ಯವಿಜ್ಞಾನ ಉತ್ತರ ನೀಡಲು ಸಮರ್ಥವಾಗಿದೆ. ಮಾತ್ರವಲ್ಲ ಸ್ತ್ರೀ-ಪುರುಷರಲ್ಲಿ ದೋಷ ಯಾರಲ್ಲಿದೆಯೆಂದು ಪತ್ತೆಹಚ್ಚಿ, ಸಹಜ ಫಲವಂತಿಕೆಗೆ ಅಡಚಣೆಯಾಗಿರುವ ಅಂಶವನ್ನು ನಿವಾರಿಸಲೂ ಶಕ್ತವಾಗಿದೆ. ಹೀಗೆ ವೈದ್ಯಕೀಯ ನೆರವು ಪಡೆದು ದಂಪತಿಗಳು ತಮ್ಮದೇ ಮಗುವನ್ನು ಪಡೆಯುವ ವಿಧಾನವನ್ನು ಈ ಪುಸ್ತಕದಲ್ಲಿ ವಿವರಿಸಿದೆ. ಗರ್ಭಾಶಯದಲ್ಲಿನ ದೋಷ, ನಪುಂಸಕತೆ, ಪ್ರನಾಳದಲ್ಲಿ ಫಲಿತಗೊಳಿಸಿ ಮತ್ತೆ ಗರ್ಭಾಶಯಕ್ಕೆ ವರ್ಗಾಯಿಸುವ ವಿಧಾನ, ಬದಲಿ ತಾಯಿ ವ್ಯವಸ್ಥೆ – ಮುಂತಾದ ವೈದ್ಯವಿಜ್ಞಾನದ ಅದ್ಭುತ ಸಾಧನೆಗಳನ್ನು ಶ್ರೀಮತಿ ಶ್ವೇತಾ ನರಗುಂದ ಇಲ್ಲಿ ವಿವರವಾಗಿ ತಿಳಿಸಿದ್ದಾರೆ. ಲೇಖಕಿ ಪ್ರಾಣಿಶಾಸ್ತ್ರದಲ್ಲಿ ಎಂ.ಎಸ್‌ಸಿ. ಪದವೀಧರೆ. ಆಸ್ಪತ್ರೆ ನಿರ್ವಹಣೆಯಲ್ಲಿ ಅಪಾರ ಅನುಭವಸ್ಥರು.

## ನಿಷಿದ್ಧಾಕ್ಷರಿ (ಕವನ ಸಂಕಲನ)

*ತೆಲುಗುಮೂಲ : ಶ್ರೀಮತಿ ಮಂದರಪು ಹೈಮವತಿ ; ಕನ್ನಡಕ್ಕೆ : ಗುರುಮೂರ್ತಿ ಪೆಂಡಕೂರು*

**ಪುಟ :** ೧೮ + ೮೪ = ೧೦೨ **ಬೆಲೆ : ರೂ.** ೧೫೦

**ಯುವಕರ ಸಂಘ (ರಿ.),** ರಾಮನಗರ, ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ, ಕರ್ನಾಟಕ

ಹೆಣ್ಣಿನ ನೋವು ನಲಿವುಗಳನ್ನು ಧ್ವನಿಸುವ ಸಾಲುಗಳು ಈ ಕವನ ಸಂಕಲನದುದ್ದಕ್ಕೂ ಹರಿದುಬಂದಿವೆ. ಆಕೆ ತನ್ನ ಅಂತರಂಗದ ಎಲ್ಲ ಆಸೆ ಆಕಾಂಕ್ಷೆಗಳನ್ನು ಅದುಮಿಟ್ಟು ಸಂಸಾರದ-ಕುಟುಂಬದ ಇತರರ ಏಳ್ಗೆಗಾಗಿ ತ್ಯಾಗ ಮಾಡುತ್ತಾಳೆ. ಕಳೆದ ಸುದೀರ್ಘಕಾಲದ ಸಾಹಿತ್ಯಗಳನ್ನು ನೋಡಿದರೆ ಅಲ್ಲಿ ಹೆಣ್ಣಿನ ದೀನ, ಆರ್ತ, ಅಸಹಾಯ ಧ್ವನಿಗಳೇ ಕೇಳಿಸುತ್ತವೆ. ಆದರೆ ಪರಿಸ್ಥಿತಿಯು ಪಲ್ಲಟವಾಗುತ್ತದೆ. ಇಪ್ಪತ್ತು ಇಪ್ಪತ್ತೊಂದನೆಯ ಶತಮಾನದಲ್ಲಿನ ಮಹಿಳೆ ಸಮಾನತೆಗಾಗಿ ಸ್ವಾತಂತ್ರ್ಯಕ್ಕೆ ಹಂಬಲಿಸಿ ಮನೆಯ ಹೊಸ್ತಿಲನ್ನು ದಾಟಿದ್ದಾಳೆ. ಪ್ರತಿಭಟನೆ ಆಕೆಯ ಅಸ್ತ್ರ. ಉದ್ಯೋಗ ಅರಸಿ ಹೊರಬಂದು ಕಛೇರಿಗಳಲ್ಲೂ ಮನೆಯಲ್ಲೂ ತನ್ನ ದುಡಿಮೆಯ ಕ್ಷೇತ್ರವನ್ನು ದ್ವಿಗುಣಗೊಳಿಸಿಕೊಂಡಿದ್ದಾಳೆ. ಒಂದು ರೀತಿಯಲ್ಲಿ ಬಾಣಲೆಯಿಂದ ಬೆಂಕಿಗೆ ಎಂಬಂತೆ ಅವಳ ಸ್ಥಿತಿ. ಪುರುಷಪ್ರಾಧಾನ್ಯತೆಯ ಬಗ್ಗೆ ಎಷ್ಟೇ ಅಸಮಾಧಾನವಿದ್ದರೂ ಶೋಷಣೆಗೆ ಪ್ರತಿಯಾಗಿ ದ್ವೇಷದ ಭಾವನೆ ಸಲ್ಲದೆಂದು ಇಲ್ಲಿನ ಇಂಗಿತ. ಕವನಗಳ ಭಾಷೆ ಪ್ರತೀಕಾರಾತ್ಮಕ ಧೋರಣೆಯನ್ನು ಬಿಟ್ಟುಕೊಟ್ಟು ಸೌಹಾರ್ದತೆಯಿಂದ ಬಾಳಬೇಕಾದ ಅಗತ್ಯವನ್ನು ಹೇಳುತ್ತಿವೆ. ಹೆಣ್ಣುಮಕ್ಕಳ ಶೋಷಣೆ ಇಂದಿಗೂ ಕಡಿಮೆಯಾಗದೆ ಬೇರೆ ರೀತಿಗಳಲ್ಲಿ ಅದು ಬದಲಾವಣೆಗೊಂಡು ಆಕೆಯನ್ನು ಕಾಡುತ್ತಿದೆ. ಉದ್ಯೋಗಸ್ಥ ಸ್ತ್ರೀ, ಜಾಹೀರಾತಿನ ಸ್ತ್ರೀ ಮುಂತಾದ ನವಶೋಷಣೆಯ ಮುಖಗಳನ್ನು ಇಲ್ಲಿ ತೆರೆದಿರಿಸಿದ್ದಾರೆ. ತೆಲುಗು ಮೂಲದ ಕವನಗಳನ್ನು ಶ್ರೀ ಗುರುಮೂರ್ತಿ ಪೆಂಡಕೂರು ಅನುವಾದಿಸಿದ್ದಾರೆ.

## ಮುಂಬೆಳಕು

*ಡಾ// ಖದೀಜಾ ಮುಮ್ತಾಜ್; ಅನುವಾದ : ನಾಡೋಜ ಡಾ// ಸಾರಾ ಅಬೂಬಕ್ಕರ್*

**ಪುಟ : xvi + ೨೦೦** **ಬೆಲೆ : ರೂ. ೧೬೦**

**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಸೂಕ್ಷ್ಮತರಂಗ ನಿಲಯ ರಸ್ತೆ
ಮಂಗಳೂರು - ೫೭೫ ೦೦೬

*ಲೇಖಕಿ ಡಾ// ಖದೀಜಾ ಮುಮ್ತಾಜ್ ಮಲಯಾಳಂನಲ್ಲಿ ಬರೆದ 'ಬರ್ಸಾ' ಕಾದಂಬರಿಯ ಅನುವಾದ. ಇಲ್ಲಿ ಮುಸ್ಲಿಂ ಧಾರ್ಮಿಕ ಕಟ್ಟುಪಾಡುಗಳ ಮಧ್ಯೆ ಅದಕ್ಕಿದಿರಾಗಿ ಸ್ತ್ರೀವಾದಿ ಮನೋಭಾವನೆಯೊಂದು ಅರಳಿ ನಿಂತು ತನ್ನ ಸುಗಂಧ ಬೀರುತ್ತಿದೆ. ಪ್ರಬಲ ಪುರುಷ ಪ್ರಧಾನ ವ್ಯವಸ್ಥೆಯ ಬಿಗಿಹಿಡಿತದ ನಡುವೆಯೂ ಆಧುನಿಕ ವಿದ್ಯಾಭ್ಯಾಸದ ನಂತರದ ದಿನಗಳಲ್ಲಿ ತಸ್ಲಿಮಾ ನಸ್ರೀನ್, ಅಮೀನಾ ವುದೂದ್ ಮುಂತಾದ ಸ್ತ್ರೀಯರು ಧಾರ್ಮಿಕ ದೌರ್ಜನ್ಯ, ಸ್ತ್ರೀ ಶೋಷಣೆ, ಇಸ್ಲಾಮಿಕ್ ಫೆಮಿನಿಸಂ ಬಗ್ಗೆ ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ. ಬದುಕಿನ ಎಲ್ಲ ವ್ಯವಹಾರಗಳಲ್ಲಿ ಪಾಲ್ಗೊಳ್ಳುವುದನ್ನು ನಿಷೇಧಿಸುವ ಇಸ್ಲಾಮನ್ನು, ಕಟ್ಟುಪಾಡುಗಳನ್ನು ಹೇರಿ ಸ್ತ್ರೀಯರನ್ನು ದಾಸ್ಯದಲ್ಲಿ ಕೆಡಹುವ ವ್ಯವಸ್ಥೆಯನ್ನು ಸ್ತ್ರೀವಾದಿಗಳು ನಿರಾಕರಿಸಿದ್ದಾರೆ. ಇತರ ರಾಷ್ಟ್ರಗಳಿಂದ ದುಡಿಮೆಗಾಗಿ ಬರುವ ಸೌದಿ ಅರೇಬಿಯದ ನೆಲದಲ್ಲಿ ನಡೆದಂತೆ ಚಿತ್ರಿಸಿ, ಪಾತ್ರಗಳ ಮೂಲಕ ಇಡೀ ಇಸ್ಲಾಂ ಸಮುದಾಯದ ಒಳಹೊರಗನ್ನು ತೆರೆದುತೋರಿಸಿದ್ದಾರೆ. ಇದೊಂದು ಎಲ್ಲ ರೀತಿಯ ಜನರ ಜೀವನದ ಕಥಾನಕವೂ ಆಗಿದ್ದು ಪ್ರತಿಯೊಬ್ಬನ ಸ್ವಂತ ನೆಲೆಯಲ್ಲಿನ ಆಗುಹೋಗುಗಳಿವೆ. ಚೌಕಟ್ಟು ಮಾತ್ರ ಇಸ್ಲಾಂನದ್ದು. ಅನೇಕ ಪ್ರಶ್ನೆಗಳು ಇಲ್ಲಿ ಉದ್ಭವಿಸುತ್ತವೆ. ಇಸ್ಲಾಂನಲ್ಲಿ ಅದಕ್ಕೆ ಉತ್ತರವಿಲ್ಲ; ಪ್ರಶ್ನೆಗಳನ್ನು ಕೇಳಬಾರದೆಂಬ ಉತ್ತರ ಮಾತ್ರ ಇರುತ್ತದೆ. ಶ್ರೀಮತಿ ಸಾರಾ ಅಬೂಬಕ್ಕರ್ ಇದನ್ನು ಸೊಗಸಾಗಿ ಅನುವಾದಿಸಿದ್ದಾರೆ. ಇಲ್ಲಿ ಮುಂದುವರಿಯಲು ಮುಂಬೆಳಕೊಂದು ಇದೆ.*




## ಅನರ್ಥಕಾರಿ ವಾಸ್ತು ಪೀಡೆ

*ವಿಚಾರವಾದಿ ಎ. ಎಸ್. ನಟರಾಜ್*

**ಪುಟ : 84 + ೪ = ೮೮** **ಬೆಲೆ : ರೂ. ೬೦**

**ರಾಜ್ ವೈಚಾರಿಕ ವೇದಿಕೆ (ರಿ),** ನಂ. ೪೩, 'ರೋಹಿಣಿ'
೫ನೇ ಮುಖ್ಯರಸ್ತೆ, ಪದ್ಮನಾಭನಗರ
ಬೆಂಗಳೂರು - ೫೬೦ ೦೭೦

*ರಾಜ್ ವೈಚಾರಿಕ ವೇದಿಕೆ ಜನರಲ್ಲಿ ಬೇರೂರಿದ ಮೂಢ ನಂಬಿಕೆಗಳನ್ನು ನಿವಾರಿಸಲು ಪ್ರಯತ್ನಿಸುತ್ತಿರುವ ಸಂಸ್ಥೆ. ಮುಗ್ಧಜನರು ಸಂಕಷ್ಟದಲ್ಲಿದ್ದಾಗ ಏನನ್ನು ಬೇಕಾದರೂ ನಂಬುವ ಸ್ಥಿತಿಯಲ್ಲಿರುತ್ತಾರೆ. ಇಂಥ ಸಮಯ ಸಾಧಿಸಿ ಅವರನ್ನು ವಂಚಿಸಿ ನೀಡುವ ಅಸಂಬದ್ಧ ಸಲಹೆಗಳಿಗೆ ನೊಂದ ಜನ ಸುಲಭದಲ್ಲಿ ಮರುಳಾಗುತ್ತಾರೆ. ಇಂಥವುಗಳಲ್ಲಿ ವಾಸ್ತು ಪೀಡೆಯೂ ಒಂದು. ನಿಮ್ಮ ಕಷ್ಟನಷ್ಟಗಳಿಗೆಲ್ಲ ನೀವಿರುವ ಮನೆಯ ವಾಸ್ತುದೋಷ ಕಾರಣವೆಂದು ಹೇಳುತ್ತಾ, ಕೆಡವಿ ಕಟ್ಟಿದರೆ ಸರಿಹೋಗುವುದೆಂದು ಸಲಹೆ ನೀಡುವ ವಾಸ್ತುತಜ್ಞರು ಅಣಬೆಗಳಂತೆ ಎಲ್ಲ ಕಡೆ ಬೀಡುಬಿಟ್ಟಿದ್ದಾರೆ. ನಿಮ್ಮ ಹಣದ ಒಂದು ದೊಡ್ಡ ಮೊತ್ತವನ್ನು ಕಬಳಿಸುವ ಇವರ ಮಾತು ಎಷ್ಟು ನಿಜ? ವಾಸ್ತು ಎಂದರೇನು? ಮನೆ ಕಟ್ಟುವ ಮೊದಲು ಇವರನ್ನು ಸಂಪರ್ಕಿಸಲೇ ಬೇಕೆ? ಭೌಗೋಳಿಕವಾಗಿ ಇದರ ವ್ಯಾಪ್ತಿ ಎಷ್ಟು? ಈ ಪುಸ್ತಕದಲ್ಲಿ ನೀಡಲಾದ ವಿವರವು ವಾಸ್ತುಶಾಸ್ತ್ರ ಎಷ್ಟೊಂದು ಹಾಸ್ಯಶಾಸ್ತ್ರವೆಂದು ನಿಮಗೆ ಮನವರಿಕೆಯಾದೀತು. ನೀವು ಮನೆ ಕಟ್ಟಲು ಪ್ರಾರಂಭಿಸುವ ಮುನ್ನ ಈ ಪುಸ್ತಕವನ್ನೋದಿ. ವಾಸ್ತುಶಾಸ್ತ್ರ ಪಂಡಿತರ ಕಛೇರಿಯತ್ತ ಒಮ್ಮೆ ಹುಸಿನಗೆ ಬೀರಿ, ಮರಳು, ಇಟ್ಟಿಗೆ, ಸಿಮೆಂಟು ಮುಂತಾದ ಅವಶ್ಯಕ ಸಾಮಗ್ರಿ ಖರೀದಿಸಲು ಮುಂದಕ್ಕೆ ನಡೆಯಿರಿ. ಸಾಧ್ಯವಾದರೆ ಪರಿಸರಸ್ನೇಹಿ ಮನೆ ಕಟ್ಟುವತ್ತ ಗಮನ ನೀಡಿ.*

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ನೆನಪು** (ಕವನ ಸಂಕಲನ) ಮುನಿಯಪ್ಪ ಹುಬ್ಬಳ್ಳಿ
***ಪುಟ : xvi + ೫೪*** ***ಬೆಲೆ : ರೂ. ೫೦***
**ಮಹಾಮನೆ ಪ್ರಕಾಶನ,** ಯಲಬುರ್ಗಾ, ಕೊಪ್ಪಳ ಜಿಲ್ಲೆ

**ಎಲ್ಲ ಮರೆತಿರುವಾಗ** ಸಿದ್ದರಾಜು ಸೊನ್ನದ
***ಪುಟ : ೫೬*** ***ಬೆಲೆ : ರೂ. ೫೦***
**ಸಮತಾ ಪ್ರಕಾಶನ,** ಸೆಕ್ಟರ್ ೧೨, ಪ್ಲಾಟ್ - ೧೬೩-ಎ, ಸಂಕೇತ್ ನಿಲಯ, ನವನಗರ, ಬಾಗಲಕೋಟ

**ನನ್ನ ಕನಸು** (ಮಕ್ಕಳ ಕವನಗಳು) ವಿದ್ಯಾಸಾಗರ ಕುಕ್ಕುಂದಾ
***ಪುಟ : viii + ೩೨*** ***ಬೆಲೆ : ರೂ. ೩೦***

**ಚೆಲುವ ಚಂದಿರ** (ಮಕ್ಕಳ ಕವಿತೆಗಳು) ರಾಜಶೇಖರ ಕುಕ್ಕುಂದಾ
***ಪುಟ : viii + ೪೮*** ***ಬೆಲೆ : ರೂ. ೪೦***

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಸಾಗರ ಪ್ರಕಾಶನ,** 'ವಿದ್ಯಾಸದನ', ಎನ್‌ಜಿಒ ಕಾಲನಿ, ಸೇಡಂ ರಸ್ತೆ, ಗುಲಬರ್ಗಾ - ೫೮೫ ೧೦೫

**ನಿನಾದ** (ಕವನ ಸಂಕಲನ) ಶಾಂತಾರಾಮ ನಾಯಕ ಹಿಚಕಡ
***ಪುಟ : x + ೯೪*** ***ಬೆಲೆ : ರೂ. ೬೦***
**ಶಾಂತಾರಾಮ ನಾಯಕ,** ಹಿಚಕಡ, ಅಂಚೆ : ಹಿಚಕಡ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ

**ಸಹಜ ವಿಮರ್ಶೆ** (ಲೇಖನಗಳ ಸಂಗ್ರಹ)
*ಪ್ರೊ// ಅಲ್ಲಮಪ್ರಭು ಬೆಟ್ಟದೂರು*
***ಪುಟ : xvi + ೨೦೮*** ***ಬೆಲೆ : ರೂ. ೧೪೦***
**ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು,** ಮುಖ್ಯಬೀದಿ, ಗುಲಬರ್ಗಾ - ೫೮೫ ೧೦೧

**ಸ್ಫೂರ್ತಿ** (ಶೈಕ್ಷಣಿಕ ಕವನ ಸಂಕಲನ)
*ಹೊ. ರಾ. ಪರಮೇಶ್ (ಗಾಣಧಾಳ ಪಂಚಮುಖಿ)*
***ಪುಟ : ೭೨*** ***ಬೆಲೆ : ರೂ. ೬೦***
**ಉಷಾ ಪ್ರಕಾಶನ ಹೊಡೆನೂರು,** ಅಂಚೆ : ಬನ್ನೂರು, ತಾಲೂಕು : ಅರಕಲಗೂಡು, ಜಿಲ್ಲೆ : ಹಾಸನ - ೫೭೩ ೧೩೦

**ಪೇಜಾವರ ಕವಿತೆಗಳು** (ಪ್ರತಿಕ್ರಿಯೆ) ಹರಿಯಪ್ಪ ಪೇಜಾವರ
***ಪುಟ : ೮ + ೩೮*** ***ಬೆಲೆ : ರೂ. ೨೦***

**ಕಲಾವಿದನ ಕೊಲೆ** (ಕವನಗಳು) ಹರಿಯಪ್ಪ ಪೇಜಾವರ
***ಪುಟ : ೧೦ + ೧೦೮*** ***ಬೆಲೆ : ರೂ. ೭೫***

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ತಿಂಗಳ ಬೆಳಕು ಪ್ರಕಾಶನ,** ವಡೇರ ಹೋಬ್ಳಿ, ವಿಠ್ಠಲವಾಡಿ, ಕುಂದಾಪುರ - ೫೭೬ ೨೦೧, ಉಡುಪಿ ಜಿಲ್ಲೆ, ಕರ್ನಾಟಕ

**ಓ ಹೆಣ್ಣೇ, ನೀನಾಗದಿರು ಅಪರಾಧಿ** (ಕೆಲ ಹಂತಕಿಯರ ಅಂತರಂಗ)
*ಡಾ// ಗೌತಮ ಬನಸೋಡೆ*
***ಪುಟ : xix + ೮೬*** ***ಬೆಲೆ : ರೂ. ೧೦೦***
**ಸ್ವಪ್ನ ಬನಸೋಡೆ, ಲುಂಬಿನಿ ಪ್ರಕಾಶನ,** ಹಲ್ಯಾಳ

**ಅವಳ ಸನ್ನಿಧಿಯಲಿ...** (ಪ್ರಕಟಿತ ಆಯ್ದ ಅಂಕಣ ಬರಹಗಳು)
*ಮಲ್ಲಿಕಾರ್ಜುನ ಕಡಕೋಳ*
***ಪುಟ : xii + ೧೪೮*** ***ಬೆಲೆ : ರೂ. ೧೨೫***

**ಫಲ್ಗುಣೆಯಲಿ ಕೇಳಿಬಂದ ರುದ್ರವೀಣೆ** (ಪ್ರಕಟಿತ ಆಯ್ದ ಅಂಕಣ ಬರಹಗಳು) *ಮಲ್ಲಿಕಾರ್ಜುನ ಕಡಕೋಳ*
***ಪುಟ : xx + ೧೬೪*** ***ಬೆಲೆ : ರೂ. ೧೫೦***

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಮಂಜುಶ್ರೀ ಪ್ರಕಾಶನ,** ೧೭೮೪/೨೦, ಮೊದಲನೇ ಮಹಡಿ, ೭ನೇ ಮುಖ್ಯರಸ್ತೆ, ೧೪ನೇ ಕ್ರಾಸ್, ಸಿದ್ಧವೀರಪ್ಪ ಬಡಾವಣೆ, ದಾವಣಗೆರೆ - ೪

**ದಲಿತ ಸಾಹಿತ್ಯ ಸಂಚಯ** *ಸಂಪಾದಕರು :*
*ಡಾ// ಅರ್ಜುನ ಗೊಳಸಂಗಿ, ಡಾ// ಸದಾಶಿವ ದೊಡ್ಡಮನಿ*
***ಪುಟ : vi + ೮೯ = ೯೫*** ***ಬೆಲೆ : ರೂ. ೧೦೦***
**ದಲಿತ ಸಾಹಿತ್ಯ ಪರಿಷತ್ತು, ರಾಜ್ಯ ಘಟಕ, ಗದಗ,** ಹುಡ್ಕೊ ಕಾಲನಿ, ಹುಲಕೋಟಿ - ೫೮೨ ೨೦೫

**ಐ.ವಿ.ಎಫ್. ಇರುವಾಗ ಬಂಜೆತನದ ಅಂಜಿಕೆ ಏಕೆ ?**
*ಡಾ// ಎಂ. ಎಸ್. ಎಸ್. ಮೂರ್ತಿ*
***ಪುಟ : ೮೮*** ***ಬೆಲೆ : ರೂ. ೫೦***
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಸಾಹಿತಿ ಮಾಹಿತಿ ಕೋಶ** ಬಿ. ಜಿ. ಸತ್ಯಮೂರ್ತಿ
***ಪುಟ : ೩೦೦*** ***ಬೆಲೆ : ರೂ. ೨೩೦***
**ಬಿ. ಜಿ. ಸತ್ಯಮೂರ್ತಿ,** ನಂ. ೫೩/೪, ಡಬ್ಲ್ಯೂ, ೨೩ನೇ ಅಡ್ಡರಸ್ತೆ, ಸೋಮೇಶ್ವರ ಬಡಾವಣೆ, (ಕೆಂಪಮ್ಮ ದೇವಸ್ಥಾನದ ಹಿಂದೆ), ಹುಳಿಮಾವು, ಬನ್ನೇರುಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬

**ಮುಚ್ಚಂಜೆಯ ಹೊತ್ತು** (ಕವನ ಸಂಕಲನ) *ಡಾ// ಕೆ. ಬಿ. ಪವಾರ*
***ಪುಟ : ೧೦೪*** ***ಬೆಲೆ : ರೂ. ೬೫***
**ಸುಮುಖ ಪ್ರಕಾಶನ,** ನಂ. ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ಕೆ.ಎಲ್.ಇ. ಕಟ್ಟಿದ ಮಹನೀಯರು** *ಪ್ರೊ// ರಾಮರೆಡ್ಡಿ ಕೆ., ಡಾ// ಎಸ್. ಬಿ. ಹಾಗರಗಿ*
***ಪುಟ : iv + ೫೪*** ***ಬೆಲೆ : ನಮೂದಿಸಿಲ್ಲ***
**ಕೆ. ಎಲ್. ಸಂಸ್ಥೆಯ ಬಸವಪ್ರಭು,** ಕೋರೆ ಮಹಾವಿದ್ಯಾಲಯ, ಚಿಕ್ಕೋಡಿ - ೫೯೧ ೨೦೧

# WáŸ'b¿áã, ¸Oê Eáá¨¿áã

''ಮನುಷ್ಯ ಜೀವನದ ಮುನ್ನಡೆ ಸಾಧಿತವಾಗಿರುವುದು ವಿಜ್ಞಾನ, ಇತಿಹಾಸ ಅಥವಾ ಸಾಮಾಜಿಕ ಕ್ಷೇತ್ರದ ಪ್ರತಿಭಾವಂತ ಕಟಿಬದ್ಧ ವ್ಯಕ್ತಿಗಳು ತಮ್ಮ ಸ್ವಂತ ಹಿತಾಸಕ್ತಿಯನ್ನು ಕಡೆಗಣಿಸಿ, ಪರಿಣಾಮಗಳಿಗೆ ಅಂಜದೆ, ಅನೂಚಾನವಾಗಿ ಸಂಪ್ರದಾಯ ರೂಪದಲ್ಲಿ ಜಾರಿಯಲ್ಲಿರುವ ಹಲವು ಪದ್ಧತಿಗಳನ್ನು ಪ್ರಶ್ನಿಸಿ, ಅವುಗಳಿಗೆ ಆಗಾಗ್ಗೆ ಸವಾಲೆಸೆಯುತ್ತ ಬಂದಿರುವುದರಿಂದ. ಅವುಗಳ ಒಳ ಪದರದಲ್ಲಿ ಅಡಗಿರುವ ಹಲವು ಸ್ವೀಕೃತ ಕಲ್ಪನೆಗಳನ್ನು ಬೆದಕಿ, ಕೆಣಕುವುದರಿಂದ ಅಂಥ ಸಂದರ್ಭಗಳು ಮುನ್ನಡೆ ಸಾಧಿಸುವಲ್ಲಿ ನಿರ್ಣಾಯಕವಾದುವು. ಹಾಗೆಯೇ ಇಂದು ನಮ್ಮ ಇತಿಹಾಸಕಾರರು, ಸಮಾಜ ವಿಜ್ಞಾನಿಗಳು, ರಾಜಕೀಯ ಚಿಂತಕರು, ಮುತ್ಸದ್ದಿಗಳು ಇಂಥ ಕೆಚ್ಚನ್ನು ಹೊರಸೂಸುವ ದಿನಕ್ಕಾಗಿ ನಾನು ಕಾದುಕುಳಿತಿದ್ದೇನೆ.'' – ಈ ಮಾತನ್ನು ಇಂಗ್ಲೆಂಡಿನ ಸುಪ್ರಸಿದ್ಧ ಇತಿಹಾಸಜ್ಞ ಇ. ಎಚ್. ಕಾರ್ 'ವಾಟ್ ಈಸ್ ಹಿಸ್ಟರಿ' ಎಂಬ ಪುಸ್ತಕದಲ್ಲಿ ಬರೆದದ್ದು, ಅರ್ಧ ಶತಮಾನದ ಹಿಂದೆ. ವಿಮಾನ ಕ್ಷೇತ್ರದ ಕೈಗಾರಿಕೆ ಮತ್ತು ಯಾನದ ವಾಣಿಜ್ಯ ಕ್ಷೇತ್ರದ ಒಂದು ಕುತೂಹಲಕಾರಿ ಸುದ್ದಿ ಈ ಮಾತನ್ನು ನೆನಪಿಗೆ ತಂದಿತು. ಅಮೆರಿಕದ ಮಹಿಳೆಯರ ಸರಾಸರಿ ತೂಕ ೧೬೫ ಪೌಂಡು, ಪುರುಷರದು ೧೯೪. ಸುಮಾರು ಅರವತ್ತು ವರ್ಷಗಳ ಹಿಂದೆ ವಿಮಾನದ ಸೀಟುಗಳನ್ನು, ಬೆಲ್ಟುಗಳನ್ನು ೧೭೦ ಪೌಂಡು ತೂಕ ತಡೆದುಕೊಳ್ಳಲು ರಚಿಸಲಾಗಿತ್ತು. ಈಗಲೂ ಅದೇ ಇದೆ. ಈಗ ೧೯೪ ಪೌಂಡಿನ ಭಾರಕ್ಕೆ ಈ ವಿಮಾನದ ಸೀಟುಗಳು ಕ್ಷೇಮಕರವೇ ಎನ್ನುವ ಚರ್ಚೆ ಅವರನ್ನು ಕಾಡುತ್ತಿದೆ. ಬಂಡವಾಳವೇ ಆಗಲಿ, ಶರೀರದ ತೂಕವೇ ಆಗಲಿ, ಒಂದೇ ಕಡೆ ಶೇಖರವಾಗಿ ಬೊಜ್ಜು ಬೆಳೆದರೆ ಅದು ಆರೋಗ್ಯಕ್ಕೆ ಹಿತಕರವಲ್ಲ. ಅದೇ ಕಾರಣ ಅಲ್ಲಿಯ ಆರ್ಥಿಕ ಬಿಕ್ಕಟ್ಟು, ಆರೋಗ್ಯದ ಬಿಕ್ಕಟ್ಟು ಉಂಟಾಗಿರುವುದು.

ಬೊಜ್ಜು ಶರೀರಿ ಕುಳಿತ ಆಸನ ಮುರಿದುಬಿದ್ದಾಗ, ಅವನ ಪಕ್ಕದಲ್ಲಿ ಕುಳಿತವರಿಗೂ ಅಪಾಯವೇ. ಅಮೆರಿಕದ ಆರ್ಥಿಕತೆ ಕುಸಿದರೆ ನಮಗೂ ತೊಂದರೆಯಾಗುವುದಿಲ್ಲವೇ, ಹಾಗೆ. ಅಮೆರಿಕ ಚಿಂತಿಸುವ ಪರಿಹಾರವೂ ಬಂಡವಾಳದ ಮಾದರಿಯದು. ಸೀಟಿನ ಭಾರ ಹೊರುವ ಸಾಮರ್ಥ್ಯವನ್ನು ಹೆಚ್ಚಿಸಿದರೆ ಅದು ವಿಮಾನ ಉದ್ಯಮಕ್ಕೆ ಲಾಭ. ಕೂರುವವನ ಭಾರ ಕಡಿಮೆ ಮಾಡಿಸುವ ಕ್ರಮದಿಂದ ವಾಣಿಜ್ಯಕ್ಕೆ ಏನು ಲಾಭ ? ಖಾಯಿಲೆ ಹೆಚ್ಚಿದಷ್ಟು ಔಷಧಿ ಕೈಗಾರಿಕೆಗೆ ಲಾಭ ಹೆಚ್ಚು. ಈ ಮಾರ್ಗ ಜನತೆಯನ್ನು ಎತ್ತ ಒಯ್ಯುತ್ತದೆ ಎಂದು ಹೇಳಬೇಕೆ ? ನಾವು ಅವರನ್ನು ಅನುಕರಿಸಬೇಕೆ ?

ವಿಮಾನದ ಸೀಟಿನ ಭಾರ ಹೊರುವ ಸಾಮರ್ಥ್ಯ ಹೆಚ್ಚಿಸುವುದರಿಂದ, ವಿಮಾನದ ಬೆಲೆ ಹೆಚ್ಚಾಗುತ್ತದೆ. ಆಗ ವಿಮಾನಯಾನ ದುಬಾರಿಯಾಗುತ್ತದಲ್ಲ ಎನ್ನುವ ಚಿಂತೆ ಯಾನ ನಡೆಸುವ ಕಂಪನಿಯದು ಇಷ್ಟಕ್ಕೂ ಅವರೇಕೆ ತಲೆಕೆಡಿಸಿಕೊಳ್ಳಬೇಕು ? ಅವರು ಕಾನೂನಿನಂತೆ ನಡೆದುಕೊಂಡರೆ ಆಯ್ತು. ಅಂದರೆ ಈಗಾಗಲೇ ಇರುವ ಭಾರ ಹೊರುವ ವಿಷಯಕ ಕಾನೂನಿನಂತೆ ನಡೆದುಕೊಳ್ಳುವುದಷ್ಟೆ ಅವರ ಕೆಲಸ. ಏನಾದರೂ ಆಕಸ್ಮಿಕ ನಡೆದರೆ ಆಗ ವಿಮೆ ಕಂಪನಿ ಇದ್ದೇ ಇದೆಯಲ್ಲಾ, ನಷ್ಟ ಕಟ್ಟಿಕೊಡಲು ! ಅದು ಅಂತಿಮವಾಗಿ ಜನತೆ ಹೊರುವ ಖರ್ಚು ಎನ್ನುವುದರಿಂದ ಅದಕ್ಕೇನು ?

ಈ ಸುದ್ದಿಯ ಸ್ವಾರಸ್ಯ ಇಲ್ಲಿಗೇ ನಿಲ್ಲುವುದಿಲ್ಲ. ವಿಮಾನ ಹಾರುವಾಗ ಒಟ್ಟಾರೆ ಇಷ್ಟು ಭಾರವಿರಬೇಕು. ಜನರ ತೂಕ ಜಾಸ್ತಿ ಇದ್ದರೆ ಆಗ ಅದು ಕಡಿಮೆ ಸಂಖ್ಯೆಯಲ್ಲಿ ಜನರನ್ನು ಕೊಂಡೊಯ್ಯಬೇಕು. ವಿಮಾನದ ಸೀಟಿಗೆ ಚಿಕಿತ್ಸೆ ನೀಡುವ ಬದಲು, ನಿಯಮ ರೂಪಿಸುವವರು ಮಾಡಿದ್ದು, ಪ್ರಮಾಣಿಕರ ಸಂಖ್ಯೆ ಎಷ್ಟು ಎಂದು ಲೆಕ್ಕ ಹಾಕುವಾಗ, ಪುರುಷನ ತೂಕವನ್ನು ೨೦೦ ಪೌಂಡೆಂದೂ, ಮಹಿಳೆಯ ತೂಕವನ್ನು ೧೭೯ ಪೌಂಡೆಂದೂ ಲೆಕ್ಕ ಹಾಕಿ ಎಂದಿತು ಬದಲಾದ ನಿಯಮ. ಅಂದರೆ ವಿಮಾನ ಒಯ್ಯಬಹುದಾದ ಪ್ರಮಾಣಿಕರ ಸಂಖ್ಯೆ ಕಡಿಮೆ ಆಯ್ತು. ಅಂದರೆ ವಿಮಾನಯಾನದ ದರವನ್ನು ಏರಿಸದೆ ವಿಧಿಯಿಲ್ಲ. ಅದರಿಂದ ನಷ್ಟವೇ ? ನಷ್ಟವೂ ಆಗಬಹುದು. ಅಂದರೆ ವ್ಯಾಧಿಯ ಮೂಲಕ್ಕೆ ಚಿಕಿತ್ಸೆ ಮಾಡದೆ, ಮೇಲ್ಪದರದಲ್ಲಿ ಚಿಕಿತ್ಸೆ ಮಾಡುತ್ತಾ ಹೋದರೆ, ರೋಗಿಯನ್ನು ಬಿಟ್ಟು ಮಿಕ್ಕೆಲ್ಲರಿಗೂ ಲಾಭ; ಸಮಸ್ಯೆ ಸಂಕೀರ್ಣವಾಗುತ್ತಾ ಹೋದಷ್ಟು ಬಂಡವಾಳಕ್ಕೆ ಲಾಭ ಹೆಚ್ಚುತ್ತಾ ಹೋಗುತ್ತದೆ. ಪ್ರಯಾಣಿಕರಿಗೆ ತೊಂದರೆ ಮಾತ್ರ ತಪ್ಪಿದ್ದಲ್ಲ, ಕಾರಣ ಅದೇ ಶರೀರ, ಅದೇ ಸೀಟು; ಮುರಿದರೆ ಅಪಾಯ ತಪ್ಪಿದ್ದಲ್ಲ. ಅಮೆರಿಕದ ಜನಸಂಖ್ಯೆಯಲ್ಲಿ ಮೂರರಲ್ಲಿ ಒಂದು ಭಾಗ ಅತಿ ಭಾರ ಇರುವವರು. ತಮ್ಮ ಅತಿಭಾರವನ್ನು ಸಹಜವೆಂದು ಸ್ವೀಕರಿಸಬೇಕೆಂದು ಒತ್ತಾಯಿಸುವ ಸಂಘಗಳಿವೆ. ಹಾಗೆಯೇ ತಮ್ಮನ್ನು ಅಂಗವಿಕಲರು ಎಂದು ಪರಿಗಣಿಸಿ, ಕೆಲವು, ವಿಶೇಷ ಸವಲತ್ತುಗಳನ್ನು ನೀಡಬೇಕೆಂಬ ದನಿಯೂ, ಒತ್ತಾಯವೂ ಇವೆ. ಇದಕ್ಕೆ ಸೂಕ್ತ ಪರಿಹಾರವೆಂದರೆ ಸಹಜವಾಗಿ ಅತಿ ಭಾರವನ್ನು ಸರಿಪಡಿಸುವ ಆರೋಗ್ಯ ಕ್ಷೇತ್ರದ ಸುಧಾರಣೆಗಳು.

ಜಂಕ್ ಫುಡ್‌ಗಳಿಗೆ ತಡೆಹಾಕಬೇಕು. ಕೋಕಾಕೋಲ, ಪೆಪ್ಸಿಯನ್ನು ನಿಷೇಧಿಸುವುದು, ಮ್ಯಾಕ್‌ಡೊನಾಲ್ಡ್ ಕದ ಮುಚ್ಚುವುದು, ಅವರ ಮೇಲೆ ಆರೋಗ್ಯದ ತೆರಿಗೆ ವಿಧಿಸುವುದು... ಮುಂತಾದುವು. ಶಾಲೆಗಳಲ್ಲಿ ಚಿಕ್ಕಮಕ್ಕಳಿಗೆ ಈ ಕುರಿತು ಶಿಕ್ಷಣ ನೀಡುವುದು ಬಹಳ ಮುಖ್ಯ. ಆದರೆ ಇದ್ಯಾವುದರಲ್ಲೂ ಬಂಡವಾಳಕ್ಕೆ, ಉದ್ದಿಮೆಗೆ ಲಾಭವಿಲ್ಲ. ಅದು ಸೂಚಿಸುವ ಪರಿಹಾರವೂ ಮತ್ತಷ್ಟು ಲಾಭ ತರುವಂಥದೇ.

ಗುಬ್ಬಚ್ಚಿಯನ್ನು ಹಿಡಿಯುವುದು ಹೇಗೆ ? ಏಕೆ ಹಿಡಿಯಬೇಕು ? ಎಂದು ಕೇಳಿದರೆ ನನ್ನ ಬಳಿ ಉತ್ತರವಿಲ್ಲ. ಹಿಡಿಯಬೇಕು ಅಂದರೆ ಮಾರ್ಗವೇನು ? ಎಷ್ಟೆಷ್ಟೋ ಇವೆ ಸುಗಮವಾದುವು, ಸಾಧ್ಯವೆನಿಸುವುವು. ಆದರೆ ಬಂಡವಾಳದ ವ್ಯವಸ್ಥೆ ಸೂಚಿಸುವ ಮಾರ್ಗ : ಒಂದು ಮುದ್ದೆ, ಬೆಣ್ಣೆ ಕೊಂಡು, ಅದನ್ನು ಗುಬ್ಬಚ್ಚಿಯ ತಲೆಯ ಮೇಲೆ ಇಡಬೇಕು, ಅದು ಕರಗಿ, ಹರಿದು, ಗುಬ್ಬಚ್ಚಿಯ ಕಣ್ಣು ಮುಚ್ಚುತ್ತದೆ; ಆಗ ಗುಬ್ಬಚ್ಚಿಯನ್ನು ಸುಲಭವಾಗಿ ಹಿಡಿದುಬಿಡಬಹುದು. ಪ್ರಯತ್ನಿಸಿ ನೋಡಿ ! ಪ್ರೊಕ್ರೆಸ್ಟಿಯನ್ ಬೆಡ್ ಎನ್ನುವ ಮಾತು ಜ್ಞಾಪಕಕ್ಕೆ ಬರುತ್ತದೆ. ಅವನು ಒಂದು ಹೋಟೆಲ್ ಇಟ್ಟಿದ್ದ. ಬಂದ ಗ್ರಾಹಕರಿಗೆ ಅವರ ಉದ್ದಕ್ಕೆ, ತಕ್ಕಂತೆ ಹಾಸಿಗೆ ನೀಡದೆ, ಒಂದೇ ಉದ್ದ-ಅಗಲದ ಹಾಸಿಗೆ ಎಲ್ಲರಿಗೂ ನೀಡುವುದು ಅವನ ಕ್ರಮ. ಅವರು ಹಾಸಿಗೆಯ ಉದ್ದಕ್ಕೆ ಕುಳ್ಳರಾದರೆ ಅವರನ್ನು ಉದ್ದವಾಗುವ ವರೆಗೆ ಹಿಗ್ಗಿಸುವುದು ಅಥವಾ ಅದಕ್ಕಿಂತ ಹೆಚ್ಚು ಉದ್ದದವನಾದರೆ, ಅವನ ಕಾಲನ್ನು ಹಾಸಿಗೆಗೆ ತಕ್ಕಂತೆ ಕಡಿಯುತ್ತಿದ್ದ. ಇದೊಂದು ಕಥೆ. ಆದರೆ ಇದು ಇಂದಿನ ಬಂಡವಳಿಗರ ರೀತಿ ನಮ್ಮನ್ನು ಸುಮ್ಮನೆ ನಮ್ಮಷ್ಟಕ್ಕೆ ಇರಲೂ ಬಿಡುವುದಿಲ್ಲ. ಬಿಟ್ಟಿದ್ದರೆ ಹಾಸಿಗೆಯಷ್ಟಕ್ಕೆ ಕಾಲು ಚಾಚಬಹುದಿತ್ತು.

**ಕೆ. ಎಸ್. ಪಾರ್ಥಸಾರಥಿ**
ನಂ. ३೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭



# ಕನ್ನಡದ ಸಂತ ಕವಿ ಶಿಶುನಾಳ ಶರೀಫ

ಗುಂಡೀಗೆರೆ ವಿಶ್ವನಾಥ

**ಹೆ**ಸರೇ ಸೂಚಿಸುವಂತೆ ಶಿಶುನಾಳ ಶರೀಫರು ಧಾರವಾಡ ಜಿಲ್ಲೆಯ ಶಿಗ್ಗಾಂವಿ ತಾಲ್ಲೂಕಿನ ಶಿಶುನಾಳ ಗ್ರಾಮದವರು. ಈ ಗ್ರಾಮ ಪುಣೆ-ಬೆಂಗಳೂರು ರೈಲುಮಾರ್ಗದ ಮೇಲಿರುವ ಗುಡಗೇರಿ ನಿಲ್ದಾಣದ ಪಶ್ಚಿಮಕ್ಕೆ ನಾಲ್ಕು ಮೈಲುಗಳ ಅಂತರದಲ್ಲಿದೆ. ಚಾರಿತ್ರಿಕವಾಗಿ ಅಷ್ಟೊಂದು ಮಹತ್ವ ಪಡೆಯದ ಈ ಗ್ರಾಮ ಹತ್ತೊಂಭತ್ತನೆಯ ಶತಮಾನದಲ್ಲಿ ಆಗಿಹೋದ ಶರೀಫರಿಂದಾಗಿ ಹೆಚ್ಚು ಪ್ರಚಾರದಲ್ಲಿದೆ.

ಇಲ್ಲಿ ಹುಟ್ಟಿ ಬೆಳೆದ ಶರೀಫರು ಇಂದು ಕರ್ನಾಟಕದಾದ್ಯಂತ ಸಂತಕವಿ, ಶ್ರೇಷ್ಠ ದಾರ್ಶನಿಕ, ತತ್ವಪದಕಾರ, ತತ್ವಜ್ಞಾನಿ, ಕಾಲಜ್ಞಾನಿ ಎಂದೇ ಪ್ರಸಿದ್ಧರಾಗಿದ್ದಾರೆ. ತಮ್ಮ ತತ್ವಪದ ರಚನೆಗಳಿಂದ ಮನೆಮಾತಾಗಿರುವ ಶರೀಫರು ತಮ್ಮ ಕಿರಿಯ ವಯಸ್ಸಿನಲ್ಲಿ ಅಪಾರ ಜೀವನಾನುಭವದಿಂದ ಅನುಭಾವಿ ನೆಲೆಗೆ ನಿಂತು ತತ್ವಪದಗಳನ್ನು ರಚಿಸಿದವರು.

ಚಿಕ್ಕ ವಯಸ್ಸಿನಲ್ಲಿ ತನ್ನ ತಂದೆ ತಾಯಂದಿರ ಲಾಲನೆ-ಪಾಲನೆಯಲ್ಲಿ ಬೆಳೆದ ಶರೀಫರು ಬಾಲ್ಯಾವಸ್ಥೆ ತಲುಪಿದೊಡನೆ ಸ್ಥಳೀಯ ಕೂಲಿಮಠದ ಸಿದ್ಧರಾಮಯ್ಯನವರಲ್ಲಿ ವಿದ್ಯಾಭ್ಯಾಸ ಆರಂಭಿಸಿದರು. ಓದು-ಬರಹ ಕಲಿಯುವುದರ ಜೊತೆಗೆ ಶರಣ ಸಾಹಿತ್ಯದ ವಿಚಾರಗಳನ್ನು ಅರಿತುಕೊಂಡು ಪ್ರಭಾವಿತರಾದ ನಂತರ ಕಳಸದ ಗೋವಿಂದಭಟ್ಟರ ಬಳಿ ಶಿಷ್ಯರಾಗಿ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದು ಅವರಿಗೆ ಶರಣಾದರು.

ತಂದೆ ತಾಯಿಯರ ಅಪೇಕ್ಷೆಯಂತೆ ನೆರೆಯ ಕುಂದುಗೋಳದ ಫಾತೀಮಾಳನ್ನು ಕೈಹಿಡಿದು ಸಂಸಾರ ಬಂಧನದಲ್ಲಿ ಸಿಲುಕಿದ ನಂತರ ವರ್ಷಾರು ತಿಂಗಳಲ್ಲಿ ಮಗಳ ತಂದೆಯಾದರು. ತಂದೆ ತಾಯಿಯರ ಆಶ್ರಯ, ಮೋಹದ ಮಡದಿಯ ಪ್ರೀತಿ ವಿಶ್ವಾಸ, ಮಮತೆಯ ಮಗಳ ಸವಿಮಾತುಗಳಿಂದಾಗಿ ಶರೀಫರು ಸಂಸಾರ ಸಾಗರದ ನೆರೆತೊರೆಗಳಲ್ಲಿ ಸುಖದ ಸೆರೆ ಹಿಡಿದು ನಲಿದಾಡಿದರು. ಆದರೆ ಇದು ಹೆಚ್ಚು ದಿವಸ ಉಳಿಯಲಿಲ್ಲ. ವೃದ್ಧಾಪ್ಯದಿಂದ ತಂದೆ ತಾಯಿ ಇಬ್ಬರೂ ಮರಣಿಸಿದ ಅಲ್ಪಕಾಲದಲ್ಲಿಯೇ ಮುದ್ದುಮಗಳು ಕಾಲರಾಗೆ ಬಲಿಯಾದಳು. ಮುದ್ದುಮಗಳ ಮರಣದಿಂದ ಪತ್ನಿ ಫಾತೀಮಾ ಧೃತಿಗೆಟ್ಟು ದುಃಖಿಸಿದರು. ಇದನ್ನರಿತ ಶರೀಫರು ತನ್ನ ಮಡದಿಯನ್ನು ತವರುಮನೆಗೆ ಕಳುಹಿಸಿದ್ದಾಗ್ಯೂ ಮಗಳ ಮರಣದ ಚಿಂತೆಯಲ್ಲಿ ಪತ್ನಿಯೂ ಮಗಳ ಹಾದಿ ಹಿಡಿದರು.

ಇಲ್ಲಿಂದ ಸಂಸಾರ ಸುಖ, ಲೌಕಿಕ ತೃಪ್ತಿ, ಇವು ನೀರಮೇಲಣ ಗುಳ್ಳೆಯಂತೆ ಕ್ಷಣ ಭಂಗುರವಾದುವು ಎಂಬ ನಿತ್ಯ ಸತ್ಯವನ್ನು ಅರಿತ ಶರೀಫರು ಗುರು ಗೋವಿಂದಭಟ್ಟರಲ್ಲಿ ಪರಿಪೂರ್ಣ ಶಿಷ್ಯರಾಗಿಬಿಟ್ಟರು. ಆನಂತರ ಗುರುಬೋಧೆಯಂತೆ ಜೀವನದ ತಾತ್ವಿಕತೆಯನ್ನು ಅರಿತು ಜೀವನ, ಸಮಾಜ, ಆದರ್ಶ, ಶಿಕ್ಷಣ ಮುಂತಾದ ನಾನಾ ಕ್ಷೇತ್ರಗಳ ವಿಷಯಗಳ ಕುರಿತಂತೆ ತತ್ವಪದಗಳನ್ನು ರಚಿಸತೊಡಗಿದರು. ಈ ಪದಗಳು ಇಂದಿಗೂ ಜನಮಾನಸದಲ್ಲಿ ನೆಲೆಯೂರಿ ಶಿಶುನಾಳ ಶರೀಫರಿಗೆ ನಾಡಿನ ಸಾಹಿತ್ಯ ಚರಿತ್ರೆಯಲ್ಲಿ, ತತ್ವಪದಕಾರರ ಇತಿಹಾಸದಲ್ಲಿ, ಸಂತಕವಿಗಳ ಸಾಲಿನಲ್ಲಿ ಶಾಶ್ವತ ಸ್ಥಾನ ಕಲ್ಪಿಸಿಕೊಟ್ಟಿವೆ. ಶರೀಫರ ವ್ಯಕ್ತಿತ್ವ ಅಸಾಧಾರಣವಾದುದು. ಅದರ ವಿಶ್ಲೇಷಣೆ ಮತ್ತು ನಿರೂಪಣೆ ಬಣ್ಣನೆಗೆ ನಿಲುಕದ ವಿಷಯ. ಇವರು, ಕೇವಲ ತತ್ವಪದಕಾರರಲ್ಲ, ಸಂತಕವಿ, ಅನುಭಾವಿ, ಸಮಾಜ ಸುಧಾರಕ, ವಿಚಾರವಾದಿ, ತತ್ವಜ್ಞಾನಿ, ಸಮಾಜದ ದಾರ್ಶನಿಕ, ಹೀಗೆ ಹತ್ತು ಹಲವು ಹೆಸರುಗಳಿಗೆ ಭಾಜನರು. ಗುರುವಿನ ಬಗ್ಗೆ ಅಪಾರ ಪ್ರೀತಿವಾತ್ಸಲ್ಯ ಮೆರೆವ ಶರೀಫರು 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎನ್ನುವಂತೆ ಗುರುವನ್ನೇ ಸುಜ್ಞಾನದ ಬೆಳಕು ನೀಡುವ ನಿಜವಾದ ದೇವರೆಂದು ನಂಬಿದವರು.

*ನಂಬಿದೆನಯ್ಯಾ, ನಿನ್ನ ಸದ್ಗುರು ರಾಯ*
*ರಕ್ಷಿಸು ಎನ್ನ ಪ್ರಿಯಾ*
*ನಂಬಿಕೆ ನಾ ನಿನ್ನ ಶಂಭು ರಕ್ಷಿಸು ಎನ್ನ*
*ಕುಂಭಿನಿಯೊಳು ಬಿಡದೆ ತುಂಬಿ ತುಳುಕುತಿರುವೆ*

– ಎಂದು ಗುರುಧ್ಯಾನ ಮಾಡುತ್ತಾರೆ. ಇವರ ತತ್ವಪದಗಳು ಸಮಾಜ ಶಿಕ್ಷಣ, ವ್ಯಕ್ತಿತ್ವ, ರೋಗ-ರುಜಿನ, ಸಾರಿಗೆ-ಸಂಪರ್ಕ, ಮನುಷ್ಯನ ಅಜ್ಞಾನ, ಆಸೆಬುರುಕುತನ ಮುಂತಾದ ಹತ್ತು ಹಲವು ವಿಷಯಗಳನ್ನೊಳಗೊಂಡಿವೆ. ಪ್ರತಿ ಪದ್ಯವನ್ನು, ತತ್ವಪದಗಳನ್ನು ಒಂದೊಂದು ಪ್ರಬಂಧದ ವಿಷಯವಾಗಿ ವಿವರಿಸಬಹುದು. ಇವರ ಪ್ರಸಿದ್ಧ ತತ್ವಪದ :

*ತರವಲ್ಲ ತಗಿ ನಿನ್ನ ತಂಬೂರಿ*
*ಸ್ವರ ಬರದೆ ಬಾರಿಸದಿರು ತಂಬೂರಿ*
*ಸರಸ ಸಂಗೀತದ ಕುರುಹುಗಳರಿಯದೆ*
*ಕರದೊಳ್ಹಿಡಿಬ್ಯಾಡ ತಂಬೂರಿ*

ಈ ತತ್ವಪದದಲ್ಲಿ ತಂಬೂರಿ ಕೇವಲ ವಾದ್ಯವಾಗದೆ ಬದುಕಿನ ಹದದ ಪ್ರತಿಮಾತ್ಮಕ ಸಂಕೇತವಾಗಿ ಈ ಬದುಕು ತಂಬೂರಿ ಇದ್ದ ಹಾಗೆ, ಇದನ್ನು ಸರಿಯಾಗಿ ಅರಿತು, ನುಡಿಸಬೇಕು-ಬಾಳಿಸಬೇಕು- ಬದುಕಬೇಕು, ಈ ಬದುಕಿನ ಸುಖ-ದುಃಖ, ನೋವು-ನಲಿವುಗಳ, ಸರಸ-ಸಂಗೀತ ಚಿಹ್ನೆಗಳನ್ನು ಅರಿತು ಹಿಡಿಯಬೇಕು ಎಂದು ಧ್ವನಿಪೂರ್ವಕವಾಗಿ ಹೇಳುತ್ತಾರೆ. ಮತ್ತೊಂದು ಪದ್ಯದಲ್ಲಿ ಹೀಗೆ ಹೇಳುತ್ತಾರೆ :

*ಗುಡಿಯ ನೋಡಿರಣ್ಣ ದೇಹದ*
*ಗುಡಿಯ ನೋಡಿರಣ್ಣ*
*ಗುಡಿಯ ನೋಡಿರಿದು*
*ಪೊಡವಿಗೆ ಒಡೆಯನು*
*ಅಡಗಿಕೊಂಡು ಕಡು ಬೆಡಗಿನೊಳಿರುತಿಹ*

ಈ ಪದ್ಯದಲ್ಲಿ ವಚನಕಾರರ ದೇಹವೇ ದೇಗುಲ ಎಂಬ ಪರಿಕಲ್ಪನೆಯನ್ನು ಸೂಚಿಸುತ್ತಾರೆ.

ಈ ಬದುಕು ಹಲವು ಚಿಂತೆಗಳ ಸಂತೆ. ಇಂತಹ ಸಂತೆಯಲ್ಲಿ ನೂರೆಂಟು ಚಿಂತೆಗಳು ಬರುವುದು ಸಹಜ. ಈ ಚಿಂತೆಯ ಬದುಕಿನಲ್ಲಿ ಶರೀಫರು ಈ ರೀತಿ ಮಾರ್ಗದರ್ಶನ ನೀಡುತ್ತಾರೆ.



*ನಿಶ್ಚಿಂತನಾಗಬೇಕಂತಿ ಬಹು*
*ದುಃಶ್ಚಿಂತೆಯೊಳಗೆ ನೀ ಕುಂತಿ*
*ಯಾಕೋ ಎಲ್ಲೋ ನಿನಗೀ ಭ್ರಾಂತಿ*
*ನಾಳೆಗಾಗುವದೀಗಂತಿ*

ಈ ಬದುಕು ಎಂದೂ ಮನುಷ್ಯನನ್ನು ನಿಶ್ಚಿಂತೆಯಿಂದ ಇರಲು ಬಿಡುವುದಿಲ್ಲ. ಮನುಷ್ಯನಿಗೆ ನೆಮ್ಮದಿ ಎನ್ನುವುದು ಯಾರೂ ದುಡ್ಡುಕೊಟ್ಟು ತಂದುಕೊಡಲಾಗದ ವಸ್ತು. ಆದರೆ ಈ ನೆಮ್ಮದಿಯನ್ನು ನಾವು ಕಂಡುಕೊಳ್ಳಬೇಕಷ್ಟೆ. ಅದಕ್ಕೆ ಶರೀಫರು, ''ನಿಶ್ಚಿಂತನಾಗಬೇಕಂತಿ ಬಹು ದುಃಶ್ಚಿಂತೆಯೊಳಗೆ ನೀ ಕುಂತಿ'' ಎನ್ನುತ್ತಾರೆ. ಈ ದೇಹ ಮಣ್ಣಿಗೆ ಹೋಗುವ ತನಕ ಒಂದಲ್ಲಒಂದು ಚಿಂತೆಯೊಳಗೆ ಮುಳುಗಬೇಕು. ಆ ನೆರೆತೊರೆಗಳನ್ನು ಈಸಬೇಕು ಎನ್ನುತ್ತಾರೆ.

ಈ ಬದುಕು ಸಾಹಿತ್ಯದ ವಸ್ತು ಎನ್ನುವುದು ಈಗಾಗಲೇ ಗೊತ್ತಿರುವ ಸಂಗತಿ. ಅದನ್ನೇ ಶರೀಫರು, ''ಬದುಕಿನಲ್ಲಿ ನೂರಾರು ಜನ ಬಂದರು ಹೋದರು. ಸಾಕಷ್ಟು ಬರೆದು ಹೋದರು. ಆದರೆ ಬದುಕು ವಿಶಾಲವಾದದ್ದು. ಬರೆದಷ್ಟು ಬರೆಸುತ್ತದೆ. ಬದುಕಿನ ಬರಹಕ್ಕೆ ಕೊನೆ ಎಂಬುದಿಲ್ಲ'' ಎನ್ನುತ್ತಾ,

*ಬರಕೋ ಪದ ಬರಕೋ*
*ಇದರನ್ವಯ ತಿಳಕೋ*
*ಸದಮಲ ಜ್ಞಾನದ ಕುದಿ ಉಕ್ಕಿ ಬರುವಾಗ*
............................

''ಬಗೆದಷ್ಟು ಬರುವ ಬತ್ತದ ತೊರೆ ಈ ಬದುಕು. ಆದ್ದರಿಂದ ನಿನಗೆ ಬೇಕಾದ್ದನ್ನ ನೀ ಬರಕೋ, ಆದರೆ ಈ ಬದುಕಿನಲ್ಲಿ ಅದರನ್ವಯ ನೀ ತಿಳಕೋ'' ಎನ್ನುತ್ತಾರೆ. ಅದರಲ್ಲೂ ಒಳ್ಳೆಯ ಜ್ಞಾನದ ಕುದಿ ಉಕ್ಕಿ ಬರುವಾಗ ನೀ ಬೇಡ ಎನ್ನಬೇಡ. ನೀ ತಡೆಯಬೇಡ'' ಎನ್ನುತ್ತಾರೆ.

ಹೀಗೆ ಶರೀಫರು ಅದಮ್ಯ ಜೀವನ ದರ್ಶನವನ್ನು



ಮಂಡಿಸುತ್ತ, ಈ ಸಮಾಜದ ನೀತಿ-ಅನೀತಿಗಳ ಕುರಿತು ವಿಡಂಬನೆ ಮಾಡುತ್ತ ಒಳಿತು-ಕೆಡುಕುಗಳ ವಿಮರ್ಶಿಸುತ್ತಾ,

*ನನ್ನೊಳಗೆ ನಾ ತಿಳಕೊಂಡೆ*
*ನನಗೆ ಬೇಕಾದ ಗಂಡನ ಮಾಡಿಕೊಂಡೆ*

– ಎಂದು ಹೇಳುತ್ತಲೆ ''ಗುರು ಗೋವಿಂದನ ಪಾದ ಹಿಡಕೊಂಡೆ'' ಎಂದು ಗುರುವನ್ನು ನೆನೆಯುತ್ತಾರೆ. ಶಿಶುನಾಳದ ಅಧೀಶನಾಗಿ ಶಿಶುನಾಳಧೀಶನಾಗಿ ಕಾವ್ಯ ರಚಿಸಿದ ಶರೀಫರು ಈ ನಾಡಿನ ಖ್ಯಾತ ಮೇರು ಸಂತ ಕವಿ.

ಇವರು ಬರೆದಿರುವ ಕಾವ್ಯವನ್ನು ತತ್ವಪದ, ದಂಡಕ ಕಾಲಜ್ಞಾನ, ಲಾವಣಿ, ಹೋಳಿಪದ, ಮಂಗಳಾರತಿ, ರಿವಾಯತ್... ಮುಂತಾದ ಪ್ರಕಾರಗಳಾಗಿ ವಿಂಗಡಿಸಬಹುದು.

ಶರೀಫರು ಈ ನಾಡಿನ ಆಗಿಹೋದ ಸಂತ. ತಮ್ಮ ರಚನೆಗಳಿಂದ ಇಂದಿಗೂ ಜೀವಂತ ಉಳಿದಿದ್ದಾರೆ. ಜಾತಿ, ಧರ್ಮ, ಮತ-ಕಾಲಗಳ ಸೋಗಿಲ್ಲದೆ, ಈ ಬದುಕಿನ ಹಲವು ಮಗ್ಗುಲುಗಳ ಕುರಿತು ಕಾವ್ಯ ರಚಿಸಿ ನಾಡಿನಾದ್ಯಂತ 'ಸಂತ ಕವಿ' ಎಂದು ಶ್ರೇಷ್ಠರಾಗಿದ್ದಾರೆ.

**ಗುಂಡೀಗೆರೆ ವಿಶ್ವನಾಥ**
ನಂ. ೧೪/೨, 'ಗಿರಿಧನ್ಯ', ೪ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ, ಭೈರವೇಶ್ವರನಗರ, ನಾಗರಭಾವಿ ರಸ್ತೆ, ಬೆಂಗಳೂರು - ೫೬೦ ೦೭೨






ಕರ್ನಾಟಕ ಲೇಖಕಿಯರ ಸಂಘದ ಸಹಯೋಗದೊಂದಿಗೆ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ನವಕರ್ನಾಟಕ ಪ್ರಕಾಶನದ 'ವನಿತಾ ಚಿಂತನ ಮಾಲೆ'ಯ ಮೂರು ಪುಸ್ತಕಗಳು ಲೋಕಾರ್ಪಣೆಗೊಂಡವು. ಜ್ಯೋತ್ಸ್ನಾ ಕಾಮತ್ ಕೊಂಕಣಿಯಲ್ಲಿ ಬರೆದು ಡಾ॥ ಗೀತಾ ಶೆಣೈ ಅನುವಾದಿಸಿದ 'ಕಮಲಾದೇವಿ ಚಟ್ಟೋಪಾಧ್ಯಾಯ' ಹಾಗೂ ನಾಗಮಣಿ ಎಸ್. ರಾವ್ ಬರೆದ 'ಸ್ತ್ರೀಪಥ' ಮತ್ತು 'ಧೀಮತಿಯರು' ಕೃತಿಗಳನ್ನು ಲೋಕಾರ್ಪಣೆ ಮಾಡಿ ಸಭೆಯ ಅಧ್ಯಕ್ಷತೆಯನ್ನು ವಹಿಸಿದವರು ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ. ಡಾ॥ ಮಂಗಳಾ ಪ್ರಿಯದರ್ಶಿನಿ ಕೃತಿ ಪರಿಚಯ ಮಾಡಿಕೊಟ್ಟರು. ಇದೇ ಸಮಾರಂಭದಲ್ಲಿ ಕರ್ನಾಟಕದ ಹಿರಿಯ ಲೇಖಕಿಯರನ್ನು ಆತ್ಮೀಯವಾಗಿ ಸನ್ಮಾನಿಸಿ ಗೌರವಿಸಲಾಯಿತು. ಚಿತ್ರದಲ್ಲಿ ಡಾ॥ ವಸುಂಧರಾ ಭೂಪತಿ, ಡಾ॥ ಜ್ಯೋತ್ಸ್ನಾ ಕಾಮತ್, ಡಾ॥ ಮಂಗಳಾ ಪ್ರಿಯದರ್ಶಿನಿ, ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ, ಶ್ರೀಮತಿ ನಾಗಮಣಿ ಎಸ್. ರಾವ್, ಡಾ॥ ಗೀತಾ ಶೆಣೈ ಹಾಗೂ ಶ್ರೀ ಆರ್. ಎಸ್. ರಾಜಾರಾಮ್. ಇನ್ನೊಂದು ಚಿತ್ರದಲ್ಲಿ ಸನ್ಮಾನಿತರಾದ ಲೇಖಕಿಯರು ಮತ್ತು ವೇದಿಕೆಯಲ್ಲಿನ ಗಣ್ಯರು.



# ಶಿಕ್ಷಕನ ಮೌಲ್ಯ ಕುಸಿಯುತ್ತಿದೆಯೆ ?

ಎಲ್ಲ ಕಾಲದಲ್ಲೂ, ಎಲ್ಲ ದೇಶಗಳಲ್ಲೂ, ಎಲ್ಲ ಸಂಸ್ಕೃತಿಗಳಲ್ಲೂ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಹೇಗೇ ಇರಲಿ, ಒಳ್ಳೆಯ ಶಿಕ್ಷಕರಿಗೆ ವಿಶೇಷವಾದ ಮನ್ನಣೆಯಿದೆ; ಅಪಾರ ಮೌಲ್ಯವಿದೆ. ಆ ಮೌಲ್ಯದಲ್ಲಿ ಆಗೊಮ್ಮೆ ಈಗೊಮ್ಮೆ ಒಂದಿಷ್ಟು ಕುಸಿತ ಆಗಬಹುದು. ಇದಕ್ಕೆ ಸಂಸ್ಕೃತಿ ಭ್ರಷ್ಟ, ಭೋಗಾಸಕ್ತ ಸಮಾಜ ಕಾರಣ; ಆಳುವ ಸರಕಾರಗಳು ಕಾರಣ. ಶಿಕ್ಷಕರೆಂದರೆ ತಮ್ಮ ಮಕ್ಕಳಿಗೆ ಪಾಠ ಹೇಳುವ ಪರಿಚಾರಕರು ಎಂದು ಭಾವಿಸುವ ಪೋಷಕರು ಕಾರಣ ಮತ್ತು ತಮ್ಮ ಮೌಲ್ಯವೇನೆಂಬುದನ್ನು ಸರಿಯಾಗಿ ಪರಿಭಾವಿಸದೆ ಅನ್ಯರ ಅನುಕರಣೆ ಮಾಡಹೊರಟು ಪಥಭ್ರಷ್ಟರಾದ ಶಿಕ್ಷಕರೇ ಕಾರಣ. ನಿಜವಾದ ಅರ್ಥದಲ್ಲಿ ಜ್ಞಾನದ ತವನಿಧಿಯಾಗಿರುವ ಶಿಕ್ಷಕ ಎಂದೆಂದಿಗೂ ಬಹುಮೂಲ್ಯನೇ, ಬಹುಮಾನ್ಯನೇ.

‘ಗುರುಬ್ರಹ್ಮ ಗುರುವಿಷ್ಣುಃ ಗುರು ದೇವೋ ಮಹೇಶ್ವರಃ ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರುವೇ ನಮಃ’, ‘ಮಾತೃದೇವೋಭವ, ಪಿತೃದೇವೋ ಭವ, ಆಚಾರ್ಯದೇವೋಭವಃ’, ‘ಅಜ್ಞಾನಾಂಧಕಾರವನ್ನು ಜ್ಞಾನಾಂಜನ ಶಲಾಕೆಯಿಂದ ಕಣ್ಣು ತೆರೆಸುವ ಗುರುವಿಗೆ ನಮನ’, ‘ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ’, ‘ಭಾರತದ ಭವಿತವ್ಯ ತರಗತಿಗಳಲ್ಲಿ ನಿರ್ಮಾಣವಾಗುತ್ತಿದೆ. ಶಿಕ್ಷಕರು ಭವಿತವ್ಯದ ಶಿಲ್ಪಿಗಳು. ಶಿಕ್ಷಕನ ಪ್ರಭಾವ ಅನಂತವಾದುದು. ಯಾವ ದೇಶವೂ ಕೂಡ ತನ್ನ ಶಿಕ್ಷಕರ ಮಟ್ಟಕ್ಕಿಂತ ಮೇಲೇರಲಾರದು’ – ಹೀಗೆ ಬಗೆಬಗೆಯಾಗಿ ಶಿಕ್ಷಕನ ವ್ಯಕ್ತಿತ್ವ, ಪಾತ್ರ ಹಾಗೂ ಆತನ ವಿಶಿಷ್ಟ ಗುಣಗಳನ್ನು ಹಾಡಿ ಹೊಗಳಲಾಗುತ್ತದೆ. ಅದರಲ್ಲೂ ಶಿಕ್ಷಕ ದಿನಾಚರಣೆಯ ಆಸುಪಾಸಿನಲ್ಲಿ ಮಂತ್ರಿ ಮಾಗಧರು, ಶಾಸಕರು, ಸಮಾಜ ಸುಧಾರಕರು, ಸೇವಾ ದುರಂಧರರು ಇಂಥವರೆಲ್ಲರ ಮಾತು-ಮನದ ತುಂಬ ಶಿಕ್ಷಕನದ್ದೇ ಚಿತ್ತಾರ. ಸಂತೆ ಚದುರಿದ ಮೇಲೆ ಸಂತೆಮಾಳ ಭಣಗುಟ್ಟುವಂತೆ ಶಿಕ್ಷಕ ದಿನಾಚರಣೆ ಕಳೆದ ಬಳಿಕ ಮತ್ತೆ ಯಥಾ ಸ್ಥಿತಿ. ನಾನಾ ಬಗೆಯ ಸಮಸ್ಯೆಗಳ ಮೂಟೆ ಹೊತ್ತ ಶಿಕ್ಷಕರ ದಂಡು ವಿಧಾನ ಸೌಧದ ಕಂಬಕಂಬಗಳಿಗೆ ಎಡತಾಕುತ್ತದೆ !

ಶಿಕ್ಷಕನ ಮೌಲ್ಯ ಕುಸಿಯುತ್ತಿದೆಯೆ, ಎಂದು ನನ್ನನ್ನು ಯಾರಾದರೂ ಪ್ರಶ್ನಿಸಿದರೆ ನನ್ನ ಉತ್ತರ ಹೌದು ಮತ್ತು ಇಲ್ಲ ಎಂದೇ. ಇದು ಜಾಣತನದ ಉತ್ತರವೆಂದು ಭಾವಿಸಬೇಕಾಗಿಲ್ಲ. ಸುಮಾರು ಮೂರೂವರೆ ದಶಕಗಳಿಂದ ಅಧ್ಯಾಪನ ಕ್ಷೇತ್ರದಲ್ಲಿ ನಾನು ಕಂಡುಂಡ ಅನುಭವಗಳ ಆಧಾರದಿಂದ ಹೊರಹೊಮ್ಮುವ ಪ್ರತಿಕ್ರಿಯೆ ಇದು.

‘ಮೌಲ್ಯ’ ಎಂಬುದನ್ನು ನಾನು ಸಾಮಾಜಿಕ, ಬೌದ್ಧಿಕ ಹಾಗೂ ಆರ್ಥಿಕ ಪರಿಪ್ರೇಕ್ಷ್ಯದಲ್ಲಿ ಗ್ರಹಿಸಲು ಬಯಸುತ್ತೇನೆ. ಶಿಕ್ಷಕನ ಮೌಲ್ಯ ಇಂದು ಕುಸಿಯುತ್ತಲೇ ಇದೆ. ಕಣ್ಣೆದುರಿಗೇ ನಿದರ್ಶನಗಳ ಮೆರವಣಿಗೆ ಸಾಗಿದೆ. ಒಂದು ಕಾಲದಲ್ಲಿ ನಮ್ಮಲ್ಲಿ ವಿದ್ಯಾಲಯಗಳ, ಶಿಕ್ಷಕರ ಸಂಖ್ಯೆ ಕಡಿಮೆಯಿತ್ತು. ಬೇರಾವ ಕೆಲಸವೂ ಸಿಗದಿದ್ದರೆ ಮನೆಗೆ ಸಮೀಪದ ಶಾಲೆಯಲ್ಲಿ ‘ಮಾಸ್ತರಿಕೆ’ ಎಂದು ಹಲವರು ಭಾವಿಸಿ ಅಧ್ಯಾಪನ ಕ್ಷೇತ್ರಕ್ಕೆ ಕಾಲಿಡುತ್ತಿದ್ದರು. ಒಲ್ಲದ ಮನಸ್ಸಿನಿಂದ ಈ ವೃತ್ತಿಗೆ ಬಂದರೂ ಅದನ್ನು ಪ್ರೀತಿಸಿದರು; ಜನಮನ್ನಣೆಯ ಗುರುಗಳಾದರು. ಆದರೆ ಈಗ? ಶಾಲೆಗಳ ಸಂಖ್ಯೆ ಹೆಚ್ಚಿದೆ, ಪದವೀಧರರ ಸಂಖ್ಯೆ ಮಿತಿಮೀರಿದೆ; ಶಿಕ್ಷಣ ಮಹಾವಿದ್ಯಾಲಯಗಳು ಗಲ್ಲಿಗೊಂದರಂತೆ ತಲೆ ಎತ್ತಿವೆ. ಪ್ರತಿವರ್ಷ ಕರ್ನಾಟಕ ರಾಜ್ಯ ಒಂದರಲ್ಲೇ ಸಾವಿರಾರು ಮಂದಿ ಶಿಕ್ಷಕ ವೃತ್ತಿ ಕೈಗೊಳ್ಳುವುದಕ್ಕೆ ಬೇಕಾದ ‘ಲೈಸೆನ್ಸ್’ ಹಿಡಿದು ಸರದಿಗಾಗಿ ಕಾಯುತ್ತಿದ್ದಾರೆ.

ಆದರೂ ಇತ್ತೀಚಿನ ವರ್ಷಗಳ ಅನುಭವದ ಪ್ರಕಾರ ಶಿಕ್ಷಣ ಕಾಲೇಜುಗಳಲ್ಲಿ ಕೆಲವಾದರೂ ಸಾಕಷ್ಟು

**ಡಾ॥ ಮಹಾಬಲೇಶ್ವರ ರಾವ್**

ಪ್ರಮಾಣದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಇಲ್ಲದೆ ಮುಚ್ಚುವ ಸನ್ನಾಹದಲ್ಲಿವೆ. ಎಂಜಿನಿಯರಿಂಗ್, ವೈದ್ಯಕೀಯ, ಸ್ನಾತಕೋತ್ತರ ಪದವಿ ಹಾಗೂ ಉದ್ಯೋಗ ಈ ಎಲ್ಲ ಕ್ಷೇತ್ರಗಳಿಗೆ ಹೋಗಿ ಉಳಿದ ಮಂದಿಯಲ್ಲಿ ಕೆಲವರು ಅಧ್ಯಾಪನ ಕ್ಷೇತ್ರಕ್ಕೆ ಕೊನೆಯ ಆಯ್ಕೆ ಎಂಬಂತೆ ಬರುತ್ತಿದ್ದಾರೆ. ಅಧ್ಯಾಪನ ಒಂದು ಪರಮ ಪವಿತ್ರ ವೃತ್ತಿ; ಮಕ್ಕಳಿಗೆ ಪಾಠ ಹೇಳುವುದರಲ್ಲೇ ಬಾಳು ಸಾರ್ಥಕವಾಗಬೇಕು ಎಂಬ ಒಲವು ಈಗ ಕಮರಿಹೋಗಿದೆ. ಅಧ್ಯಾಪಕನ ಕ್ಷೇತ್ರ ತನ್ನ ಆಕರ್ಷಣೆ ಕಳೆದುಕೊಂಡಿದೆ. ಕಾರಣಗಳೇನು ? ಸಾಮಾಜಿಕ ಔದಾಸೀನ್ಯ ಹಾಗೂ ಶಿಕ್ಷಣವನ್ನು ಚಿನ್ನದ ಬಟ್ಟಲಲ್ಲಿಟ್ಟು ಖಾಸಗಿ ಪ್ರಭುಗಳ ಕೈಗೆ ಒಪ್ಪಿಸಿ ಮುಜುರೆ ಸಲ್ಲಿಸುವ ಸರಕಾರಗಳು. ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳನ್ನು ತುಂಬದೆ ವರ್ಷಗಳೇ ಸಂದಿವೆ. ಸರಕಾರಿ ಶಾಲೆಗಳಿಗೆ ನೇಮಕಾತಿ ಪ್ರತಿವರ್ಷವೂ ನಡೆಯುತ್ತಿಲ್ಲ, ಎರಡೋ ಮೂರೋ ವರ್ಷಗಳಿಗೊಮ್ಮೆ ಅರ್ಜಿ ಕರೆದರೆ 'ರಾವಣನ ಹೊಟ್ಟೆಗೆ ಅರೆ ಕಾಸಿನ ಮಜ್ಜಿಗೆ' ಎಂಬಂತೆ ಒಂದೆರಡು ಸಾವಿರ ಹುದ್ದೆಗಳಿಗೆ ಅರ್ಜಿ ಕರೆಯಲಾಗುತ್ತದೆ. ಸಾವಿರಾರು ಸಂಖ್ಯೆಯಲ್ಲಿರುವ ಶಿಕ್ಷಕ ಆಕಾಂಕ್ಷಿಗಳಿಗೆ ನಿರಾಸೆ ಕಟ್ಟಿಟ್ಟ ಬುತ್ತಿ. ಕಡಿಮೆ ಬೇಡಿಕೆ, ಅಧಿಕ ಪೂರೈಕೆಯಂಥ ವಿಷಮ ಸ್ಥಿತಿ ಉದ್ಭವಿಸಿರುವಾಗ ಮತ್ತು ಇದು ಎಲ್ಲರಿಗೂ ತಿಳಿದ ಸತ್ಯವಾಗಿರುವಾಗ ಶಿಕ್ಷಕರಾಗಲು ಮನಮಾಡಬೇಕೇಕೆ ?

ಸರಕಾರಿ ಹಾಗೂ ಅನುದಾನಿತ ವ್ಯವಸ್ಥೆ ಹೀಗಾದರೆ ಖಾಸಗಿ ರಂಗದ ಸ್ಥಿತಿಯಾದರೂ ಆಶಾದಾಯಕವಾಗಿದೆಯೇ ? ಖಾಸಗಿ ಪ್ರಭುಗಳಿಗೆ ಶೋಷಣೆ ಮಾಡಲು ನಡೆಮಡಿ ಹಾಸಿಕೊಟ್ಟಾಗಿದೆ. ಸಮಾನ ಕೆಲಸಕ್ಕೆ ಸಮಾನ ವೇತನ, ಕನಿಷ್ಠ ವೇತನ, ಸರಕಾರಿ ವೇತನ ಶ್ರೇಣಿಗೆ ಸಮನಾದ ವೇತನ, ಇತ್ಯಾದಿ. ಘೋಷಣೆಗಳನ್ನು ನಾವು ಆಗಾಗ್ಗೆ ಗಾಳಿಯಲ್ಲಿ ತೇಲಿಬಿಡುತ್ತೇವೆ. ಆದರೆ ಅನುಷ್ಠಾನ ನಿರಾಶಾದಾಯಕ. ಉಪನ್ಯಾಸಕರಿಗೆ ಯುಜಿಸಿ ವೇತನ ನೀಡಿ ಎಂದು ವಿಶ್ವವಿದ್ಯಾನಿಲಯಗಳು ಕಾಲೇಜುಗಳಿಗೆ ಆಗಿಂದಾಗ್ಗೆ ಫರ್ಮಾನು ಹೊರಡಿಸುತ್ತವೆ. ಆದರೆ ಇದಕ್ಕೆಲ್ಲ ಸೊಪ್ಪು ಹಾಕುವವರು ಬೇಕಲ್ಲ? ವಿಶ್ವವಿದ್ಯಾನಿಲಯದ ಆಜ್ಞೆಗಳನ್ನು ಉಲ್ಲಂಘಿಸುವ ಖಾಸಗಿ ಆಡಳಿತ ಮಂಡಳಿಗಳ ಮೇಲೆ ಕ್ರಮ ಕೈಗೊಳ್ಳುವ ಧೈರ್ಯ ಯಾರಿಗಿದೆ ? ಹೆಚ್ಚೇಕೆ, ಸರಕಾರವೇ ಅತಿಥಿ ಉಪನ್ಯಾಸಕರನ್ನು ನೇಮಿಸಿ ತಿಂಗಳಿಗೆ ಎಂಟು ಹತ್ತು ಸಾವಿರ ರೂ.ಗಳ ವೇತನ ನೀಡುತ್ತಿದೆ, ಅದೂ ಆರು ತಿಂಗಳಿಗೊಮ್ಮೆ ಅಥವಾ ವರ್ಷಕೊಮ್ಮೆ! ಸರಕಾರಗಳೇ ಶೋಷಣೆಗೆ ದೊಡ್ಡ ದೇಣಿಗೆ ನೀಡುತ್ತಿರುವಾಗ ಕಾಗದದ ಮೇಲಿನ ಅಕ್ಷರಗಳಿಗೆ ಬೆಲೆ ಕೊಡುವವರು ಯಾರು ? ಹಿಮಾಚಲ ಪ್ರದೇಶದ ಖಾಸಗಿ ಆಡಳಿತದ ಸೇಂಟ್ ಪಾಲ್ ಉನ್ನತ ಪ್ರೌಢ ಶಿಕ್ಷಣ ವಿದ್ಯಾಲಯದ ಶಿಕ್ಷಕರು ಆಡಳಿತ ಮಂಡಳಿ ತಮಗೆ ಸರಕಾರಿ ವೇತನ ಶ್ರೇಣಿ ನೀಡಬೇಕೆಂದು ಅಹವಾಲು ಸಲ್ಲಿಸಿದ್ದನ್ನು ಸರ್ವೋಚ್ಚ ನ್ಯಾಯಾಲಯ ತಳ್ಳಿಹಾಕಿ, ಸರಕಾರಿ ಹಾಗೂ ಅನುದಾನಿತ ಸಂಸ್ಥೆಗಳ ನೌಕರರ ವೇತನ ಸಾರ್ವಜನಿಕ ಕಾನೂನಿನ ವ್ಯಾಪ್ತಿಗೆ ಒಳಪಟ್ಟಿದೆ; ಖಾಸಗಿ ಕ್ಷೇತ್ರದಲ್ಲಿ ಆಡಳಿತ ಮಂಡಳಿ ಹಾಗೂ ಶಿಕ್ಷಕರ ನಡುವಿನ ಒಪ್ಪಂದದಂತೆ ವೇತನ ವಿತರಣೆಯಾಗುತ್ತದೆ; ಆದುದರಿಂದ ಸರಕಾರಿ ವೇತನ ಶ್ರೇಣಿಯ ಬೇಡಿಕೆ ಸಾಧುವಲ್ಲ, ಎಂದು ತೀರ್ಪು ನೀಡಿ ಖಾಸಗಿ ರಂಗದ ಶಿಕ್ಷಕರ ಕನಸುಗಳನ್ನು ಕಮರಿಸಿದೆ. ಇಂಥ ಸ್ಥಿತಿಯಲ್ಲಿ ಶಿಕ್ಷಕ ವೃತ್ತಿಯ ಹಾಗೂ ಶಿಕ್ಷಕನ ಮೌಲ್ಯ ಕುಸಿದಿದೆ ಎನ್ನದೆ ವಿಧಿಯಿಲ್ಲ.

ಸಂವಿಧಾನ ರೀತ್ಯಾ ಜಾತಿಪದ್ಧತಿಯು ನಿರ್ಮೂಲನವಾಗಿದೆ ಎಂದು ಎಲ್ಲರೂ ಬೊಬ್ಬೆ ಹೊಡೆಯುವವರೆ. ವ್ಯಂಗ್ಯವೆಂದರೆ ಶಿಕ್ಷಣ ವ್ಯವಸ್ಥೆಯಲ್ಲಿ 'ಬೌದ್ಧಿಕ ಕೂಲಿ'ಗಳ ನಿರ್ಮಾಣವಾಗಿದೆ. ವೇತನ ತಾರತಮ್ಯದಿಂದಾಗಿ ಶಾಲೆ ಕಾಲೇಜುಗಳಲ್ಲಿ ಅಸಂಘಟಿತ ಶಿಕ್ಷಕರು, ಸಂಘಟಿತ ಶಿಕ್ಷಕರು, ರಾಜ್ಯ ವೇತನ ಶ್ರೇಣಿ, ಯು.ಜಿ.ಸಿ. ವೇತನ ಶ್ರೇಣಿ, ಆಡಳಿತ ಮಂಡಳಿ ವೇತನ ಶ್ರೇಣಿ,




ಅತಿಥಿ ಹಾಗೂ ಗುತ್ತಿಗೆ ಶಿಕ್ಷಕರು... ಹೀಗೆ ನಾವು ತರಹೇವಾರಿ ''ಜಾತಿ''ಗಳನ್ನು ಸೃಷ್ಟಿಸಿದ್ದೇವೆ.! ಸಮಾನ ವಿದ್ಯಾರ್ಹತೆ, ಸಮಾನ ಕೆಲಸ, ಆದರೆ ಅಸಮಾನ ವೇತನ ಕಣ್ಣೆದುರೇ ರಾಚುತ್ತಿರುವಾಗ ಯುವ ಶಿಕ್ಷಕವೃಂದದ ಮುಂದೆ ನಿಂತು ತ್ಯಾಗ, ಬದ್ಧತೆ, ನಿಸ್ಪೃಹತೆ ಎಂದೆಲ್ಲ ಉಪದೇಶಿಸುವುದು ಹೇಗೆ ಸಾಧ್ಯ ? ಹಾಗೆ ಉಪದೇಶ ಮಾಡಿದರೆ ''ಇದೆಲ್ಲ ಹೊಟ್ಟೆ ತುಂಬಿದವರ ಜೋಗುಳ. ಪರೋಪದೇಶ ಪಾಂಡಿತ್ಯ. ಮೊದಲು ನಮಗೆ ಒಳ್ಳೆಯ ವೇತನ ಕೊಡಿಸಿ'' ಎಂಬ ಪ್ರತಿಕ್ರಿಯೆ ಎದುರಾಗುತ್ತದೆ.

ವೇತನ ತಾರತಮ್ಯ ಅಥವಾ ಆರ್ಥಿಕ ಸಮಾನತೆಯ ದುಷ್ಪರಿಣಾಮದಿಂದಾಗಿ ಇತ್ತೀಚಿನ ದಿನಗಳಲ್ಲಿ ಕೆಲವು ಕಡೆಗಳಲ್ಲಿ ಬೋಧನೆ ತೀರ ಯಾಂತ್ರಿಕವಾಗಿದೆ. ವಿದ್ಯಾರ್ಥಿಗಳ ಕಲಿಕೆ-ಪ್ರಗತಿ-ಹೊಸತನದ ಆವಿಷ್ಕಾರ-ಗುಣಶ್ರೇಷ್ಠತೆಯ ಶೋಧನೆ ಇತ್ಯಾದಿಯಾದ ತಲೆಯ ಮೇಲಿನಿಂದ ಹಾರಿಹೋಗುವ ಪರಿಕಲ್ಪನೆಗಳು ಸಂಸ್ಥಾಮುಖ್ಯಸ್ಥರ ವಿಕ್ರಮದ ಸಂಕೇತಗಳು. ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ ಹಾಕಿದರೆ ಸಾಕು ಎಂಬ ಸ್ಥಿತಿ ಉದ್ಭವಿಸಿದೆ. ವೇತನಕ್ಕೂ ಬದ್ಧತೆಗೂ ಸಂಬಂಧವಿಲ್ಲ; ಅದು ಒಳಗಿನಿಂದ ಅರಳಬೇಕಾದ ಕ್ರಿಯೆ ಎಂದು ಹೇಳಬಹುದಾದರೂ ಆರ್ಥಿಕ ಭದ್ರತೆಯಿಲ್ಲದ ಮಂದಿಯಿಂದ ಬಲು ದೊಡ್ಡ ಸಾಧನೆಯನ್ನು ನಿರೀಕ್ಷಿಸುವುದು ದುಸ್ತರ ಮತ್ತು ಅನ್ಯಾಯ ಕೂಡ.

ಶಿಕ್ಷಣ ಕಾಲೇಜಿನ ನನ್ನ ಮೂರು ದಶಕಗಳ ಅನುಭವದ ಪ್ರಕಾರ ಇತ್ತೀಚೆಗೆ ಶಿಕ್ಷಕ ವೃತ್ತಿ ಆಕಾಂಕ್ಷಿ ಅಭ್ಯರ್ಥಿಗಳು ಆ ವೃತ್ತಿಯ ಬಗೆಗಿನ ತೀವ್ರಭಾವ - ಫ್ಯಾಷನ್‌ನಿಂದ ಬರುತ್ತಿಲ್ಲ. ಹತ್ತು ತಿಂಗಳಲ್ಲಿ ಅಥವಾ ಒಂದೆರಡು ವರ್ಷಗಳಲ್ಲಿ ವ್ಯಾಸಂಗ ಮುಗಿದು ಒಂದು ಕೆಲಸ ಸಿಗುತ್ತದೆ ಎಂಬ ಚಿಂತನೆಯಿಂದ ಬರುವವರೇ ಹೆಚ್ಚು. ಈ ವೃತ್ತಿಯನ್ನು ಆಶ್ರಯಿಸಲು ಬೇಕಾದ ಆಸಕ್ತಿ, ಅಭಿಕ್ಷಮತೆ, ಮನೋಭಾವ ತಮ್ಮಲ್ಲಿ ಸಾಕಷ್ಟು ಪ್ರಮಾಣದಲ್ಲಿದೆಯೆ, ಇಲ್ಲವೆ ಎಂಬ ತಿಳಿವಳಿಕೆಯೂ ಅವರಲ್ಲಿಲ್ಲ. ಇದರಿಂದಾಗಿ ನಮ್ಮ ಶಿಕ್ಷಕ ವಿದ್ಯಾರ್ಥಿಗಳಲ್ಲಿ ಬಹುಮಂದಿ ಸಾಮಾನ್ಯ ಜ್ಞಾನ, ವಿಷಯ ಜ್ಞಾನ, ಭಾಷಾ ಜ್ಞಾನ, ಕಂಠತ್ರಾಣ ಹಾಗೂ ಅಭಿವ್ಯಕ್ತಿ ಕೌಶಲಗಳು ಹಾಳತವಾಗಿ ಮೇಳೈಸದೆ ಪೀಚುಗೊಂಬೆಗಳಾಗಿದ್ದಾರೆ. ಪ್ರಶಿಕ್ಷಣದ ಅವಧಿಯಲ್ಲಾದರೂ ತಮ್ಮ ಕುಂದುಕೊರತೆಗಳನ್ನು ಗಮನಿಸಿ ವೃತ್ತಿಗೆ ಅಗತ್ಯವಾದ ಪೂರ್ವಭಾವಿ ಸಿದ್ಧತೆ ಮಾಡಿಕೊಳ್ಳಲು ಇವರು ಒಂದೋ ನಿರಾಸಕ್ತರು, ಇಲ್ಲವೆ ಅಶಕ್ತರು. ಇದಕ್ಕೆ ಅಪವಾದಗಳಿಲ್ಲ ಎಂದಲ್ಲ, ಆದರೆ ಬಹುಜನರ ಒಲವು ಪರೀಕ್ಷಾ ಯಶಸ್ಸಿನ ಕಡೆಗಿದೆ.

ಅಭಿವ್ಯಕ್ತಿ, ಭಾಷಾ ಜ್ಞಾನ ಹಾಗೂ ವೈದುಷ್ಯದ ದೃಷ್ಟಿಯಿಂದ ತೀರ ದುರ್ಬಲರಾದವರು ಪ್ರಶಿಕ್ಷಣದ ಅವಧಿ ಮುಗಿದೊಡನೆ ಯಾವುದಾದರೊಂದು ಶಾಲೆಯಲ್ಲಿ ಮೂರೋ, ನಾಲ್ಕೋ ಸಾವಿರ ರೂ.ಗಳಿಗೆ ಗೆಯ್ಮೆ ಆರಂಭಿಸುತ್ತಾರೆ. ನೆಟ್ಟಗೆ ಇಂಗ್ಲಿಷ್ ಮಾತನಾಡಲು ಅಸಮರ್ಥರಾದವರು ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಶಿಕ್ಷಕರಾಗುತ್ತಾರೆ. ನಿರರ್ಗಳವಾಗಿ ಕನ್ನಡದಲ್ಲಿ ಐದು ನಿಮಿಷ ಮಾತನಾಡಲಾರದವರು ಕನ್ನಡ ಅಧ್ಯಾಪಕರಾಗುತ್ತಾರೆ. ಇಂಥ ಶಿಕ್ಷಕರಿಂದ ಏನನ್ನು ತಾನೆ ನಿರೀಕ್ಷಿಸಬಹುದು ? ಸಮಾಜ, ವಿದ್ಯಾರ್ಥಿ ವೃಂದ ಹಾಗೂ ಹೆತ್ತವರ ಕಣ್ಣಿನಲ್ಲಿ ಇಂಥ ಶಿಕ್ಷಕರಿಗೆ ಯಾವ ಮೌಲ್ಯವಿದೆ ? ವೈಯಕ್ತಿಕ ಜೀವನ ಮೌಲ್ಯಗಳು ಹಾಗೂ ಆದರ್ಶಗಳ ದೃಷ್ಟಿಯಿಂದಲೂ ಇವರು ಹಳೆಯ ತಲೆಮಾರಿನ ಶಿಕ್ಷಕರಿಗೆ ಎಂದೂ ಸರಿಸಾಟಿಯಲ್ಲ. ಇಂಥ ಮಂದಿಯಿಂದಾಗಿ ಇಂದು ಅಧ್ಯಾಪನವೆಂಬುದು ವೃತ್ತಿಯಾಗಿ ಉಳಿದಿಲ್ಲ; ಸೇವಾವ್ರತದ ಮಟ್ಟದಲ್ಲೂ ಇಲ್ಲ. ಅದು ಹೊಟ್ಟೆಪಾಡಿನ, ಗೂಟದ ಸುತ್ತ ಸುತ್ತುವ ಕೆಲಸವಾಗಿದೆ.

ವಿದ್ಯಾರ್ಥಿಗಳ ಕಲಿಕೆಯ ಸುಧಾರಣೆ, ಶೀಲ ಸಂವರ್ಧನೆ, ಚಾರಿತ್ರ್ಯ ನಿರ್ಮಾಣ, ವ್ಯಕ್ತಿತ್ವ ವಿಕಸನ ಇತ್ಯಾದಿಗಳು ಶುಷ್ಕ ಮಂತ್ರಗಳು, ಅಷ್ಟೆ. ಹಿಂದಿನ ತಲೆಮಾರಿನ ಶಿಕ್ಷಕರ ಮಾದರಿಗಳು ಇಂದಿನವರಿಗೆ ಅಗತ್ಯವಿಲ್ಲದ ವೇದಿಕೆ ಭಾಷಣಗಳಿಗೆ ಬೇಕಿರುವ ಸರಕುಗಳು. ಆಳವಾದ ಅಧ್ಯಯನ ಮಾಡಿ ಜ್ಞಾನದ

ಬಲದಿಂದ ಎತ್ತರಕ್ಕೆ ಏರಿದವನು ಉಪಾಧ್ಯಾಯ ಎಂಬ ಪರಿಕಲ್ಪನೆ ಈಗ ಹಿಂದೆ ಸರಿದಿದೆ. ವೃತ್ತಿ ಪ್ರೀತಿ, ವೃತ್ತಿ ತೃಪ್ತಿ, ವೃತ್ತಿಯ ಘನತೆ ಗಾಂಭೀರ್ಯ ಹಾಗೂ ವೃತ್ತಿಪರತೆ ಈಗ ಯಾರೂ ಬಯಸದ, ಆಕರ್ಷಣೆ ಕಳೆದುಕೊಂಡ ಮಾಸಲು ವಸ್ತುಗಳು! 'ಇಂಥ ಪರಿಕಲ್ಪನೆಗಳೆಲ್ಲ ಮಂಕುಬೂದಿ ಎರಚುವ ಸಂಗತಿಗಳು. ಈ ಆದರ್ಶಗಳಿಗೆ ತಕ್ಕಂತೆ ಬದುಕಿದರೆ ಹೊಟ್ಟೆ ತುಂಬುವುದಿಲ್ಲ' ಎಂಬ ಘೋರ ವಾಸ್ತವವಾದಿ ದರ್ಶನದಲ್ಲಿ ಶಿಕ್ಷಕರು ಬೇಯುತ್ತಿದ್ದಾರೆ. ಕನಸುಗಾರಿಕೆಗೆ ತಿಲಾಂಜಲಿಯಿತ್ತು ಉರಿಯುವ ವಾಸ್ತವ ಪ್ರಜ್ಞೆಯನ್ನು ಎತ್ತಿ ಹಿಡಿವ ಶಿಕ್ಷಕರು ನನ್ನ ಪಾಲಿಗೆ ನಿರ್ಗಂಧ ಕುಸುಮಗಳು. ಸದ್ಯದ ವ್ಯವಸ್ಥೆ ಇಂಥ ನಿರ್ಗಂಧ ಕುಸುಮಗಳನ್ನು ಹೇರುತ್ತಿರುವುದು, ಹೊರುತ್ತಿರುವುದು ನಮ್ಮ ದುರಂತ.

ನಾವು ಇಷ್ಟೊಂದು ನಿರಾಶರಾಗಬೇಕೇ? ಪರಿಸ್ಥಿತಿ ಅಷ್ಟೊಂದು ದಯನೀಯವಾಗಿದೆಯೇ, ಶಾಲೆ ಕಾಲೇಜುಗಳಲ್ಲಿ ಶಿಕ್ಷಕರ ಬದಲಾಗಿ ಯಂತ್ರಗಳು ಪಾಠ ಹೇಳುತ್ತಿವೆಯೇ, ಎಂಬಂತಹ ಪ್ರಶ್ನೆಗಳು ಕಾಡಬಹುದು. ಶಿಕ್ಷಕ ವೃತ್ತಿಗೆ ಗೌರವ ತರುವ, ಅದರ ಪಾವಿತ್ರ್ಯವನ್ನು ಕಾಪಾಡುವ, ತಮ್ಮ ಜ್ಞಾನ ಸಂಪತ್ತಿನಿಂದ ವಿದ್ಯಾರ್ಥಿಗಳ ಚಿತ್ತಾಪಹಾರ ಮಾಡಿದ ಶಿಕ್ಷಕರ ಸಂಖ್ಯೆ ಈ ದೇಶದಲ್ಲಿ ಸಾಕಷ್ಟು ಪ್ರಮಾಣದಲ್ಲಿದೆ. ವೇತನಶ್ರೇಣಿ ಯಾವುದೇ ಇರಲಿ, ಸೇವಾ ನಿಬಂಧನೆಗಳೇನೇ ಇರಲಿ, ಬೋಧನೆ ಒಂದು ಪವಿತ್ರ ಕಾರ್ಯವೆಂದು ತಿಳಿದು ತಮ್ಮನ್ನು ತೊಡಗಿಸಿಕೊಂಡ ಕಿರಿಯ ತಲೆಮಾರಿನ ಪ್ರತಿಭಾವಂತ ಶಿಕ್ಷಕರ ಪ್ರಮಾಣ ಕಾರಿರುಳ ನಡುವಿನ ಕೋಲ್ಮಿಂಚಿನಂತಿದೆ. ಇವರು ಪ್ರಚಾರಪ್ರಿಯರಲ್ಲ, ಪ್ರಶಸ್ತಿ ಆಕಾಂಕ್ಷಿಗಳಲ್ಲ, ದುಂಬಾಲು ಬಿದ್ದು ಮುಂದೆ ಬಂದು ಪತ್ರಿಕೆಗಳಿಗೆ ಪೋಸು ಕೊಡುವವರಲ್ಲ, ತಾವು ಕಲಿಸುವ ವಿಷಯವನ್ನು, ವಿದ್ಯಾರ್ಥಿಗಳನ್ನು, ತಮ್ಮ ವೃತ್ತಿಯನ್ನು, ಗುಣಶ್ರೇಷ್ಠತೆಯನ್ನು ಪ್ರೀತಿಸಿ ಬೋಧನೆಯನ್ನು ಸೃಜನಶೀಲ ಕಾಯಕವನ್ನಾಗಿ ಮಾರ್ಪಡಿಸಿಕೊಂಡವರು ನಮ್ಮ ನಡುವೆ ಇದ್ದಾರೆ. ಪ್ರತಿಯೊಂದು ಊರಿನಲ್ಲೂ ಇಂಥ ಒಬ್ಬರಲ್ಲ ಒಬ್ಬ ಶಿಕ್ಷಕರು ನಿಮ್ಮ ಕಣ್ಣಿಗೆ ಬಿದ್ದಾರು. ಇವರ ಸರಳತೆ, ಸೌಜನ್ಯ, ಜ್ಞಾನದಾಹ, ಶಿಷ್ಯವಾತ್ಸಲ್ಯ, ಅಭಿವ್ಯಕ್ತಿ ಕೌಶಲ, ಸಾಧನೆ ಇತ್ಯಾದಿಗಳನ್ನು ಊರಿನ ಜನ ಅಭಿಮಾನದಿಂದ ಸ್ಮರಿಸುತ್ತಾರೆ. ಇಂಥ ಶಿಕ್ಷಕರಿಂದ ತಮ್ಮ ವ್ಯಕ್ತಿತ್ವ ರೂಪುಗೊಂಡಿದೆ ಎಂದು ವಿದ್ಯಾರ್ಥಿ ಸಂದೋಹ ಇವರನ್ನು ಕೊಂಡಾಡುತ್ತದೆ.

ಈಗಲೂ ಓರ್ವ ಉತ್ತಮ ಶಿಕ್ಷಕ ಯಾವ ಹಂತದಲ್ಲೇ ಬೋಧನೆ ಮಾಡಲಿ, ಆತನನ್ನು ಕಂಡೊಡನೆ ಕೆಲವರಾದರೂ ಗೌರವಿಸುತ್ತಾರೆ. ದೂರದಲ್ಲೆಲ್ಲೋ ನಿಂತ ವಿದ್ಯಾರ್ಥಿಗಳು ಬಳಿಗೋಡಿ ಬಂದು, ''ನಮಸ್ತೇ ಸರ್, ಹೇಗಿದ್ದೀರಿ, ಅಂದು ಕೇಳಿದ ನಿಮ್ಮ ಪಾಠ ಇಂದಿಗೂ ಕಿವಿಗಳಲ್ಲಿ ಗುಂಯ್‌ಗುಡುತ್ತಿದೆ. ನಿಮ್ಮ ದನಿ, ನಿಮ್ಮ ವಿಚಾರಗಳು ಮತ್ತೆ ಮತ್ತೆ ನೆನಪಿಗೆ ಬರುತ್ತವೆ. ನಿಮ್ಮ ಹಾಗೆ ಆಗಲು ನಾನೂ ಯತ್ನಿಸುತ್ತಿದ್ದೇನೆ. ನಿಮ್ಮ ಬಗ್ಗೆ ಪತ್ರಿಕೆಗಳಲ್ಲಿ ಓದಿದಾಗ ನನಗೆ ಹೆಮ್ಮೆ ಅನ್ನಿಸುತ್ತದೆ. ನನ್ನ ಸಹೋದ್ಯೋಗಿಗಳೆಲ್ಲರ ಬಳಿ ನಿಮ್ಮ ಬಗ್ಗೆ ಹೇಳುತ್ತಿರುತ್ತೇನೆ'' ಎಂದು ಭಾವುಕರಾಗಿ ನುಡಿವ ವಿದ್ಯಾರ್ಥಿಗಳನ್ನು ನಾನು ಕಂಡಿದ್ದೇನೆ. ತಿದ್ದಿ, ತೀಡಿ, ಬುದ್ಧಿ ಹೇಳಿ ಸರಿ ದಾರಿ ತೋರಿದ ಗುರುಗಳನ್ನು ನಿತ್ಯ ನೆನೆವವರನ್ನು ಗಮನಿಸುತ್ತಿದ್ದೇನೆ.

ಒಟ್ಟಿನಲ್ಲಿ ಹೇಳುವುದಾದರೆ ಎಲ್ಲ ಕಾಲದಲ್ಲೂ, ಎಲ್ಲ ದೇಶಗಳಲ್ಲೂ, ಎಲ್ಲ ಸಂಸ್ಕೃತಿಗಳಲ್ಲೂ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಹೇಗೇ ಇರಲಿ, ಒಳ್ಳೆಯ ಶಿಕ್ಷಕರಿಗೆ ವಿಶೇಷವಾದ ಮನ್ನಣೆಯಿದೆ; ಅಪಾರ ಮೌಲ್ಯವಿದೆ. ಆ ಮೌಲ್ಯದಲ್ಲಿ ಆಗೊಮ್ಮೆ ಈಗೊಮ್ಮೆ ಒಂದಿಷ್ಟು ಕುಸಿತ ಆಗಬಹುದು. ಇದಕ್ಕೆ ಸಂಸ್ಕೃತಿಭ್ರಷ್ಟ, ಭೋಗಾಸಕ್ತ ಸಮಾಜ ಕಾರಣ; ಆಳುವ ಸರಕಾರಗಳು ಕಾರಣ. ಶಿಕ್ಷಕರೆಂದರೆ ತಮ್ಮ ಮಕ್ಕಳಿಗೆ ಪಾಠ ಹೇಳುವ ಪರಿಚಾರಕರು ಎಂದು ಭಾವಿಸುವ ಪೋಷಕರು ಕಾರಣ ಮತ್ತು ತಮ್ಮ ಮೌಲ್ಯವೇನೆಂಬುದನ್ನು ಸರಿಯಾಗಿ ಪರಿಭಾವಿಸದೆ ಅನ್ಯರ ಅನುಕರಣೆ ಮಾಡಹೊರಟು ಪಥಭ್ರಷ್ಟರಾದ ಶಿಕ್ಷಕರೇ ಕಾರಣ. ನಿಜವಾದ ಅರ್ಥದಲ್ಲಿ ಜ್ಞಾನದ ತವನಿಧಿಯಾಗಿರುವ ಶಿಕ್ಷಕ ಎಂದೆಂದಿಗೂ ಬಹುಮೂಲ್ಯನೇ, ಬಹುಮಾನ್ಯನೇ.

'ಅಂತರತಮ ನೀ ಗುರು ಹೇ ಆತ್ಮತಮೋಹಾರಿ'

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ.ಎಂ.ಎ. ಪೈ ಶಿಕ್ಷಣ ಕಾಲೇಜು
ಉಡುಪಿ - ೫೭೬ ೧೦೨

## ÖãàÃÝo ¨ Êí£W



**ಎ**ದೆ ಸೀಳಿದರೆ ನಾಲ್ಕು ಅಕ್ಷರವಿರದ
ಅಪ್ಪ ಅವ್ವರ ಬದುಕು
ಅಕ್ಷರಗಳಿರದ ಕಾವ್ಯ

ಮಗ ಬಾಳ ಚಾಲೂ ಇದಾನ
ಬೆತ್ತದ ಮಾಸ್ತರನ ಪ್ರಶಂಸೆಗೆ
ಅವ್ವ ಎದೆಯುಬ್ಬಿಸಿದಳು
ಅಪ್ಪನ ಮೀಸೆ ನಕ್ಕಿತು.

ನಿದಿರೆಯೊಳಗೆ
ಮಗ ಸಾಹೇಬನಾದ
ಕುರ್ಚಿಯಲ್ಲಿ ಕೂತು ಗಿರಗಿರನೆ
ತಿರುಗಿದ ಕನಸು

ಕೈಲಿದ್ದ ಪುಸ್ತಕ ಜಾರಿ
ಬಾವುಟ ಹಿಡಿದಾಗ
ಪೊರೆ ಆವರಿಸಿದ ಕಂಗಳು
ನನ್ನನ್ನೇ ಹುಡುಕುತ್ತಿವೆ.

ಎತ್ತಿನ ಹೆಗಲಿಗೆ
ನೊಗ ಸೇರಿಸುವ ಅಪ್ಪ
ಗುಟುರುಹಾಕುತ್ತ
ಹೊಲಕ್ಕೆ ಹೊರಡುತ್ತಾನೆ.

ದೂರದ ಊರಲಿ ರಾತ್ರಿಯೆಲ್ಲಾ
ಬೀದಿ ಬೀದಿ ತಿರುಗಿ
ಪೋಸ್ಟರು ಹಚ್ಚಿ
ದಣಿದು ಬಂದಾಗ
ಮುಸಿಮುಸಿ ಅಳುತ್ತ
ಕಾಲು ಒತ್ತುವ ಅವ್ವ
ಬೆಳಗಿನ ಪತ್ರಿಕೆಯಲ್ಲಿ ಮುದ್ರಿತಗೊಂಡ
ನನ್ನಯ ಫೋಟೋವನ್ನ ಊರ ಮಂದಿಗೆ ತೋರಿ
ಅಭಿಮಾನ ಸಾರಿದಳು.

ಅವಳ
ಎದೆ ಬೆವರನುಂಡ
ವದ್ದೆ ನೋಟುಗಳೀಗ
ಹೋರಾಟದ ವಂತಿಗೆ

**ಕೈದಾಳ್ ಕೃಷ್ಣಮೂರ್ತಿ**
ಕೈದಾಳೆ (ಅಂಚೆ), ದಾವಣಗೆರೆ ತಾಲೂಕು ಮತ್ತು ಜಿಲ್ಲೆ - ೫೭೭ ೫೨೫

**ಲಕ್ಷಾಂತರ ಹೆಕ್ಟೇರ್ ಕೃಷಿಭೂಮಿಯನ್ನು ನಾಶಗೊಳಿಸಿ ಬೃಹತ್ ಉದ್ದಿಮೆಗಳನ್ನು ಸ್ಥಾಪಿಸುವ ಹುನ್ನಾರದ ಹಿಂದಿರುವ ಬಂಡವಾಳಶಾಹಿ ಹಿತಾಸಕ್ತಿಗಳ ಮಸಲತ್ತನ್ನು ಅರ್ಥಮಾಡಿ ಕೊಂಡು ಹೊಸ ರೀತಿಯ ಅಭಿವೃದ್ಧಿಯ ಬಗ್ಗೆ ನಮ್ಮನ್ನು ತೊಡಗಿಸಿಕೊಳ್ಳುವುದು ಇಂದು ಅನಿವಾರ್ಯವಾಗಿದೆ. ಆದ್ದರಿಂದ ಕೃಷಿಯನ್ನೇ ಒಂದು ಕೈಗಾರಿಕೆಯನ್ನಾಗಿ ನೋಡಿ ಬೆಳೆಸುವ ಪರಿಪಾಠವನ್ನು ನಾವು ಶುರು ಮಾಡಬೇಕಿದೆ. ನಮ್ಮ ಶ್ರಮ, ಬಂಡವಾಳ, ತಂತ್ರಜ್ಞಾನಗಳನ್ನು ಕೃಷಿಯಲ್ಲಿ ಹೂಡಿ, ಕೈಗಾರಿಕೆಗಳ ಅಭಿವೃದ್ಧಿ ಸೂತ್ರಗಳಿಂದ ಬೇಡಿಕೆ, ಉತ್ಪಾದನೆ, ಮಾರುಕಟ್ಟೆ ಜಾಲ, ಮತ್ತು ವಿತರಣಾ ವ್ಯವಸ್ಥೆಗಳನ್ನು ಕೃಷಿಯಲ್ಲಿಯೂ ಅಳವಡಿಸಿಕೊಳ್ಳುವುದು ಅಗತ್ಯವಾಗಿದೆ.**

# ಅಭಿವೃದ್ಧಿ, ಭೂಮಿ ಮತ್ತು ತ್ಯಾಗ !

'ಅಭಿವೃದ್ಧಿಗಾಗಿ ಭೂಸ್ವಾಧೀನ' ಎಂಬ ಘೋಷವಾಕ್ಯ ಸುಳ್ಳಾಗಿದೆ. ಅಭಿವೃದ್ಧಿಯನ್ನು ಹೊರತುಪಡಿಸಿಯೂ ಬೇರೆ ಬೇರೆ ಕಾರಣಗಳಿಗಾಗಿ ಭೂಸ್ವಾಧೀನ ಪ್ರಕ್ರಿಯೆ ನಿರಂತರವಾಗಿ ನಡೆಯುತ್ತಿದೆ.

ಸ್ವಾತಂತ್ರ್ಯ ಬಂದ ಹೊಸತರಲ್ಲಿ ದೇಶದಲ್ಲಿ ನೀರಾವರಿ ಯೋಜನೆಗಳಿಗಾಗಿ (ಅದರಲ್ಲೂ ಬೃಹತ್ ಗಾತ್ರದ ಅಣೆಕಟ್ಟುಗಳಿಗಾಗಿ) ಮತ್ತು ದೊಡ್ಡ ಕೈಗಾರಿಕೆಗಳಿಗಾಗಿ ಲಕ್ಷಾಂತರ ಹೆಕ್ಟೇರ್ ಭೂಮಿಯನ್ನು ಸರಕಾರ ವಶಪಡಿಸಿಕೊಂಡಿತ್ತು. ಆ ಕ್ರಮ ತಕ್ಕಮಟ್ಟಿಗೆ ದೇಶದಲ್ಲಿನ ಆಹಾರ ಪೂರೈಕೆಯನ್ನು, ಆರ್ಥಿಕ ಪ್ರಗತಿಯನ್ನು ಹೆಚ್ಚಿಸಿತು ಎಂಬುದು ಸತ್ಯ. ಅದರಲ್ಲೂ ನಮ್ಮ ದೇಶವನ್ನಾಳುತ್ತಿದ್ದ ಮಹಾನ್ ನಾಯಕರುಗಳೂ ''ದೇಶವನ್ನು ಆರ್ಥಿಕವಾಗಿ ಮುನ್ನಡೆಸಲು'' ಜನತೆ ಭೂಮಿಯನ್ನು ತ್ಯಾಗ ಮಾಡುವುದು ಅನಿವಾರ್ಯವೆಂದು ಜನರನ್ನು ನಂಬಿಸಿದ್ದರು. ಅದೂ ಅಲ್ಲದೆ ದೇಶವನ್ನು ಪುನರ್‌ನಿರ್ಮಾಣ ಮಾಡುವ ಆದರ್ಶದ ಗುಂಗಿನಲ್ಲಿದ್ದ ಜನರಿಗೂ ಈ ತ್ಯಾಗ ಅಷ್ಟೇನೂ ಅಪಥ್ಯವೆನಿಸಿರಲಿಲ್ಲ.

ತದನಂತರದ ದಿನಗಳಲ್ಲಿ ಹೀಗೆ ದೇಶದ ಅಭಿವೃದ್ಧಿಗಾಗಿ ಭೂಮಿಯನ್ನು ತ್ಯಾಗ ಮಾಡಿದವರಿಗೆ ಭ್ರಮನಿರಸನವಾಗತೊಡಗಿತು. ಯಾಕೆಂದರೆ ಯಾವ ಅಭಿವೃದ್ಧಿಗಾಗಿ ಅವರು ತಮ್ಮ ಸರ್ವಸ್ವವೂ ಆದ ಭೂಮಿಯನ್ನು ತ್ಯಾಗ ಮಾಡಿದ್ದರೋ ಆ ಅಭಿವೃದ್ಧಿಯ ಫಲ ಅವರನ್ನು ತಲುಪಲೇ ಇಲ್ಲ.

ಆದರೆ ಇದೀಗ ಸ್ವಾತಂತ್ರ್ಯ ಬಂದ ಆರು ದಶಕಗಳ ನಂತರವೂ ಅಭಿವೃದ್ಧಿಯ ಹೆಸರಲ್ಲಿ ಸರಕಾರಗಳು ರೈತರ ಭೂಮಿಯನ್ನು ವಶಪಡಿಸಿಕೊಳ್ಳುತ್ತಲೇ ಇವೆ. ಗಮನಿಸಬೇಕಾದ ಸಂಗತಿಯೆಂದರೆ ಸ್ವಾತಂತ್ರ್ಯ ಬಂದ ಹೊಸತರಲ್ಲಿದ್ದ ಜನರಂತೆ ಇವತ್ತಿನ ರೈತರು ತಮ್ಮ ಭೂಮಿಯನ್ನು ಅಷ್ಟು ಸುಲಭದಲ್ಲಿ ನೀಡಲು ಒಪ್ಪುತ್ತಿಲ್ಲ. ಯಾಕೆಂದರೆ ಸರಕಾರ ಮಾತಾಡುತ್ತಿರುವ ತಥಾಕಥಿತ ಅಭಿವೃದ್ಧಿಯ ನಿಜವಾದ ಫಲಾನುಭವಿಗಳು ತಾವಾಗಲು ಸಾಧ್ಯವಿಲ್ಲವೆಂಬ ಅರಿವು ಅವರಿಗಾಗಿದೆ. ಜೊತೆಗೆ, ಭೂಮಿ ನೀಡಿ ನಿರಾಶ್ರಿತರಾದ ರೈತರಿಗೆ ಸರಕಾರ ಕಲ್ಪಿಸಿಕೊಡಬಹುದಾದ ಪುನರ್‌ವಸತಿ ವ್ಯವಸ್ಥೆ ಎಷ್ಟು ಅಧ್ವಾನವಾಗಿರುತ್ತದೆಯೆಂಬ ಸತ್ಯ ನಮ್ಮ ರೈತರಿಗೆ ಗೊತ್ತಾಗಿದೆ. ಹೀಗಾಗಿಯೇ ಇವತ್ತಿನ ಸರಕಾರದ ಭೂಸ್ವಾಧೀನ ಪ್ರಕ್ರಿಯೆಗಳಿಗೆ ಹಿಂದೆಂದಿಗಿಂತ ಇಂದು ಹೆಚ್ಚು ಪ್ರತಿರೋಧ ವ್ಯಕ್ತವಾಗುತ್ತಿದೆ.

**ಭೂಸ್ವಾಧೀನ ಮತ್ತು ಸಂವಿಧಾನ**

ನಮ್ಮ ಸಂವಿಧಾನ ರಚಿಸಿದವರು ಭೂಮಿಯನ್ನು ಖರೀದಿಸುವ, ಮಾರುವ ಮತ್ತು ಅದನ್ನು ಅನುಭವಿಸುವ ಹಕ್ಕನ್ನು ಭಾರತೀಯರಿಗೆ ಮೂಲಭೂತ ಹಕ್ಕನ್ನಾಗಿ ನೀಡಿದ್ದರು. ಸಂವಿಧಾನದ ೧೯(೧)ಎಫ್ ನಿಯಮದ ಪ್ರಕಾರ ಭೂಮಿಯ ಒಡೆತನ ವ್ಯಕ್ತಿಯೊಬ್ಬನ ಮೂಲಭೂತ ಹಕ್ಕನ್ನಾಗಿ ಪರಿಗಣಿಸಲಾಗಿತ್ತು.

ಆದರೆ ಭಾರತದಲ್ಲಿ ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದಿರುವ ಜಮೀನ್ದಾರಿ ಪದ್ಧತಿಯನ್ನು ರದ್ದುಗೊಳಿಸಲು ಮತ್ತು ಫ್ಯೂಡಲ್ ವ್ಯವಸ್ಥೆಯನ್ನು ನಿರ್ಮೂಲನೆ ಮಾಡಲು ಎಪ್ಪತ್ತರ ದಶಕದಲ್ಲಿ ಈ ನಿಯಮಕ್ಕೆ ತಿದ್ದುಪಡಿ ತರಲಾಯಿತು.

ಇದರಂತೆ ೧೯(೧)ಎಫ್ ನಿಯಮವನ್ನು ಸಂವಿಧಾನದ ೪೪ನೇ ತಿದ್ದುಪಡಿಯ ಅನ್ವಯ ಕಿತ್ತುಹಾಕಲಾಯಿತು. ಇದರಿಂದ ಭಾರತೀಯರಿಗಿದ್ದ ಆಸ್ತಿಯ ಮೇಲಿನ ಮೂಲಭೂತ ಹಕ್ಕನ್ನು ಕಸಿದುಕೊಳ್ಳಲಾಯಿತು.

ದುರಂತವೆಂದರೆ, ಯಾವ ಜಮೀನ್ದಾರಿ ಪದ್ಧತಿಯನ್ನು ನಿರ್ಮೂಲನೆಗೊಳಿಸಲು ಈ ತಿದ್ದುಪಡಿಯನ್ನು ತರಲಾಯಿತೋ, ಅದೇ ತಿದ್ದುಪಡಿ ಇವತ್ತು ಬೃಹತ್ ಉದ್ದಿಮೆದಾರರ, ಕಾರ್ಪೊರೇಟ್ ಕಂಪನಿಗಳ ನವ ಜಮೀನ್ದಾರಿ ಪದ್ಧತಿಗೆ ಕಾರಣವಾಗಿದೆ.

**ಭೂಮಿ : ರೈತನ ಸಾಂಸ್ಕೃತಿಕ ಅಸ್ಮಿತೆ**

ಭೂಮಿಯೆಂಬುದು ಭಾರತೀಯ ರೈತನ ಮಟ್ಟಿಗೆ ಒಂದು ಭಾವನಾತ್ಮಕ ವಿಷಯ. ಯಾಕೆಂದರೆ, ಅದು ಆತನಿಗೊಂದು ಐಡೆಂಟಿಟಿಯನ್ನು ನೀಡುತ್ತದೆ ಮತ್ತು ಆತನ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಅಸ್ತಿತ್ವದ ಪ್ರತೀಕವಾಗಿದೆ.

ಭೂಮಿಯೆನ್ನುವುದು ನಮ್ಮ ಅಸ್ಮಿತೆಯ ಪ್ರಶ್ನೆಯಾಗಿದೆ. ಯಾಕೆಂದರೆ ಭೂಮಿ ಅಂದರೆ ನಾವು ಬದುಕುವ ರೀತಿ ಯಾಗಿದೆ. ಅದು ನಮ್ಮ ಭಾಷೆ, ಉಡುಪು ಮತ್ತು ಜೀವನ ಶೈಲಿಗಳನ್ನು ರೂಪಿಸುವಷ್ಟರಮಟ್ಟಿಗೆ ಪ್ರಭಾವಶಾಲಿಯಾಗಿದೆ. ಅದೂ ಅಲ್ಲದೆ, ಭೂಮಿಯೆನ್ನುವುದು ನಮ್ಮ ತಲೆತಲಾಂತರ ಗಳ ನೆನಪುಗಳ ಆಸ್ತಿ. ಅದು ನಮ್ಮ ವರ್ತಮಾನವನ್ನು, ಭೂತದೊಂದಿಗೆ ಬೆಸೆಯುವ ಸೇತುವೆಯಾಗಿದೆ.

ಪರಂಪರಾನುಗತವಾಗಿ ಕೃಷಿ ಚಟುವಟಿಕೆ ನಡೆಸುತ್ತ ಬಂದಿರುವ ರೈತನಿಗೆ ಭೂಮಿಯು ಮಾರಾಟದ ಸರಕಲ್ಲ. ಅದು ಆತನ ಬದುಕಿನೊಂದಿಗೆ ಭಾವನಾತ್ಮಕವಾಗಿ ತಳುಕುಹಾಕಿಕೊಂಡಿದೆ.

ಹೀಗಾಗಿಯೇ ಕೈಗೊಂದಿಷ್ಟು ಲಕ್ಷಗಳನ್ನು ಕೊಟ್ಟು, ''ನಿನ್ನ ಭೂಮಿಯನ್ನು ನಮಗೆ ಕೊಟ್ಟುಬಿಡಿ'' ಎನ್ನುವ ಸರಕಾರಗಳ ನೀತಿ ರೈತರನ್ನು ಕೆರಳಿಸಿದೆ. ಭಾರತೀಯ ರೈತನೊಬ್ಬನ ಬದುಕಿನ ಕ್ರಮವೇ ಭೂಮಿಯೊಂದಿಗಿನ ಒಡನಾಟವಾಗಿರುವಾಗ, ಅದನ್ನು ಮಾರುಕಟ್ಟೆಯಲ್ಲಿ ಬಿಕರಿ ಮಾಡಬಹುದಾದ ಒಂದು ವಸ್ತುವಿನಂತೆ ಪರಿಗಣಿಸುವ ಸರಕಾರದ ಕ್ರಮವನ್ನು ಯಾವ ರೈತನೂ ಒಪ್ಪಲಾರ.

**ಭೂಸ್ವಾಧೀನ : ಪರಿಹಾರವೇನು ?**

ಬಹುಶಃ ಭೂಸ್ವಾಧೀನದ ಪಿಡುಗಿಗೆ ಪರಿಹಾರವೆಂದರೆ ಸರಕಾರಗಳು ತಮ್ಮ ಆರ್ಥಿಕ ನೀತಿಯ-ಚಿಂತನಾಕ್ರಮ ಗಳನ್ನು ಬದಲಿಸಿಕೊಳ್ಳುವುದೇ ಆಗಿದೆ. ಅಂದರೆ ಪಶ್ಚಿಮ ಪ್ರೇರಿತ ಅಭಿವೃದ್ಧಿಯ ಕಲ್ಪನೆಯನ್ನು ನಮ್ಮ ಯೋಚನಾ ಕ್ರಮದಿಂದ ತೊಡೆದುಹಾಕಿ, ಪರ್ಯಾಯ ಮಾರ್ಗಗಳನ್ನು ಹುಡುಕಿಕೊಳ್ಳಬೇಕಿದೆ.

ಲಕ್ಷಾಂತರ ಹೆಕ್ಟೇರ್ ಕೃಷಿಭೂಮಿಯನ್ನು ನಾಶಗೊಳಿಸಿ ಬೃಹತ್ ಉದ್ದಿಮೆಗಳನ್ನು ಸ್ಥಾಪಿಸುವ ಹುನ್ನಾರದ ಹಿಂದಿರುವ ಬಂಡವಾಳಶಾಹಿ ಹಿತಾಸಕ್ತಿಗಳ ಮಸಲತ್ತನ್ನು ಅರ್ಥಮಾಡಿ ಕೊಂಡು ಹೊಸ ರೀತಿಯ ಅಭಿವೃದ್ಧಿಯ ಬಗ್ಗೆ ನಮ್ಮನ್ನು ತೊಡಗಿಸಿಕೊಳ್ಳುವುದು ಇಂದು ಅನಿವಾರ್ಯವಾಗಿದೆ. ಆದ್ದರಿಂದ ಕೃಷಿಯನ್ನೇ ಒಂದು ಕೈಗಾರಿಕೆಯನ್ನಾಗಿ ನೋಡಿ ಬೆಳೆಸುವ ಪರಿಪಾಠವನ್ನು ನಾವು ಶುರು ಮಾಡಬೇಕಿದೆ. ನಮ್ಮ ಶ್ರಮ, ಬಂಡವಾಳ, ತಂತ್ರಜ್ಞಾನಗಳನ್ನು ಕೃಷಿಯಲ್ಲಿ ಹೂಡಿ, ಕೈಗಾರಿಕೆಗಳ ಅಭಿವೃದ್ಧಿ ಸೂತ್ರಗಳಿಂದ ಬೇಡಿಕೆ, ಉತ್ಪಾದನೆ, ಮಾರುಕಟ್ಟೆ ಜಾಲ, ಮತ್ತು ವಿತರಣಾ ವ್ಯವಸ್ಥೆಗಳನ್ನು ಕೃಷಿಯಲ್ಲಿಯೂ ಅಳವಡಿಸಿಕೊಳ್ಳುವುದು ಅಗತ್ಯವಾಗಿದೆ.

**ಕೊನೆಯ ಮಾತು**

ಇದು ಸುಲಭಸಾಧ್ಯವಾದ ಮಾತಲ್ಲ. ಯಾಕೆಂದರೆ ಬಂಡವಾಳಶಾಹಿಗಳ ಕಪಿಮುಷ್ಟಿಯಲ್ಲಿರುವ ನಮ್ಮ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಯಾಗಬೇಕಿದೆ. ಕೃಷಿ ಪ್ರಧಾನ ಅರ್ಥವ್ಯವಸ್ಥೆಯ ಬಗ್ಗೆ ಸಾಕಷ್ಟು ಸಂಶೋಧನೆ, ಚರ್ಚೆಗಳು ಆಗಬೇಕಿದೆ.

ನಮ್ಮೆಲ್ಲಾ ಆರ್ಥಿಕ ಚಿಂತಕರು, ಕೃಷಿ ಪಂಡಿತರು, ವಿಚಾರವಂತರು, ಈಗಲಾದರೂ ಈ ದಿಸೆಯಲ್ಲಿ ತಮ್ಮ ಚಿಂತನೆಗಳನ್ನು ಪ್ರಾರಂಭಿಸದಿದ್ದಲ್ಲಿ ಅಪಾಯ ಕಾದಿದೆ.

**ಕು. ಸ. ಮಧುಸೂದನ್**

ವಿಜಯಾ ಬ್ಯಾಂಕ್ ಮಹಡಿ, ರಂಗೇನಹಳ್ಳಿ - ೫೭೭ ೧೪೪,
ಚಿಕ್ಕಮಗಳೂರು ಜಿಲ್ಲೆ.

# ಅಮೆರಿಕ : ಇನ್ನೂ ಮುಂದುರಿಯುತ್ತಿರುವ ಕರಿಯರ ಬೇಟೆ






ಟ್ರೇಯವಾನ್ ಮಾರ್ಟಿನ್

**ಕ**ಳೆದ ಶತಮಾನದ ನಡುವಿನಲ್ಲಿ ಅಮೆರಿಕಾದ ನೀಗ್ರೋಗಳು – ಕಪ್ಪು ಜನಾಂಗದವರು, ಅರ್ಥಾತ್ ಕರಿಯರು, ಈಗ ಅವರನ್ನು ಆಫ್ರಿಕನ್ ಅಮೆರಿಕನ್ನರೆಂದು ಕರೆಯುತ್ತಾರೆ - ಸಮಾನ ಹಕ್ಕುಗಳಿಗಾಗಿ ಬಹುದೊಡ್ಡ ಹೋರಾಟ ನಡೆಸಿ ಯಶಸ್ವಿಯಾದರು. ಶಾಂತಿಯುತವಾದ ಅವರ ಈ ಹೋರಾಟಕ್ಕೆ ನೇತೃತ್ವ ವಹಿಸಿದ್ದವರು ಮಾರ್ಟಿನ್ ಲೂಥರ್ ಕಿಂಗ್ - ಗಾಂಧಿವಾದಿಯಾಗಿದ್ದ ಈತನಿಗೆ ೧೯೬೪ರಲ್ಲಿ ನೊಬೆಲ್ ಶಾಂತಿ ಪುರಸ್ಕಾರ ಲಭಿಸಿತು. ೧೯೬೩ರಲ್ಲಿ ಅವರ ನಾಯಕತ್ವದಲ್ಲಿ ವಾಷಿಂಗ್ಟನ್‌ನಲ್ಲಿ ಎರಡು ಲಕ್ಷ ಜನ ತಮ್ಮ ನ್ಯಾಯಯುತವಾದ ಹಕ್ಕುಗಳಿಗಾಗಿ ಪ್ರದರ್ಶನ ನಡೆಸಿದರು. ತನ್ನ ಜನಕ್ಕೆ ಗೌರವಯುತವಾದ ಬದುಕು ನೀಡಲು ಚಳವಳಿ ನಡೆಸಿದ ಮಾರ್ಟಿನ್ ಲೂಥರ್ ಕಿಂಗ್ ಬಲಿಯಾದದ್ದು ಕೂಡ ಬಿಳಿಯನೊಬ್ಬನ ಗುಂಡಿಗೆ. ಗುಲಾಮಗಿರಿಯಿಂದ ನಾಗರಿಕ ಹಕ್ಕುಗಳನ್ನು ಪಡೆದುಕೊಳ್ಳುವವರೆಗೆ ಬಿಳಿಯರ ದಬ್ಬಾಳಿಕೆ, ಹಿಂಸಾಚಾರಗಳ ವಿರುದ್ಧವಾಗಿ ಕಪ್ಪು ಜನಾಂಗದವರು ನಡೆಸಿರುವ ಸುದೀರ್ಘವಾದ ಹೋರಾಟ ಒಂದು ವೀರಗಾಥೆ. ಇಂದಿಗೂ ಅವರ ಹೋರಾಟ ಮುಂದುವರಿದಿದೆ. ಅದು ನಿರಂತರ. ಒಂದು ಕಾಲದಲ್ಲಿ, ಅಂದರೆ ಕಳೆದ ಶತಮಾನದ ಪ್ರಾರಂಭ ಮತ್ತು ಹತ್ತೊಂಭತ್ತನೇ ಶತಮಾನದ ಅಂತ್ಯದಲ್ಲಿ 'ಕೂಕ್ಲುಕ್ಸ್ ಕ್ಲಾನ್' ಎಂಬ ಬಿಳಿಯರ ರಹಸ್ಯ ಸಂಘಟನೆಯ ಸದಸ್ಯರಿಂದ ಹಿಂಸೆಗೆ ಒಳಗಾಗಿ, ಚಿತ್ರಹಿಂಸೆ ಅನುಭವಿಸಿದ ಈ ಜನಾಂಗ ಇಪ್ಪತ್ತೊಂದನೇ ಶತಮಾನದಲ್ಲೂ ಅದರಿಂದ ಮುಕ್ತವಾಗಿಲ್ಲ. ಈಗಲೂ ಬಿಳಿಯರ ಅಟ್ಟಹಾಸ, ಹಿಂಸಾಚಾರ ಆಗಾಗ್ಗೆ ಮರುಕಳಿಸುತ್ತಿರುತ್ತದೆ. ಮಾನವ ಹಕ್ಕುಗಳ ಪ್ರತಿಪಾದಕ ತಾನೊಬ್ಬನೇ ಎಂದು ಬಡಾಯಿ ಕೊಚ್ಚಿಕೊಳ್ಳುವ ಅಮೆರಿಕದ ಆಡಳಿತ ವರ್ಗ ತನ್ನ ನೆಲದಲ್ಲೆ ಸಂಭವಿಸುವ ಕಪ್ಪು ಜನರ ಹಕ್ಕುಗಳ ಅಪಹರಣದ ಕುರಿತು ಮೌನವಹಿಸುತ್ತದೆ. ಅಂಥ ಪ್ರಕರಣಗಳು ಮಾಧ್ಯಮಗಳಲ್ಲಿ ಕಾಣಿಸಿಕೊಳ್ಳುವುದೇ ಇಲ್ಲ.

ಮೊದಲ ಬಾರಿಗೆ ಆಫ್ರಿಕನ್ ಅಮೆರಿಕನ್ ಒಬ್ಬನನ್ನು ಅಧ್ಯಕ್ಷ ಪದವಿಗೇರಿಸಿದ್ದರೂ ಅಮೆರಿಕದಲ್ಲಿ ಕರಿಯರ ಮೇಲೆ ನಡೆಯುವ ದೌರ್ಜನ್ಯ ಮಾತ್ರ ಮುಂದುವರಿಯುತ್ತಿದೆ. ಅಮೆರಿಕದ ಇತಿಹಾಸವನ್ನು ಅಧ್ಯಯನ ಮಾಡಿದರೆ ಕರಿಯ ಜನಾಂಗದವರು ಅನುಭವಿಸಿರುವ ಬವಣೆ ವೇದ್ಯವಾಗುತ್ತದೆ. ನಮ್ಮ ಭಾರತ ದೇಶದಲ್ಲಿ ನೀಚವಾದ ಜಾತಿಪದ್ಧತಿ, ದಲಿತರ ಮೇಲಿನ ದೌರ್ಜನ್ಯದ ಮುಂದುವರಿಕೆಗೆ, ಒಂದು ರೀತಿಯಲ್ಲಿ ಅಮೆರಿಕದ ಆಫ್ರಿಕನ್ ಅಮೆರಿಕನ್ನರ ಸ್ಥಿತಿಯನ್ನು ಹೋಲಿಸಬಹುದು. ಬಹುಮಟ್ಟಿಗೆ ಕಪ್ಪು ಜನಾಂಗದವರು ಪ್ರತ್ಯೇಕವಾಗಿ, ಅಷ್ಟೇನೂ ನಾಗರಿಕ ಸೌಲಭ್ಯಗಳಿಲ್ಲದ ಕಡೆಗಳಲ್ಲಿ ವಾಸಿಸುವುದನ್ನು ಅಮೆರಿಕಾಗೆ ಹೋದವರು ಕಾಣಬಹುದು. ಸಂಖ್ಯಾಬಾಹುಳ್ಯದಿಂದ ಅಧಿಕವಾಗಿರುವ ಈ ಕಪ್ಪು ಜನಾಂಗದವರು ಅಮೆರಿಕದ ಮೂಲನಿವಾಸಿಗಳಾದ ರೆಡ್ ಇಂಡಿಯನ್ನರಂತೆ ಮೂಲೆ ಗುಂಪಾಗುವುದು ಸಾಧ್ಯವಿಲ್ಲ. ಬಡತನ, ನಿರುದ್ಯೋಗಗಳ ಬವಣೆಯನ್ನು ಅನುಭವಿಸುತ್ತಿರುವ ಕಪ್ಪು ಜನಾಂಗದವರು – ಇವರಲ್ಲಿ ನಿರುದ್ಯೋಗಿಗಳ ಪ್ರಮಾಣ ಶೇಕಡ ೧೧ಕ್ಕೂ ಹೆಚ್ಚು . ಜೊತೆಗೆ ಬಿಳಿಯರ ಹಿಂಸೆಯನ್ನೂ ಅನುಭವಿಸಬೇಕಾಗಿದೆ. ಇದರ ಮೇಲೆ ಪೊಲೀಸರ ಕೆಂಗಣ್ಣು ಯಾವಾಗಲೂ ಇವರ ಮೇಲೇ ಇರುತ್ತದೆ.

ಈ ವರ್ಷದ ಫೆಬ್ರವರಿ ೬ರಂದು ಫ್ಲಾರಿಡಾದ ಸ್ಯಾನ್‌ಫೋರ್ಡ್ ಎಂಬಲ್ಲಿ ಹದಿನೇಳು ವಯಸ್ಸಿನ ಬಾಲಕ ಟ್ರೇಯವಾನ್ ಮಾರ್ಟಿನ್ ಬಿಳಿಯನೊಬ್ಬನ ಗುಂಡಿಗೆ ಬಲಿಯಾದ. ಮಾರ್ಟಿನ್ ಎಸಗಿದ ಅಪರಾಧವೇನೆಂದರೆ ಬಿಳಿಯರು ವಾಸಿಸುತ್ತಿರುವ ಖಾಸಗಿ ಪ್ರದೇಶದಲ್ಲಿ ನಡೆದುಹೋಗುತ್ತಿದ್ದುದು. ಅವನು ಹೋಗುತ್ತಿದ್ದುದು ಸಮೀಪದಲ್ಲೇ ಇದ್ದ ಅಂಗಡಿಗೆ, ತಿಂಡಿ ಕೊಳ್ಳುವುದಕ್ಕಾಗಿ. ಅವನು ಹೋಗುತ್ತಿದ್ದುದನ್ನು ಕಂಡವನು ಬಿಳಿಯ ಧಾಂಡಿಗ ಜಿಮ್ಮರ್‌ಮನ್ ಎಂಬಾತ. ಮಾರ್ಟಿನ್‌ಅನ್ನು ಹಿಂಬಾಲಿಸಿದ ಜಿಮ್ಮರ್‌ಮನ್ ತನ್ನ ಪಿಸ್ತೂಲಿನಿಂದ ಗುಂಡು ಹಾರಿಸಿ ಕೊಂದುಹಾಕಿದ. ಜಿಮ್ಮರ್‌ಮನ್‌ನನ್ನು ಪೊಲೀಸರು ಈವರೆಗೆ ಬಂಧಿಸಿಲ್ಲ. ಕಾರಣ ೨೦೦೫ರ ಫ್ಲಾರಿಡಾ ಕಾಯಿದೆಯಡಿ ಅವನು ಕೊಂದಿದ್ದು ಅಪರಾಧವಲ್ಲ, ಆತ್ಮರಕ್ಷಣೆಗಾಗಿ ಎನ್ನುವುದು. ಈ ವಿಚಿತ್ರ ಕಾಯಿದೆಯ ಪ್ರಕಾರ ಬಿಳಿಯರು ಏನೇ ಮಾಡಿದರೂ ಅದು ಅಪರಾಧ ಎನಿಸುವುದಿಲ್ಲ. ಮಾರ್ಟಿನ್‌ನ ಕೊಲೆ ಪ್ರತಿಭಟಿಸಿ, ಕೊಲೆಗಾರ ಜಿಮ್ಮರ್‌ಮನ್‌ನನ್ನು ಬಂಧಿಸಿ ವಿಚಾರಣೆಗೊಳಪಡಿಸಬೇಕೆಂದು ದೇಶಾದ್ಯಂತ ಪ್ರತಿಭಟನಾ ಪ್ರದರ್ಶನಗಳು ನಡೆದಿವೆ. ಮಾರ್ಟಿನ್ ಕೊಲೆಯ ಪ್ರಕರಣ ನಮ್ಮ ಪತ್ರಿಕೆಗಳು, ಮಾಧ್ಯಮಗಳಲ್ಲಿ ವರದಿಯಾಗಲೇ ಇಲ್ಲ. ಅಮೆರಿಕಾದ ಟೆಲಿವಿಷನ್ ಕಂಪನಿಗಳೂ ಕೂಡ ಪ್ರಕರಣವನ್ನು ಕಡೆಗಣಿಸಿದುವು. ಹೇಗಿದೆ ನೋಡಿ ಮಾಧ್ಯಮಗಳು ತೋರುವ ವೃತ್ತಿಧರ್ಮ! ಇತ್ತ ಪೊಲೀಸರೂ ಮೊಕದ್ದಮೆ ದಾಖಲಿಸಲಿಲ್ಲ, ಮಾಧ್ಯಮಗಳೂ ಪ್ರಚಾರ ನೀಡಲಿಲ್ಲ. ಹಾಗಾಗಿ ಕೊಲೆಪಾತಕಿ ಜಿಮ್ಮರ್‌ಮನ್ ಇನ್ನೂ

**ಸೀಯಾರ್ಕೆ**



*'ಹುದ್' ಧರಿಸುವುದು ಅಪರಾಧವೆ ?*

ನಿರಪರಾಧಿ. ಹೀಗಿದೆ ನೋಡಿ ಅಮೆರಿಕಾದ ನ್ಯಾಯ ವಿತರಣೆ !

ಅಮೆರಿಕಾದಲ್ಲಿ ಮಾರ್ಟಿನ್ ಕೊಲೆಯಂಥ ಪ್ರಕರಣಗಳು ಅಪರೂಪವೇನಲ್ಲ. ಅವನ ಅಪರಾಧ ಕರಿಯನಾಗಿ ಹುಟ್ಟಿದ್ದು, ಅವನು ಹಾಕಿಕೊಂಡಿದ್ದ ಅಂಗಿಗೆ ಲಗತ್ತಾಗಿದ್ದ 'ಹುಡ್' (ಒಂದು ಬಗೆಯ ಕುಲಾವಿ) ಅನ್ನು ತಲೆಯ ಮೇಲೆ ಧರಿಸಿಕೊಂಡಿದ್ದುದು. ಅಮೆರಿಕಾದಲ್ಲಿ ಛಳಿಯಿಂದಾಗಿ ಈ ಬಗೆಯ ಹುಡ್ ಧರಿಸುತ್ತಾರೆ. ಆಫ್ರಿಕನ್ ಅಮೆರಿಕನ್ ಯುವಕರಲ್ಲಿ ಇದು ಹೆಚ್ಚು ಬಳಕೆಯಾಗುತ್ತದೆ. ಬಿಳಿಯರಿಗೆ ಇದು ಅಸಹನೀಯ. ಷಿಕಾಗೋ ಪ್ರಾಂತದ ಕಾಂಗ್ರೆಸ್‌ಮನ್ ಈ ದಿರಸಿನಲ್ಲಿದ್ದುದಕ್ಕೆ ಸದನದಲ್ಲಿ ಪ್ರವೇಶ ದೊರಕಲಿಲ್ಲ. ಮಾರ್ಟಿನ್ ಕೊಲೆಯಾದ ಕೆಲದಿನಗಳ ಹಿಂದೆ ನ್ಯೂಯಾರ್ಕ್ ಪೊಲೀಸರು ೧೮ ವಯಸ್ಸಿನ ಯುವಕ ರ್‍ಯಾಮರ್ಲೆ ಗ್ರಹಾಮ್‌ನನ್ನು ಕೊಂದುಹಾಕಿದರು. ಅವನ ಬಳಿ ಅಲ್ಪ ಪ್ರಮಾಣದ ಮಾರಿಜುವಾನ್ ಇದ್ದದ್ದೇ ಅಪರಾಧ. ಅದೇ ವಾರ ಷಿಕಾಗೋ ನಗರದಲ್ಲಿ ಸ್ಟೀಫನ್ ವಾಟ್ಸ್ ಎಂಬ ೧೫ ವಯಸ್ಸಿನ ಬಾಲಕನನ್ನು ಪೊಲೀಸರು ಗುಂಡಿಟ್ಟು ಕೊಂದರು. ಅವನು ಎಸಗಿದ ಅಪರಾಧ ಪೊಲೀಸರಿಗೆ ವಿಧೇಯತೆ ತೋರದಿದ್ದುದು. ಮಾರ್ಚ್ ತಿಂಗಳಲ್ಲಿ ಕೆಂಡ್ರೀ ಮಿಡಾಡ್ ಎಂಬ ೧೯ನೇ ವಯಸ್ಸಿನ ಯುವಕನನ್ನು ಪಸಾಡೆನಾ ಪೊಲೀಸರು ಕೊಂದುಹಾಕಿದರು. ನ್ಯೂಬರೋದ ಪೊಲೀಸರು ಮೈಕೇಲ್ ಲೆಂಬಾರ್ಡ್ ಎಂಬ ಯುವಕನನ್ನು ಕೊಂದುಹಾಕಿದರು. ಕೊಲೆಯಾದವರೆಲ್ಲ ಕರಿಯರು ಮತ್ತು ಅಮಾಯಕರು. ಅವರಾರ ಬಳಿಯೂ ಮಾರಕಾಸ್ತ್ರಗಳಿರಲಿಲ್ಲ. ಇಂಥ ಪ್ರಕರಣಗಳು ಜರುಗುತ್ತಲೇ ಇರುತ್ತವೆ. ಪಟ್ಟಿಯನ್ನು ನೀಡುತ್ತ ಹೋಗಬಹುದು. ಆದರೆ ಇವು ಯಾವುವೂ ವರದಿಯಾಗುವುದಿಲ್ಲ, ನ್ಯಾಯಾಲಯದ ಮುಂದೆಯೂ ಬರುವುದಿಲ್ಲ. ಇಂಥ ಎನ್‌ಕೌಂಟರುಗಳು ಮಾನವ ಹಕ್ಕುಗಳ ಉಲ್ಲಂಘನೆ ಅಲ್ಲವೆ ?

ಅಮೆರಿಕಾದಲ್ಲಿ ಇವತ್ತಿಗೂ ಆಫ್ರಿಕನ್ ಅಮೆರಿಕನ್ನರು, ಹಿಸ್ಪಿಯಾನಿಕ್ ಜನಾಂಗದವರು, ರೆಡ್ ಇಂಡಿಯನ್ನರು ಹಾಗೂ ಇತರ ಅಲ್ಪಸಂಖ್ಯಾತರು ಎರಡನೆ ದರ್ಜೆ ನಾಗರಿಕರೇ, ಬಿಳಿಯರ ಆಟಾಟೋಪಗಳಿಗೆ, ದಬ್ಬಾಳಿಕೆಗೆ ಬಲಿಯಾಗುವವರೇ. ಕಪ್ಪು ಜನಾಂಗಕ್ಕೆ ಸೇರಿದ ಒಬಾಮಾ ಅಧ್ಯಕ್ಷನಾಗಿ ಆಯ್ಕೆಗೊಂಡಿದ್ದರೂ ಎಲ್ಲ ಬಿಳಿಯರೂ ಮಾನ್ಯ ಮಾಡುವುದಿಲ್ಲ. ರಿಪಬ್ಲಿಕನ್ ಪಕ್ಷ ಅವರನ್ನು ಅಮೆರಿಕನ್ ಎಂದೇ ಪರಿಗಣಿಸುತ್ತಿಲ್ಲ. ಆತ ಅಮೆರಿಕನ್ ಸಂಜಾತನಲ್ಲ, ಇಸ್ಲಾಂ ಧರ್ಮೀಯ ಎಂದೇ ಅವರ ಅಂಬೋಣ. ಒಬಾಮಾ ಅಧ್ಯಕ್ಷ ಗದ್ದುಗೆ ಏರಿದ ಮೇಲೆ ಅವರನ್ನು ವಿರೋಧಿಸಲು ರಿಪಬ್ಲಿಕನ್ ಪಕ್ಷದ ಬಲಪಂಥೀಯರು 'ಟೀ ಪಾರ್ಟಿ' ಎಂಬ ಪ್ರತ್ಯೇಕ ಗುಂಪನ್ನು ಸ್ಥಾಪಿಸಿಕೊಂಡಿದ್ದಾರೆ.

ಅಮೆರಿಕದ ಬಿಳಿಯರು ಹೊರಗಿನಿಂದ, ಬಹುತೇಕ ಯೂರೋಪಿನಿಂದ, ಬಂದು ನೆಲೆಸಿ ಮೂಲನಿವಾಸಿಗಳನ್ನು ಬೇಟೆಯಾಡಿ ಸಂಪನ್ಮೂಲಗಳನ್ನು ದೋಚಿಕೊಂಡವರು. ಆಫ್ರಿಕಾದಿಂದ ಕರಿಯರನ್ನು ಗುಲಾಮರಾಗಿ ತಂದು, ದುಡಿಸಿಕೊಂಡು ತಮ್ಮ ಸಂಪತ್ತನ್ನು ವೃದ್ಧಿಪಡಿಸಿಕೊಂಡವರು. ಈಗಲೂ ಅವರನ್ನು ಸಮಾನವೆಂದು ಒಪ್ಪುವುದಿಲ್ಲ. ಇಂಥ ಪ್ರಕರಣಗಳೇ ಅದಕ್ಕೆ ಸಾಕ್ಷಿ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫




ಯಾಕೆ ದುಃಖಿಸುತ್ತೀರಿ;
ನನ್ನ ಮಿತ್ರರೆಲ್ಲ ಹಾಯಾಗಿದ್ದಾರೆ
ಶತಶತಮಾನಗಳಿಂದಲೂ...

ಮೊನ್ನೆ ಮೊನ್ನೆ ನುಣುಪು ಕೋಣೆಗಳಲ್ಲಿ ಕಕ್ಕಸ್ಸು ಬಾಚಿ
ನಡುಬೀದಿಯಲ್ಲಿ ತಲೆಮೇಲೆ ಸುರಿದು ಸಿಡಿದದ್ದು ನಿಜ;
ಮತ್ತದೇ ಅಂಗಿಯಲ್ಲೀಗ ಸುಡುಸುಡು ಸುಡುವ
ಬಯಲ ಬತ್ತಿದ ಕೆರೆದಂಡೆಯ ಅರಳಿಕಟ್ಟೆಯಲ್ಲಿ
ಮುಸ್ಸಂಜೆಯ ಗಮಗಮ ನಿಶಾಗಂಧಿಗಳೊಂದಿಗೆ
ಸುಖದ ವಿನಿಮಯದ ಸಂಭ್ರಮ.

ಬೇಡವೆಂದದ್ದು ಬೇಕು ಎಂಬಂತೆ,
ಚರಂಡಿಯಲ್ಲಿ ಅರ್ಧ ಕೊಳೆತ
ನಿಮ್ಮ ಚಡ್ಡಿ, ಲಂಗಗಳ ಹರೆಯವ ಹೀರಿ, ಮುದಗೊಂಡು
ಮಣ್ಣುಕೂಡ ಹೀರದ ಉಗುಳು, ಕೊಳೆಗಳನ್ನು
ಮಳೆಯಂತೆ ತೊಳೆವ ನಿತ್ಯ ತೃಪ್ತಿ.

ಯಾಕೆ ಭಯಪಡುತ್ತೀರಿ;
ನನ್ನ ಮಿತ್ರರೆಲ್ಲ ಬಲು ಮುಗ್ಧರು
ಶತಶತಮಾನಗಳಿಂದಲೂ...

ಮೈಯ ದರಿದ್ರ ಉರಿಗಳನ್ನೆಲ್ಲ ಮೋಡಗಳಿಗುಣಿಸಿ
ಬಯಲ ಹಸಿರವ್ವನ ತಬ್ಬಿ ಸುಖಿನಿದ್ದೆ
ಇರಬಹುದು - ನಿನ್ನೆ ಘನಘೋರ ಮಳೆ ಸುರಿದದ್ದು,
ಗಂಟಲೊಡಕೊಂಡ ಸಿಡಿಲು ಜೀವ ನೆಕ್ಕಿದ್ದು...
ದೇವರಾಣೆಗೂ ತಪ್ಪು ಇವರದಲ್ಲ.

ನದಿ, ಕಡಲ ತೀರದ ಜನರೇ...
ನೀವು ಸ್ಥಳಾಂತರಗೊಳ್ಳುವುದು ಬೇಕಿಲ್ಲ.
ನನ್ನ ಮಿತ್ರರಾರೂ ಕಣ್ಣೀರಿಡುತ್ತಿಲ್ಲ -
ಬೆವರಿದ್ದು ಸ್ವಲ್ಪ ಹೆಚ್ಚಾಯಿತು ಅಷ್ಟೆ!

**ಕಾಜೂರು ಸತೀಶ್**
ಕಾಜೂರು ಗ್ರಾಮ, ಐಗೂರು ಅಂಚೆ, ಸೋಮವಾರ ಪೇಟೆ ತಾಲೂಕು - ೫೭೧ ೨೫೧, ಕೊಡಗು ಜಿಲ್ಲೆ

ಮೂಲ ಹಿಂದಿ ಕಥೆ : **ಮುನ್ಶಿ ಪ್ರೇಮಚಂದ್**
ಕನ್ನಡಕ್ಕೆ : **ಟಿ. ಎಸ್. ಲಲಿತ**

ಜಗತ್‌ಸಿಂಹ ಏಡನ್‌ನಲ್ಲಿ ಮೂರು ತಿಂಗಳು ಕಳೆದ. ಹೊಸ ಹೊಸ ಅನುಭವಗಳು ಅವನನ್ನು ಮುಗ್ಧನನ್ನಾಗಿಸಿದ್ದವು. ಆದರೆ ಹಿಂದಿನ ಸಂಸ್ಕಾರಗಳು ಮತ್ತೆ ಜಾಗ್ರತಗೊಳ್ಳತೊಡಗಿದವು. ಈಗ ತನ್ನ ವಾತ್ಸಲ್ಯಮಯಿ ತಾಯಿಯ ನೆನಪಾಗತೊಡಗಿತು. ತಂದೆಯ ಕೋಪ, ತಂಗಿಯರ ತಿರಸ್ಕಾರಗಳಿಂದ ಅವನನ್ನು ರಕ್ಷಿಸುತ್ತಿದ್ದಳು. ತಾನು ಖಾಯಿಲೆ ಬಿದ್ದ ಆ ದಿನದ ನೆನಪಾಯ್ತು. ತಾನುಳಿಯುವ ಆಸೆಯೇ ಇರಲಿಲ್ಲ, ತಂದೆಗಾಗಲೀ, ಸೋದರಿಯರಿಗಾಗಲೀ ಸ್ವಲ್ಪವೂ ಚಿಂತೆ ಇಲ್ಲ, ತಾಯಿ ಮಾತ್ರ ರಾತ್ರಿಯೆಲ್ಲಾ ಅವನ ಹಾಸಿಗೆಯ ಬಳಿ ಕೂತು ಒಳ್ಳೆಯ ಮಾತಿನಿಂದ ಅವನ ನೋವು ಪರಿಹರಿಸಲು ಪ್ರಯತ್ನಿಸುವಳು. ಎಷ್ಟೋ ಬಾರಿ ಅವಳು ಅಳುತ್ತಿದ್ದುದೂ ಇತ್ತು. ಸ್ವತಃ ತಾನೇ ರೋಗದಿಂದ ನರಳುತ್ತಿದ್ದರೂ ತನ್ನ ಸೇವೆ ಮಾಡುವಳು. ಆ ಅಮ್ಮನ ದರ್ಶನ ಪುನಃ ಆದೀತೇನು ? ಇದೇ ನಿರಾಸೆಯಲ್ಲೇ ಗಂಟೆಗಟ್ಟಲೆ ಸಮುದ್ರದ ದಡದಲ್ಲಿ ನೀರು ನೋಡುತ್ತ ನಿಲ್ಲುತ್ತಿದ್ದ.

# ಕಪ್ತಾನ್ ಸಾಹೇಬ



ಜಗತ್‌ಸಿಂಹನಿಗೆ ಶಾಲೆಗೆ ಹೋಗೋದಂದ್ರೆ ಕ್ವಿನೈನ್ ತಿಂದಂತೆ. ಸ್ವಚ್ಛಂದ, ಅಲೆಮಾರಿ ಹುಡುಗ. ಹಣ್ಣಿನ ತೋಟಕ್ಕೆ ಹೋದಾಂದ್ರೆ, ಹಣ್ಣಿನೊಂದಿಗೆ ಮಾಲಿಯಿಂದ ಬೈಗುಳನ್ನು ತಿನ್ನುತ್ತಿದ್ದ. ನದೀ ತೀರದ ಅಂಬಿಗರ ದೋಣೀಲಿ ಕೂತು ಇನ್ನೊಂದು ತೀರದ ಹಳ್ಳಿಗಳಿಗೆ ಹೋಗ್ತಿದ್ದ. ಕುದ್ರೆ ಸವಾರರ ಹಿಂದೆ ಚಪ್ಪಾಳೆ ತಟ್ಟೋದು, ಗಾಡಿಗಳ್ನ ಹಿಂದಿಂದ ಹಿಡಿದೆಳೆಯೋದು, ಮುದುಕರ ನಡಿಗೆ ಅನುಕರಿಸೋದು, ಅವನಿಗೆ ಮನರಂಜನೆಯ ವಿಷಯಗಳು. ಸೋಮಾರಿ. ಹಣವಿಲ್ದೆ ಪೂರೈಸದ ದುರ್ವ್ಯಸನಗಳ ದಾಸ. ಮನೆಯಿಂದ ಹಣ ಕದೀತಿದ್ದ, ಕೈಗೆ ಸಿಕ್ಕಿದ ಬಟ್ಟೆ, ಪಾತ್ರೆ ಎತ್ಕೊಂಡು ಹೋಗೋಕ್ಕೆ ಸಂಕೋಚವೇ ಇಲ್ಲ, ಹಳೇ ಶೀಶೆ, ಖಾಲಿ ಬಾಟಲ್‌ಗಳೂ ಗುಜರಿ ಸೇರಿದವು. ಈ ಕಲೆಯಲ್ಲಿ ಅವನೆಷ್ಟು ನಿಪುಣನಾಗಿದ್ದಾಂದ್ರೆ ಭಾವಣಿ ಹತ್ತಿ ಪಾತ್ರೆ ತರೋವಾಗ ಮನೆಯವ್ರಿಗೆ ಸದ್ದಿನ ಸುಳಿವೂ ಸಿಗ್ತಿರ್ಲಿಲ್ಲ.

ಅಪ್ಪ, ಠಾಕೂರ ಭಕ್ತಸಿಂಹ ಅಂಚೆ ಕಛೇರಿಯ ಗುಮಾಸ್ತ. ಅವನನ್ನು ನಗರಕ್ಕೆ ವರ್ಗಾಯಿಸಲಾಗಿತ್ತು. ಹಳ್ಳಿಯಲ್ಲಿ ಮುಫತ್ತಾಗಿ ಸಿಗುತ್ತಿದ್ದ ತರಕಾರಿ, ಸೌದೆ, ಇತ್ಯಾದಿ ಸರಬರಾಜೆಲ್ಲಾ ನಿಂತವು. ಇದರ ಮೇಲೆ ಜಗತ್‌ಸಿಂಹನ ಉಪಟಳಗಳು. ಎಷ್ಟೋ ಬಾರಿ ನಿರ್ದಯತೆಯಿಂದ ಅವನನ್ನು ಹೊಡೆಯುವನು. ಆ ಭೀಮಕಾಯ ಸುಮ್ಮನೆ ಹೊಡೆತ ತಿನ್ನುತ್ತಿದ್ದ.

ಜಗತ್‌ಸಿಂಹ ಮನೆಯಲ್ಲಿ ಕಾಲಿಡುತ್ತಿದ್ದಂತೆಯೇ, ಅಕ್ಕ-ತಂಗಿಯರ ಬೈಗುಳ. ಮನೆಗೆ ಗೂಳಿ ನುಗ್ಗಿದೆಯೇನೋ ಎಂಬಂತೆ ತಾಯಿಯ ವಟವಟ ಕೇಳಲಾಗದೆ, ಮನೆಯಿಂದಾಚೆ ನಡೆದು ೨-೩ ದಿನ ನಿದ್ದೆ ಬಂದಲ್ಲಿ ಮಲಗಿದ್ದು, ಸಿಕ್ಕಿದ್ದು ತಿನ್ನುವವ. ಅವನ ಕಳುವಿನ ಸುಳಿವು ಸಿಕ್ಕ ಮನೆಯ ಜನ ಅವನ ಬಗ್ಗೆ ಅತ್ಯಂತ ಎಚ್ಚರ ವಹಿಸತೊಡಗಿದರು. ಇತ್ತ ಚರಸ್, ಗಾಂಜಾ, ಮಾರುವವರ ತಗಾದೆ ಹೆಚ್ಚಿತು. ತಿಂಡಿ ಗಾಡಿಯವನ ಕಣ್ಣುತಪ್ಪಿಸಿ ತಿರುಗಬೇಕಾಯ್ತು. ಕಡೆಗೂ ಒಮ್ಮೆ ಕಾಯುತ್ತಿದ್ದ ಅವಕಾಶ ಸಿಕ್ಕಿತು.

ಭಕ್ತಸಿಂಹ ಮಧ್ಯಾಹ್ನ ಕಛೇರಿಯಿಂದ ಹೊರಟಾಗ ಒಂದು ವಿಮೆಯ ರಿಜಿಸ್ಟರ್ ಪತ್ರವನ್ನು ಜೇಬಿನಲ್ಲಿಟ್ಟಿದ್ದರು. ಆದರೆ ಮನೆಗೆ ಬಂದಮೇಲೆ ಆ ಲಕೋಟೆಯ ವಿಷಯ ಸಂಪೂರ್ಣ ಮರೆತೇ ಹೋಯಿತು. ಜಗತ್‌ಸಿಂಹ ಕಾಯುತ್ತಲೇ ಇದ್ದ. ದುಡ್ಡಿಗಾಗಿ ತಂದೆಯ ಅಂಗಿ ಜೇಬು ತಡವಿದಾಗ ಲಕೋಟೆ ಸಿಕ್ಕಿತು. ಅದರ ಮೇಲೆ ಅಂಚೆ ಚೀಟಿ ಕಂಡಿತು. ಎಷ್ಟೋ ಬಾರಿ ಅಂಚೆ ಚೀಟಿಯನ್ನೇ ಕದ್ದು ಅರ್ಧ ಬೆಲೆಗೆ ಮಾರಿಯೂ ಬಿಟ್ಟಿದ್ದ. ಲಕೋಟೆ

ಹಾರಿಸಿದ. ಆದ್ರೆ ಅದ್ರಲ್ಲಿ ನೋಟ್ ಇದೇಂತ ಗೊತ್ತಾಗಿದ್ದಿದ್ರೆ ಖಂಡಿತಾ ಮುಟ್ಟುತ್ತಿರಲಿಲ್ಲ. ಆದ್ರೆ ಲಕೋಟೆ ಹರ್ದಾಗ, ಅದ್ರೊಳ್ಗಿಂದ ನೋಟುಗಳು ಈಚೆ ಬಿದ್ದಾಗ, ಅವ್ನು ಸಂಕಟಕ್ಕೆ ಸಿಲುಕಿದ. ಹರಿದ ಲಕೋಟೆ ಬಾರಿ ಬಾರಿಗೂ ಅವನ ದುಷ್ಕೃತ್ಯವನ್ನು ಧಿಕ್ಕರಿಸತೊಡಗಿತು. ಶಿಕಾರಿಯನ್ನು ಹೊಡೆಯಲು ಹೋಗಿ ಮತ್ತಾರನ್ನೋ ಹೊಡೆದವನ ಸ್ಥಿತಿಯಾಗಿತ್ತು. ಮನದಲ್ಲಿ ಪಶ್ಚಾತ್ತಾಪವಿತ್ತು, ನಾಚಿಕೆ, ದುಃಖವಿತ್ತು. ಆದರೆ ತನ್ನ ತಪ್ಪಿನ ದಂಡ ಸಹಿಸುವ ಶಕ್ತಿ ಅವನಲ್ಲಿರಲಿಲ್ಲ. ನೋಟುಗಳನ್ನು ಲಕೋಟೆಯಲ್ಲೇ ಇಟ್ಟು ಹೊರನಡೆದ.

ಬಿಸಿಲ ದಿನ. ಮಧ್ಯಾಹ್ನ ಮನೆಯವರೆಲ್ಲ ಮಲಗಿದ್ದರು. ಆದರೆ ಜಗತ್‌ಸಿಂಹನ ಕಣ್ಣು ಹತ್ತದು. ಇವತ್ತು ಸರಿಯಾಗಿ ಏಟು ಬೀಳತ್ತೆ ಅನ್ನೋದ್ರಲ್ಲೇನೂ ಸಂದೇಹವಿಲ್ಲ. ಮನೇಲಿರೋದೂ ಸರಿಯಲ್ಲ. ನಾಲ್ಕೆಂಟು ದಿನ ಎಲ್ಲಿಯಾದ್ರು ಹೊರಟು ಹೋದ್ರೆ, ಆ ವೇಳೆಗೆ ಮನೆಯವ್ರ ಸಿಟ್ಟು ಇಳಿಯತ್ತೆ. ಎಲ್ಲಾದ್ರೂ ದೂರಹೋಗ್ಬೇಕು. ಇಲ್ದಿದ್ರೆ ಯಾರಾದ್ರೂ ಪತ್ತೆ ಹಚ್ಚಿ ಹಿಡೀತಾರೆ. ದೂರ ಹೋಗ್ಬೇಕಾದ್ರೆ ಖರ್ಚಿಗೆ ಹಣ ಬೇಕಲ್ಲ. ಲಕೋಟೆ ಒಳ್ಗಿಂದ ಒಂದು ನೋಟು ಯಾಕೆ ತೆಗೀಬಾರ್ದು? ತಾನೇ ಲಕೋಟೆ ಹರ್ದಿದ್ದು ಅನ್ನೋದು ಗೊತ್ತಾಗೇ ಆಗತ್ತೆ. ಅಪ್ಪನ ಹತ್ರ ಹೇಗೂ ಹಣವಿರತ್ತೆ. ಭರ್ತಿ ಮಾಡ್ತಾರೆ, ಎಂದು ಯೋಚಿಸಿ ಹತ್ತರ ಒಂದು ನೋಟು ತೆಗೆದ. ಅಷ್ಟರಲ್ಲೇ ಹುಟ್ಟಿತು ಹೊಸದೊಂದು ಕಲ್ಪನೆ. ಒಂದ್ವೇಳೆ ಈ ಹಣಾನೆಲ್ಲಾ ತಗೊಂಡ್ಹೋಗಿ ಬೇರೆ ಊರಿನಲ್ಲೊಂದು ಅಂಗಡಿ ತೆರೆದರೆ? ಒಂದೊಂದು ಕಾಸಿಗೂ ಕಳ್ಳತನ ಯಾಕೆ ಮಾಡ್ಬೇಕು? ಸ್ವಲ್ಪ ದಿನಗಳಲ್ಲೇ ತುಂಬ ಹಣ ಸಂಪಾದಿಸಿ, ಮನೆಗೆ ವಾಪಸ್ಸು ಬಂದ್ರೆ ಎಲ್ರಿಗೂ ಎಷ್ಟು ಆಶ್ಚರ್ಯ ಆಗತ್ತಲ್ವಾ?

ಲಕೋಟೆಯನ್ನು ಮತ್ತೆ ತೆಗೆದ. ಅದ್ರಲ್ಲಿ ಒಟ್ಟು ೨೦೦ ರೂಪಾಯಿಗಳಿದ್ದವು. ಇದ್ರಲ್ಲಿ ಹಾಲಿನಂಗ್ಡಿ ಶುರು ಮಾಡ್ಬೋದು. ಮುರಾರಿಯ ಅಂಗ್ಡೀಲಿ ನಾಲ್ಕಾರು ಕಡಾಯಿ, ಒಂದೆರ್ಡು ಹಿತ್ತಾಳೆ ಪಾತ್ರೆಗಳ ಹೊರ್ತು ಇನ್ನೇನಿದೆ? ಆದ್ರೆ ಎಷ್ಟು ಜೋರಾಗಿದ್ದಾನೆ? ರುಪಾಯಿಗಟ್ಟಲೆ ಚರಸ್ ಉಡಾಯಿಸ್ತಾನೆ. ಈ ಆನಂದದ ಕಲ್ಪನೇಲಿ ಅವನೆಷ್ಟು ಮಗ್ನನಾಗಿದ್ದನೆಂದರೆ ಅವ್ನ ಮನಸ್ಸು ಪತೋಟಿ ತಪ್ಪಿ, ಪ್ರವಾಹದಲ್ಲಿ ಕಾಲು ನಡುಗಿ ಅಲೆಗಳೊಂದಿಗೆ ತೇಲಿ ಹೋಗುವಂತಾಗಿತ್ತು. ಅಂದೇ ಸಂಜೆ ಅವ್ನು ಬೊಂಬಾಯಿ ರೈಲು ಹತ್ತಿದ. ಮರುದಿನವೇ ಭಕ್ತಸಿಂಹನ ಮೇಲೆ ಹಣ ಅಪಹರಣದ ಆರೋಪದ ಮೇಲೆ ಮೊಕದ್ದಮೆ ಹೂಡಲಾಯ್ತು.

೨

ಮುಂಬಯಿಯ ಕೋಟೆ ಮೈದಾನದಲ್ಲಿ ಬ್ಯಾಂಡ್ ವಾದನ. ರಜಪೂತ ರೆಜಿಮೆಂಟಿನ ಸೈನಿಕರು ಕವಾಯತು ಮಾಡುತ್ತಿದ್ದರು. ಗಾಳಿ ಹೇಗೆ



ಮೋಡಗಳನ್ನು ಹೊಸ ಹೊಸ ರೂಪದಲ್ಲಿ ರೂಪಿಸುತ್ತೋ ಹಾಗೆಯೇ ಕವಾಯತಿನ ಸೈನಿಕರ ವ್ಯೂಹ ಬದಲಿಸುತ್ತಿದ್ದ ನಾಯಕ.

ಕವಾಯತು ಮುಗಿದಾಗ ತೆಳ್ಳಗಿನ ಯುವಕನೊಬ್ಬ ನಾಯಕನೆದುರು ನಿಂತ. ನಾಯಕ ಕೇಳಿದ, ''ನಿನ್ನ ಹೆಸರೇನು?'' ಸಲಾಮು ಮಾಡುತ್ತ ಹುಡುಗ ಹೇಳಿದ ''ಜಗತ್‌ಸಿಂಹ.''

''ಏನು ಬೇಕು?''

''ಸೇನೆಗೆ ಸೇರಬೇಕು.''

''ಸಾವಿಗೆ ಹೆದರಲ್ವಾ?''

''ಖಂಡಿತಾ ಇಲ್ಲ. ರಜಪೂತ ನಾನು.''

''ತುಂಬ ಕಷ್ಟಪಡಬೇಕು.''

''ಯೋಚನೆ ಇಲ್ಲ.''

''ಏಡನ್‌ಗೆ ಹೋಗ್ಬೇಕಾಗತ್ತೆ.''

''ಸಂತೋಷದಿಂದ.''

ಕಫ್ತಾನ್ ನೋಡಿದ. ತಟ ತಟನೆ ಉತ್ತರಿಸುವ ಧೈರ್ಯದ ಖನಿಯಂತಿದ್ದ ತರುಣ. ಕೂಡಲೇ ಸೇನೆಗೆ ಭರ್ತಿ ಮಾಡಿಕೊಂಡ. ಮೂರನೇ ದಿನವೇ ರೆಜಿಮೆಂಟ್ ಏಡನ್‌ಗೆ ಹೊರಟಿತು. ಆದ್ರೆ ಹಡಗು ಮುಂದೆ ಮುಂದೆ ಹೋದಂತೆ ಜಗತ್‌ಸಿಂಹನ ಮನ ಹಿಂದೆ ಹಿಂದೆ ಉಳಿಯುತ್ತಿತ್ತು. ದಡ ಕಾಣುವವರೆಗೂ ಹಡಗಿನ ಡೆಕ್ ಮೇಲೆ ನಿಂತು, ಪ್ರೀತಿಯ ಕಣ್ಣುಗಳಿಂದ ಅದನ್ನೇ ನೋಡುತ್ತಿದ್ದ. ದಡದ ಭೂಮಿ ನೀರಿನಲ್ಲಿ ವಿಲೀನವಾದ ಕೂಡಲೆ ಅವನು ನಿಟ್ಟುಸಿರಿಟ್ಟು ಮುಖ ಮುಚ್ಚಿಕೊಂಡು ಅಳತೊಡಗಿದ. ಇಂದು ಅವನಿಗೆ ಜೀವನದಲ್ಲಿ ಮೊದಲ ಬಾರಿಗೆ ತನ್ನ ಮನೆಯವರ ನೆನಪಾಯ್ತು. ತನ್ನ ಪುಟ್ಟ ಊರು, ಗಾಂಜಾದ ಅಂಗಡಿ, ಆ ಓಡಾಟ, ಸಹೃದಯ ಮಿತ್ರರ ಒಡನಾಟ, ಎಲ್ಲವೂ ಕಣ್ಮುಂದೆ ಕುಣಿಯತೊಡಗಿದವು. ಯಾರಿಗ್ಗೊತ್ತು? ಮತ್ತವ್ರನ್ನ ಭೇಟಿ ಮಾಡ್ತೀನೋ ಇಲ್ವೋ? ಒಮ್ಮೆಯಂತೂ ನೀರಿಗೆ ಹಾರಿಬಿಡುವಷ್ಟು ಅಶಾಂತತೆ.

೩

ಜಗತ್‌ಸಿಂಹ ಏಡನ್‌ನಲ್ಲಿ ಮೂರು ತಿಂಗಳು ಕಳೆದ. ಹೊಸ ಹೊಸ ಅನುಭವಗಳು ಅವನನ್ನು ಮುಗ್ಧನನ್ನಾಗಿಸಿದ್ದವು. ಆದರೆ ಹಿಂದಿನ ಸಂಸ್ಕಾರಗಳು ಮತ್ತೆ ಜಾಗ್ರತಗೊಳ್ಳತೊಡಗಿದವು. ಈಗ ತನ್ನ ವಾತ್ಸಲ್ಯಮಯಿ ತಾಯಿಯ ನೆನಪಾಗತೊಡಗಿತು. ತಂದೆಯ ಕೋಪ, ತಂಗಿಯರ ತಿರಸ್ಕಾರಗಳಿಂದ ಅವಳು ಅವನನ್ನು ರಕ್ಷಿಸುತ್ತಿದ್ದಳು. ತಾನು ಖಾಯಿಲೆ ಬಿದ್ದ ಆ ದಿನದ ನೆನಪಾಯ್ತು. ತಾನುಳಿಯುವ ಆಸೆಯೇ ಇರಲಿಲ್ಲ. ತಂದೆಗಾಗಲೀ, ಸೋದರಿಯರಿಗಾಗಲೀ ಸ್ವಲ್ಪವೂ ಚಿಂತೆ ಇಲ್ಲ. ತಾಯಿ ಮಾತ್ರ ರಾತ್ರಿಯೆಲ್ಲಾ ಅವನ ಹಾಸಿಗೆಯ ಬಳಿ ಕೂತು ಒಳ್ಳೆಯ ಮಾತಿನಿಂದ ಅವನ ನೋವು ಪರಿಹರಿಸಲು ಪ್ರಯತ್ನಿಸುವಳು.

ಎಷ್ಟೋ ಬಾರಿ ಅವಳು ಅಳುತ್ತಿದ್ದುದೂ ಇತ್ತು. ಸ್ವತಃ ತಾನೇ ರೋಗದಿಂದ ನರಳುತ್ತಿದ್ದರೂ ತನ್ನ ಸೇವೆ ಮಾಡುವಳು. ಆ ಅಮ್ಮನ ದರ್ಶನ ಪುನಃ ಆದೀತೇನು? ಇದೇ ನಿರಾಸೆಯಲ್ಲೇ ಗಂಟೆಗಟ್ಟಲೆ ಸಮುದ್ರದ ದಡದಲ್ಲಿ ನೀರು ನೋಡುತ್ತ ನಿಲ್ಲುತ್ತಿದ್ದ. ಊರಿಗೆ ಕಾಗದ ಬರೆಯಬೇಕೆನಿಸಿದರೂ ಸಂಕೋಚದಿಂದಾಗಿ ಮುಂದೂಡುತ್ತ ಬಂದ. ತಡೆಯಲಾಗದೆ ಒಂದು ದಿನ ಕಾಗದ ಬರೆದು ತನ್ನ ತಪ್ಪುಗಳಿಗೆ ಕ್ಷಮೆ ಕೇಳಿದ. ಪತ್ರದಲ್ಲಿ ಮೊದಲಿಂದ ಕೊನೆಯವರೆಗೂ ಭಕ್ತಿ ತುಂಬಿತ್ತು. ''ಅಮ್ಮ, ನಾನು ದೊಡ್ಡ ದೊಡ್ಡ ತಪ್ಪುಗಳನ್ನು ಮಾಡಿದ್ದೇನೆ. ನೀವೂ ನನ್ನಿಂದ ಬೇಸರಗೊಂಡಿದ್ದೀರಿ. ಆ ಎಲ್ಲ ತಪ್ಪುಗಳಿಗಾಗಿ ನಿಜವಾಗಿ, ಹೃದಯದಾಳದಿಂದ ಲಜ್ಜಿತನಾಗಿದ್ದೇನೆ. ಬದುಕಿದರೆ ಏನಾದರೂ ಸಾಧಿಸಿ ತೋರಿಸುತ್ತೇನೆಂದು ಮಾತು ಕೊಡುತ್ತೇನೆ. ಆಗ ನನ್ನನ್ನು ಮಗ ಎಂದು ಹೇಳಿಕೊಳ್ಳಲು ನಿಮಗೆ ಸಂಕೋಚವಾಗದು. ನನ್ನ ಪ್ರತಿಜ್ಞೆ ಪಾಲಿಸಲು ಸಾಧ್ಯವಾಗುವಂತೆ ನನ್ನನ್ನು ಆಶೀರ್ವದಿಸಿ'', ಎಂದು ತನ್ನ ತಾಯಿಗೆ ಬರೆದ.

ಪತ್ರವನ್ನು ಅಂಚೆಗೆ ತಲುಪಿಸಿ, ಉತ್ತರ ನಿರೀಕ್ಷಿಸತೊಡಗಿದ. ತಿಂಗಳು ಕಳೆದರೂ ಜವಾಬಿಲ್ಲ. ಮನ ಗಾಬರಿಗೊಂಡಿತು. ಜವಾಬೇಕೆ ಬಂದಿಲ್ಲ? ಅಮ್ಮಂಗೇನಾದ್ರೂ ಹುಷಾರಿಲ್ವಾ? ಬಹುಶಃ ಅಪ್ಪ ಕೋಪ ಮಾಡ್ಕೊಂಡು ಬರೀದೇ ಇರ್ಬೋದಾ? ಅಥ್ವಾ ಇನ್ನೇನು ಆಪತ್ತು ಬಂದಿದ್ಯೋ? ಕ್ಯಾಂಪಿನಲ್ಲಿ ಮರವೊಂದರ ಕೆಳಗೆ ಕೆಲವು ಸಿಪಾಯಿಗಳು ಸಾಲಿಗ್ರಾಮವೊಂದನ್ನು ಇಟ್ಟಿದ್ದರು. ಯಾರೋ ಶ್ರದ್ಧಾಳುಗಳು ಅದಕ್ಕೆ ನೀರೆರೆದು ಹೂವೇರಿಸುತ್ತಿದ್ದರು. ಜಗತ್‌ಸಿಂಹ ಅವ್ರನ್ನೆಲ್ಲಾ ಆಡಿಕೊಳ್ತಿದ್ದ. ಆದರಿಂದು ವಿಕ್ಷಿಪ್ತನಂತೆ ಪ್ರತಿಮೆಯ ಎದುರು ಬಹಳ ಹೊತ್ತಿನವರೆಗೂ ತಲೆತಗ್ಗಿಸಿ ಕುಳಿತಿದ್ದ. ಯಾರೋ ಕರೆದರು. ತಿರುಗಿದಾಗ

ಕಛೇರಿಯ ಆಳು ತನ್ನ ಹೆಸರಿನ ಪತ್ರ ಹಿಡಿದು ನಿಂತಿದ್ದ. ಜಗತ್‌ಸಿಂಹ ಕೈಗೆ ಪತ್ರ ತೆಗೆದುಕೊಂಡಾಕ್ಷಣ ಅವನ ದೇಹವಿಡೀ ನಡುಗಿತು. ಈಶ್ವರನನ್ನು ಧ್ಯಾನಿಸಿ, ಕಾಗದ ತೆಗೆದು ಓದಿದ. ''ನಿನ್ನ ತಂದೆಗೆ ಹಣ ದುರುಪಯೋಗದ ನಿಮಿತ್ತ ಐದು ವರ್ಷ ಕಾರಾಗೃಹ ವಾಸದ ಸಜೆಯಾಯ್ತು. ನಿನ್ನಮ್ಮ ಇದೇ ದುಃಖದಲ್ಲಿ ಮರಣಾವಸ್ಥೆಯಲ್ಲಿದ್ದಾಳೆ. ರಜ ಸಿಕ್ಕರೆ ಮನೆಗೆ ಬಾ.''

ಜಗತ್‌ಸಿಂಹ ಕೂಡಲೇ ಕಫ್ತಾನನ ಬಳಿ ಹೋಗಿ ಹೇಳಿದ. ''ಹುಜೂರ್, ನನ್ನಮ್ಮ ಖಾಯಿಲೆ ಬಿದ್ದಿದ್ದಾಳೆ. ಮನೆಗೆ ಹೋಗಬೇಕು, ನನಗೆ ರಜೆ ಕೊಡಿ.''

ಕಫ್ತಾನ ಕಠೋರವಾದ ನೋಟ ಬೀರಿ, ''ಈಗ ರಜ ಕೊಡಲು ಸಾಧ್ಯವಿಲ್ಲ'' ಎಂದ.

''ಹಾಗಾದರೆ ನನ್ನ ರಾಜೀನಾಮೆ ತಗೊಳ್ಳಿ.''

''ಈಗ ರಾಜೀನಾಮೆ ತಗೊಳ್ಳೋದು ಸಾಧ್ಯವಿಲ್ಲ''

''ನಾನಿಲ್ಲಿ ಒಂದು ಕ್ಷಣ ಕೂಡ ಇರಲು ಸಾಧ್ಯವಿಲ್ಲ''

''ಇರ್ಬೇಕಾಗತ್ತೆ. ನೀವೆಲ್ಲ ಕೂಡ್ಲೇ ಸೈನ್ಯದೊಂದಿಗೆ ಹೋಗ್ಬೇಕಾಗತ್ತೆ.''

''ಯುದ್ಧ ಶುರುವಾಗಿಬಿಡ್ತಾ? ಹಾಗಾದ್ರೆ ನಾನು ಮನೇಗೆ ಹೋಗೋಕಾಗಲ್ವಾ? ನಾವಿಲ್ಲಿಂದ ಯಾವಾಗ ಹೊರಡ್ಬೇಕು?''

''ಮೂರು - ನಾಲ್ಕು ದಿನಗಳಲ್ಲೇ.''

೪

ವರ್ಷ ನಾಲ್ಕು ಕಳೆದವು. ಕ್ಯಾಪ್ಟನ್ ಜಗತ್‌ಸಿಂಹನಂಥ ಯೋಧ ಆ ರೆಜಿಮೆಂಟಿನಲ್ಲೇ ಇರ್ಲಿಲ್ಲ. ಕಠಿಣ ಪರಿಸ್ಥಿತಿಗಳಲ್ಲಿ ಅವನ ಸಾಹಸ ಮತ್ತಷ್ಟು ಉತ್ತೇಜಿತವಾಗುತ್ತಿತ್ತು. ಎಲ್ಲರೂ ಎಲ್ಲಿ ಧೈರ್ಯ ಕಳೆದುಕೊಳ್ಳುತ್ತಿದ್ದರೋ ಅಲ್ಲವನು ಮುನ್ನುಗ್ಗುತ್ತಿದ್ದ. ಜೊತೆಗೆ ಗಂಭೀರವಾಗಿ ನಮ್ರತೆಯಿಂದ ಎಷ್ಟು ಪ್ರಸನ್ನಚಿತ್ತನಾಗಿರುತ್ತಿದ್ದನೆಂದರೆ, ಅವನ ಮೇಲಧಿಕಾರಿಗಳು ಅವನನ್ನು ಹೊಗಳುವರು. ಅವನ ಮೇಲೆ ಅವರಿಗೆಷ್ಟು ನಂಬಿಕೆ ಎಂದರೆ ಎಲ್ಲ ವಿಷಯಗಳನ್ನೂ ಅವನೊಂದಿಗೆ ಚರ್ಚಿಸುವರು. ಕೇಳಿದವರ ಬಾಯಲ್ಲಿ ವೀರ ಜಗತ್‌ಸಿಂಹನ ಹೊಗಳಿಕೆ. ಅವನು ಜರ್ಮನರ ತೋಪುಖಾನೆಗೆ ಹೇಗೆ ಬೆಂಕಿಯಿಟ್ಟ? ಅವರ ಕಫ್ತಾನನನ್ನು ಗುಂಡೇಟಿನಿಂದ ಹೇಗೆ ಉರುಳಿಸಿದ? ಸಾಯುವುದರಲ್ಲಿದ್ದ ಸಿಪಾಯಿಯೊಬ್ಬನನ್ನು ಹೇಗೆ ತನ್ನ ಹೆಗಲ ಮೇಲೆ ಹೊತ್ತು ತಂದ? ತನ್ನ ಪ್ರಾಣದ ಮೇಲಿನ ಹಂಗು ತೊರೆದು ಯಮನನ್ನರಸುತ್ತ ಅಲೆದಾಡುತ್ತಾನೇನೋ ಎನ್ನುತ್ತಿದ್ದರು.

ಆದರೆ ಜಗತ್‌ಸಿಂಹ ಅವಕಾಶ ಸಿಕ್ಕಿದಾಗೆಲ್ಲಾ ತನ್ನ ಕೋಣೆಯಲ್ಲಿ ಒಬ್ಬನೇ ಕುಳಿತು ಮನೆಯವರ ನೆನಪು ಮಾಡಿಕೊಳ್ಳುತ್ತಾನೆ. ನಾಲ್ಕಾರು ಹನಿ ಕಣ್ಣೀರು ಉದುರುತ್ತವೆ. ಪ್ರತಿ ತಿಂಗಳೂ ತನ್ನ ವೇತನದ ಹೆಚ್ಚಿನ ಭಾಗವನ್ನು ಮನೆಗೆ ಕಳಿಸುತ್ತಾನೆ. ಪ್ರತಿ ವಾರವೂ ತನ್ನಮ್ಮನಿಗೆ ಪತ್ರ ಬರೀತಾನೆ. ಅವನಿಗೆ ಎಲ್ಲಕ್ಕಿಂತ ಹೆಚ್ಚಿನ ಚಿಂತೆ ತನ್ನ ತಂದೆಯ ಬಗ್ಗೆ. ತನ್ನ ಕೆಟ್ಟ ಕೆಲಸದ ಕಾರಣ ಅಪ್ಪ ಜೈಲು ಸೇರಬೇಕಾಯ್ತು. ಎಷ್ಟು ಯಾತನೆ ಅನುಭವಿಸುತ್ತಿರಬಹುದು? ತಾನವರ ಕಾಲ ಮೇಲೆ ತಲೆಯಿಟ್ಟು ಎಂದು ಕ್ಷಮೆ ಕೇಳಬಲ್ಲೆ? ಅವರೆಂದು ತನ್ನ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಬಲ್ಲರು ಎಂಬ ಚಿಂತೆಯಲ್ಲೇ ಕೊರಗಿದ.

೫

ನಾಲ್ಕು ವರ್ಷ, ಮೂರು ತಿಂಗಳು ಕಳೆದುಹೋದವು. ಸಂಜೆಯ ಸಮಯ ನೈನಿ ಜೈಲಿನ ಬಾಗಿಲಲ್ಲಿ ಜನರ ಗುಂಪು ಸೇರಿದೆ. ಎಷ್ಟೋ ಕೈದಿಗಳ ಸೆರೆಯ ಅವಧಿ ಮುಗಿದಿದೆ. ಅವರನ್ನು ಕರೆದುಕೊಂಡು ಹೋಗಲು ಅವರ ಮನೆಯ ಜನ ಬಂದಿದ್ದಾರೆ. ಆದರೆ ಮುದುಕ ಭಕ್ತಸಿಂಹ ತನ್ನ ಕತ್ತಲು ಕೋಣೆಯಲ್ಲಿ ತಲೆತಗ್ಗಿಸಿ ಉದಾಸೀನದಿಂದ ಕುಳಿತಿದ್ದಾನೆ. ಅವನ ಬೆನ್ನು ಬಾಗಿ ಬಿಲ್ಲಿನಂತಾಗಿದೆ. ದೇಹ ಕೇವಲ ಅಸ್ಥಿಪಂಜರ, ಶಿಲ್ಪಿಯೊಬ್ಬ ಕ್ಷಾಮಪೀಡಿತ ಮನುಷ್ಯನ ಮೂರ್ತಿ ಮಾಡಿಟ್ಟಿರುವನೇನೋ ಎಂಬಂತೆ. ಅವನ ಸೆರೆವಾಸದ ಗಡುವೂ ಮುಗಿದಿದೆ. ಆದ್ರೆ ಅವ್ನ ಮನೆಯಿಂದ ಯಾರೂ ಬಂದಿಲ್ಲ, ಯಾರು ಬರ್ಬೇಕು? ಬರೋಕೆ ಇದ್ದವ್ರಾದ್ರೂ ಯಾರು?

## ಹನಿಗವಿತೆ

ಭಾರೀ ಬಂಡೆಯ
ಮುಂಬರಿಸಲು
ಒತ್ತೆಯಾಗುವ ಕಿರುಗಲ್ಲು!

ಎಸ್. ಕುಮಾರಸ್ವಾಮಿ
ಮೇಗರವಳ್ಳಿ

ದಷ್ಟಪುಷ್ಟ ಕೈದಿಯೊಬ್ಬ ಬಂದು ಭಕ್ತಸಿಂಹನ ಹೆಗಲು ಅಲುಗಿಸಿ ಕೇಳಿದ, ''ಮನೆಯಿಂದ ಯಾರಾದ್ರೂ ಬಂದಿದಾರಾ?''

ಭಕ್ತಸಿಂಹ ನಡುಗುವ ಸ್ವರದಲ್ಲಿ ಉತ್ತರಿಸಿದ. ''ಮನೇಲಿ ಯಾರಿದ್ದಾರೆ?''

''ಮನೆಗೆ ಹೋಗ್ತೀ ತಾನೆ?''

''ನನ್ನ ಮನೆ ಎಲ್ಲಿದೆ?''

''ಹಾಗಾದ್ರೇನು ಇಲ್ಲೇ ಬಿದ್ದಿರ್ತೀಯಾ?''

''ಇವ್ರು ನನ್ನ ಹೊರಹಾಕ್ದಿದ್ರೆ ಇಲ್ಲೇ ಇರ್ತೀನಿ.''

ಇಷ್ಟು ವರ್ಷಗಳ ನಂತರ ಭಕ್ತಸಿಂಹನಿಗೆ ಮನೆ ಬಿಟ್ಟುಹೋದ ಮಗನ ನೆನಪಾಗ್ತಿದೆ. ಅವನಿಂದಾಗಿ ಸರ್ವನಾಶವಾಗಿತ್ತು. ಮಾನ ಹೋಯ್ತು. ಮನೆ ನಾಶವಾಯ್ತು. ಅವನ ನೆನಪೂ ಅವನಿಗೆ ಅಸಹ್ಯವಾಗಿತ್ತು. ಆದರಿಂದು ನಿರಾಸೆ ಹಾಗೂ ದುಃಖದಲ್ಲಿ ಮುಳುಗುತ್ತಿರುವಾಗ ಅದೇ ನೆನಪು ಹುಲ್ಲುಕಡ್ಡಿಯ ಆಧಾರವಾಗಿತ್ತು. ಪಾಪ ಆ ಬಡಪಾಯಿಯ ಸ್ಥಿತಿ ಏನಾಯ್ತೋ? ಲಕ್ಷ ತಪ್ಪುಗಳಿದ್ದರೂ ತನ್ನ ಮಗ ತಾನೆ? ವಂಶದ ಕುಠಿಹಲ್ವೆ? ಸತ್ತರೆ ನಾಲ್ಕು ಹನಿ ಕಣ್ಣೀರು ಹಾಕ್ತಾನೆ. ಎರ್ಡು ಗುಟುಕು ನೀರಾದ್ರೂ ಕೊಡ್ತಾನೆ. ಛೆ! ನಾನೆಂದೂ ಅವನೊಂದಿಗೆ ಪ್ರೀತಿಯಿಂದ ವ್ಯವಹರಿಸಲಿಲ್ಲ. ಸ್ವಲ್ಪ ಗಲಾಟೆ ಮಾಡಿದ್ರೂ ಯಮದೂತನಂತೆ ನಡ್ಕೊಳ್ತಿದ್ದೆ. ಎಷ್ಟೊಂದು ಶಿಕ್ಷೆ ಕೊಟ್ಟೆ! ಇಂಥ ಪುತ್ರರತ್ನವನ್ನು ಎಂದೂ ಆದರಿಸಲಿಲ್ಲ. ಅದರದ್ದೇ ಈ ಶಿಕ್ಷೆ. ಎಲ್ಲಿ ಪ್ರೇಮದ ಬಂಧನ ಶಿಥಿಲವಾಗಿರುತ್ತೋ ಅಲ್ಲಿ ಪರಿವಾರದ ರಕ್ಷೆ ಹೇಗೆ ಸಾಧ್ಯ?

೬

ಬೆಳಗಾಯ್ತು. ಆಶೆಯ ಸೂರ್ಯ ಹುಟ್ಟಿದ. ಇಂದು ಅವನ ರಶ್ಮಿಗಳು ಎಷ್ಟು ಕೋಮಲವಾಗಿವೆ! ಗಾಳಿ ಎಷ್ಟು ಹಿತವಾಗಿದೆ! ಆಕಾಶವೆಷ್ಟು ಮನೋಹರ! ವೃಕ್ಷಗಳೆಷ್ಟು ಹಸಿರಿನಿಂದ ತುಂಬಿವೆ! ಪಕ್ಷಿಗಳ ಕಲರವ ಅದೆಷ್ಟು ಮಧುರ! ಪ್ರಕೃತಿಯೆಲ್ಲಾ ಆಸೆಯ ರಂಗಿನಲ್ಲಿ ರಂಗಾಗಿತ್ತು! ಆದರೆ ಭಕ್ತಸಿಂಹನಿಗೆ ನಾಲ್ಕು ಕಡೆಯೂ ಘೋರ ಅಂಧಕಾರ.

ಜೈಲಿನ ಅಧಿಕಾರಿ ಬಂದ. ಕೈದಿಗಳು ಸಾಲಾಗಿ ನಿಂತರು. ಅಧಿಕಾರಿ ಒಬ್ಬೊಬ್ಬರ ಹೆಸರು ಕರೆದು ಬಿಡುಗಡೆಯ ಅಪ್ಪಣೆ ಕೊಡತೊಡಗಿದ. ಕೈದಿಗಳ ಮುಖ ಸಂತೋಷದಿಂದ ಅರಳಿತ್ತು. ಯಾರ ಹೆಸರು ಕರೆಯಲ್ಪಡುತ್ತಿತ್ತೋ ಆತ ಖುಷಿಯಿಂದ ಅಧಿಕಾರಿಯ ಬಳಿ ಬಂದು ಅಪ್ಪಣೆ ಪಡೆದು, ಬಗ್ಗಿ ಸಲಾಮು ಮಾಡಿ, ಆಪತ್ಕಾಲದಲ್ಲಿ ತನ್ನೊಂದಿಗಿದ್ದ ಮಿತ್ರರನ್ನೆಲ್ಲಾ ಆಲಂಗಿಸಿ ಹೊರಹೋಗುತ್ತಿದ್ದ. ಅವನ ಮನೆಯವರು ಓಡಿ ಬಂದು ಅವನನ್ನು ತಬ್ಬುವರು. ಕೆಲವರು ಹಣ ಹಂಚಿದರೆ ಮತ್ತೆ ಕೆಲವರು ಮಿಠಾಯಿ ಹಂಚಿದರು. ಕೆಲವರು ಜೇಲಿನ ಕೆಲಸದವರಿಗೆ ಇನಾಮು ಕೊಡುತ್ತಿದ್ದರು. ಇಂದು ನರಕದ ಬೊಂಬೆಗಳು ವಿನಮ್ರತೆಯ ದೇವತೆಗಳಾಗಿದ್ದರು.

ಕೊನೆಯಲ್ಲಿ ಭಕ್ತಸಿಂಹನ ಹೆಸರು ಬಂತು. ಅವನು ತಲೆತಗ್ಗಿಸಿ ನಿಧಾನವಾಗಿ ಜೇಲರನ ಬಳಿ ಬಂದು ಉದಾಸೀನತೆಯೊಂದಿಗೆ ಅಪ್ಪಣೆ ಪಡೆದು ಜೇಲಿನ ಬಾಗಿಲತ್ತ ನಡೆದ. ಹೊರಬಂದು ಅಲ್ಲೇ ನೆಲದ ಮೇಲೆ ಕುಳಿತ. ಹೋಗೋದಾದ್ರೂ ಎಲ್ಲಿಗೆ?

ಇದ್ದಕ್ಕಿದ್ದಂತೆ ಕುದುರೆ ಏರಿದ ಸೇನಾಧಿಕಾರಿಯೊಬ್ಬ ಜೇಲಿನತ್ತ ಬರುವುದನ್ನವನು ಕಂಡ. ಖಾಕಿ ಸಮವಸ್ತ್ರ, ತಲೆಗೆ ಪೇಟದೊಂದಿಗೆ ಧಿಮಾಕಿನಿಂದ ಕುದುರೆಯ ಮೇಲೆ ಕುಳಿತಿದ್ದ. ಅವನ ಹಿಂದೊಂದು ತುಕುಡಿ ಬರುತ್ತಿತ್ತು. ಜೇಲಿನ ಸಿಪಾಯಿಗಳು ಅಧಿಕಾರಿಯನ್ನು ನೋಡುತ್ತಿದ್ದಂತೆ ಬಂದೂಕು ಸಾವರಿಸಿ ಸಾಲಾಗಿ ನಿಂತು ಸಲಾಮು ಮಾಡಿದರು.

ಭಕ್ತಸಿಂಹ ಮನದಲ್ಲೇ ಅಂದುಕೊಂಡ, ''ಅವನೊಬ್ಬ ದೇವರು. ಅವನಿಗಾಗಿ ಒಂದು ಸೇನೆಯೇ ಬಂದಿದೆ. ನಾನೊಬ್ಬ ನಿರ್ಭಾಗ್ಯ. ನಿಲ್ಲಲೂ ನೆಲೆಯಿಲ್ಲ''

ಸೇನಾಧಿಕಾರಿ ಆಚೀಚೆ ನೋಡಿ ಕುದುರೆ ಇಳಿದು ಸೀದಾ ಭಕ್ತಸಿಂಹನೆದುರು ಬಂದು ನಿಂತ.

ಅವನನ್ನು ಗಮನವಿಟ್ಟು ನೋಡಿದ ಭಕ್ತಸಿಂಹ ಬೆಚ್ಚಿಬಿದ್ದು ಎದ್ದುನಿಂತು ಹೇಳಿದ. ''ಮಗು, ಜಗತ್‌ಸಿಂಹ''!

ಜಗತ್‌ಸಿಂಹ ಅಳುತ್ತ ತಂದೆಯ ಪಾದಗಳ ಮೇಲೆ ತಲೆ ಇಟ್ಟ.

ಮೂಲ ಹಿಂದಿ ಕಥೆ : **ಮುನ್ಶಿ ಪ್ರೇಮಚಂದ್**
ಕನ್ನಡಕ್ಕೆ : **ಟಿ. ಎಸ್. ಲಲಿತ**
ನಂ. ೭೦೨, ೧೧ನೇ ಮಹಡಿ, ೧೭ನೇ ಮುಖ್ಯರಸ್ತೆ
ಸರಸ್ವತಿಪುರಂ, ಮೈಸೂರು - ೫೭೦ ೦೦೯



# ಮೊದಲ ಪಾರ್ಲಿಮೆಂಟ್ ಸದಸ್ಯನಾಗಿ ನನ್ನ ಅನುಭವ

**ಭಾ**ರತ ಕಮ್ಯೂನಿಸ್ಟ್ ಪಕ್ಷದ, ದಕ್ಷಿಣ ಕನ್ನಡ ಜಿಲ್ಲೆಯ ಓರ್ವ ಕಾರ್ಯಕರ್ತನೆಂಬ ನೆಲೆಯಲ್ಲಿ ಪಕ್ಷದ ಕೇಂದ್ರದ ನಿರ್ದೇಶನದಂತೆ ನನ್ನನ್ನು ಮದ್ರಾಸ್ ಅಸೆಂಬ್ಲಿಯಿಂದ ೧೯೫೨ರಲ್ಲಿ ಮೊದಲ ರಾಜ್ಯ ಸಭೆಗೆ ಆಯ್ಕೆಗೊಳಿಸಲಾಗಿತ್ತು. ಆಗ ನನ್ನ ವಯಸ್ಸು ಮೂವತ್ತಮೂರು ವರ್ಷಗಳು. ಪ್ರಗತಿಪರ ವಿಚಾರಧಾರೆಯನ್ನು ಹೊಂದಿದ್ದು, ಪ್ರಜಾಸತ್ತಾತ್ಮಕ ಮೌಲ್ಯಗಳಲ್ಲಿ ದೃಢವಾದ ನಂಬಿಕೆಯಿದ್ದ ಪಂಡಿತ್ ಜವಾಹರಲಾಲ್ ನೆಹರೂರವರು ಪ್ರಧಾನಿಯಾಗಿಯೂ, ಮಹಾನ್ ವಿದ್ವಾಂಸರಾಗಿದ್ದ ಸರ್ವೇಪಲ್ಲಿ ರಾಧಾಕೃಷ್ಣನ್ ಉಪರಾಷ್ಟ್ರಪತಿಗಳೂ, ರಾಜ್ಯಸಭೆಯ ಸಭಾಪತಿಗಳೂ ಆಗಿದ್ದ ಆ ಸಂದರ್ಭದಲ್ಲಿ ಆ ಸದನದ ಸದಸ್ಯನಾದುದು ಯುವಕನಾಗಿದ್ದ ನನ್ನಂತಹವನೊಬ್ಬನಿಗೆ ಪಕ್ಷವು ಒದಗಿಸಿದ ಸದವಕಾಶವೇ ಆಗಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಓರ್ವ ಕಾರ್ಯಕರ್ತನೆಂಬ ನೆಲೆಯಲ್ಲಿ ನನಗೆ ರಾಜ್ಯ ಸಭೆಯ ಸದಸ್ಯತ್ವವನ್ನು ನೀಡಲಾಗಿದ್ದುದರಿಂದ ನಾನು ರಾಜ್ಯ ಸಭೆಯಲ್ಲಿ ಓರ್ವ ಕನ್ನಡಿಗನಾಗಿ ಆ ಎರಡು ವರ್ಷಗಳ ಕಾಲಾವಧಿಯನ್ನು ಸದುಪಯೋಗ ಪಡಿಸಿಕೊಂಡಿರುವೆನೆಂಬ ತೃಪ್ತಿಯು ನನಗಿದೆ. ಆ ಎರಡು ವರ್ಷಗಳಲ್ಲಿ ರಾಜ್ಯದ ಬರಗಾಲದ ಬಗ್ಗೆ, ಆಹಾರದ ಕೊರತೆಯ ಸಮಸ್ಯೆಗಳ ಬಗ್ಗೆ, ಕೋಲಾರ ಚಿನ್ನದ ಗಣಿಗಳ ರಾಷ್ಟ್ರೀಕರಣದ ಬಗ್ಗೆ, ಹಾಸನ-ಮಂಗಳೂರು ರೈಲು ಮಾರ್ಗದ ಬಗ್ಗೆ ಹಾಗೂ ಕರ್ನಾಟಕ ಏಕೀಕರಣದ ಬಗ್ಗೆ ಒತ್ತಾಯಿಸಿ ವಿವಿಧ ಚರ್ಚೆಗಳಲ್ಲಿ ಭಾಗವಹಿಸಿದ್ದೆ. ರಾಜ್ಯದ ಸಮಸ್ಯೆಗಳನ್ನು ಅರಿತುಕೊಳ್ಳುವುದಕ್ಕಾಗಿಯೂ, ಪಕ್ಷವನ್ನು ಬಲಪಡಿಸುವ ದೃಷ್ಟಿಯಿಂದಲೂ ನಾನು ರಾಜ್ಯದಾದ್ಯಂತ ಪ್ರವಾಸ ಮಾಡಿದ್ದೆ; ಬರ ಪರಿಹಾರವನ್ನು ಒತ್ತಾಯಿಸುವುದಕ್ಕಾಗಿ, ಆಹಾರ ಪೂರೈಕೆಯನ್ನು ಉತ್ತಮಪಡಿಸಬೇಕೆಂದು ಒತ್ತಾಯಿಸುವುದಕ್ಕಾಗಿ ರಾಜ್ಯದ ವಿವಿಧೆಡೆಗಳಲ್ಲಿ ಪಕ್ಷವು ಸಂಘಟಿಸಿದ್ದ ಚಳುವಳಿಗಳಲ್ಲೂ ನಾನು ಭಾಗವಹಿಸಿದ್ದೆ. ಕಮ್ಯುನಿಸ್ಟ್ ಪಕ್ಷದ ನಾಯಕರಾಗಿದ್ದ ಎನ್. ಕೆ. ಉಪಾಧ್ಯಾಯ ಮತ್ತು ಸಂಗಡಿಗರೊಂದಿಗೆ ರಾಜ್ಯದಾದ್ಯಂತ ಪ್ರವಾಸಗೈದ ಆ ಅನುಭವವು ಮರೆಯಲಾಗದ್ದು.

ಹಿಂದಿ ಮತ್ತು ಆಂಗ್ಲಭಾಷೆಯ ಜ್ಞಾನವಿರದ, ಮಲೆಯಾಳಿ ಭಾಷೆಯನ್ನು ಮಾತ್ರ ಮಾತನಾಡಬಲ್ಲ ನಮ್ಮ ಪಕ್ಷದ ಸದಸ್ಯರೊಬ್ಬರು ಮದ್ರಾಸ್ ಅಸೆಂಬ್ಲಿಯಿಂದಲೇ ಚುನಾಯಿತರಾಗಿ ರಾಜ್ಯಸಭೆಯಲ್ಲಿದ್ದರು. ಅಧ್ಯಕ್ಷರ ಅನುಮತಿಯನ್ನು ಕೋರಿ, ತನ್ನ ವಿಷಯಗಳನ್ನು ಮಂಡಿಸುತ್ತಾ ಮಲೆಯಾಳಿ ಭಾಷೆಯಲ್ಲಿ ಅವರು ಮಾಡಿದ್ದ ಭಾಷಣವನ್ನು ನಾನು ಆಂಗ್ಲ ಭಾಷೆಗೆ ತರ್ಜುಮೆ ಮಾಡಿ ರಾಜ್ಯಸಭೆಯಲ್ಲಿ ಮಂಡಿಸಿದ್ದೆನು. ಆ ಸಂದರ್ಭದಲ್ಲಿ ಡಾ|| ರಾಧಾಕೃಷ್ಣನ್‌ರವರು ಸಭಾಧ್ಯಕ್ಷರಾಗಿಯೂ, ಪಂಡಿತ್ ಜವಾಹರಲಾಲ್ ನೆಹರೂರವರು ಸಭಾನಾಯಕರಾಗಿಯೂ ಸಭೆಯಲ್ಲಿ ಉಪಸ್ಥಿತರಾಗಿದ್ದರು. ನೆಹರೂರವರು ನನ್ನ ಆಂಗ್ಲ ಭಾಷಣದ ಧಾಟಿಯನ್ನೂ, ಮಂಡಿಸಿದ ಬೇಡಿಕೆಗಳ ವಿವರಣೆಗಳ ಕ್ರಮವನ್ನೂ ಕೇಳಿ ಅವರ ಭಾಷಣದಲ್ಲಿ ನನ್ನ ಕೃತ್ಯಕ್ಕೆ ಮುಕ್ತ ಕಂಠದಿಂದ ಮೆಚ್ಚುಗೆಯನ್ನು ವ್ಯಕ್ತಪಡಿಸಿ ನಮ್ಮ ಕೋರಿಕೆಗೆ ಅವರ ಒಪ್ಪಿಗೆಯನ್ನು ಸೂಚಿಸಿದ್ದರು. ಇದು ನನಗೆ ದೊರೆತ ಅಪೂರ್ವ ಸುಸಂದರ್ಭವೆಂದು ನಾನು ಭಾವಿಸುತ್ತೇನೆ.

ಭಾರತ ಕಮ್ಯೂನಿಸ್ಟ್ ಪಕ್ಷದ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ನಾನು ಕಾಂಗ್ರೆಸ್ಸೇತರರು ಸಂಘಟಿಸಿದ್ದ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ (ಅಕರಾನಿಪ)ನ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಗೊಂಡು ಕಾರ್ಯ ನಿರ್ವಹಿಸಿರುವೆನು. ಹುಬ್ಬಳ್ಳಿಯಲ್ಲಿ ಅಕರಾನಿಪ ಸದಸ್ಯರು ಹಮ್ಮಿಕೊಂಡಿದ್ದ ಒಂದು ಚಳುವಳಿಯನ್ನು ಅಲ್ಲಿನ ಕಾರ್ಯಕರ್ತರು ಬೃಹತ್ ಚಳುವಳಿಯಾಗಿ ನಡೆಸಿದ ಸಂದರ್ಭದಲ್ಲಿ, ಸಮಿತಿಯ ಮುಖ್ಯ ಸಂಘಟಕರಾಗಿದ್ದ ಎ. ಜೆ. ಮುಧೋಳ್ ಮತ್ತಿತರ ಹಲವಾರು ಸದಸ್ಯರನ್ನು ಬಂಧಿಸಲಾಗಿತ್ತು. ಆ ಸಂದರ್ಭದಲ್ಲಿ ನಾನು ರಾಜ್ಯಸಭೆಯಲ್ಲಿ ಗಮನ ಸೆಳೆಯುವ ಸೂಚನೆಯ ಮೂಲಕ ವಿಷಯವನ್ನು ಮಂಡಿಸಿ ಬಂಧಿತರಾಗಿದ್ದ ಎಲ್ಲರ ಬಿಡುಗಡೆ ಮತ್ತು ಕರ್ನಾಟಕ ಏಕೀಕರಣಕ್ಕೆ ಸಹಾನುಭೂತಿಯನ್ನು ಪಡೆಯುವುದರಲ್ಲಿ ಯಶಸ್ವಿಯಾಗಿದ್ದೆನು. ಕರ್ನಾಟಕ ಏಕೀಕರಣದ ಚಳುವಳಿಯಲ್ಲಿ ಭಾಗವಹಿಸುತ್ತಾ ಕೇರಳದವನಾಗಿ ಪರಿಚಯಿಸಿಕೊಳ್ಳುವ ಅಭಿಲಾಷೆಯನ್ನು ನಾನು ಎಂದೂ ಪ್ರಕಟಿಸಿರಲಿಲ್ಲ. ನನ್ನ ಪಕ್ಷವು ಸಹ ನನ್ನನ್ನು ಒಬ್ಬ ಕರ್ನಾಟಕದ ಕಾರ್ಯಕರ್ತನೆಂದು ಪರಿಗಣಿಸಿತ್ತಲ್ಲದೆ ಬೇರಾವುದೇ ಭಾಷೆ, ಯಾವ ಪ್ರಾಂತ್ಯಕ್ಕೆ ಸೇರಿದವನೆಂದು ಪರಿಗಣಿಸಿರಲಿಲ್ಲವಾದ್ದರಿಂದ ನಾನು ಇಂದಿಗೂ ಕರ್ನಾಟಕದವನಾಗಿಯೇ ಉಳಿದಿದ್ದೇನೆ.

**ಬಿ. ವಿ. ಕಕ್ಕಿಲ್ಲಾಯ**
ನಂ. ೩-೧೭/೪, 'ಗಂಗಾ', ಸ್ಟೇಮನ್ ರಸ್ತೆ, ಕಂಕನಾಡಿ
ಮಂಗಳೂರು - ೫೭೫ ೦೦೨

ಜೀವನ ಒಂದು ಬಸ್ಸಿನ
ಪ್ರಯಾಣವಿದ್ದಂತೆ ನಮ್ಗೆ
ಯಾರು ಪರಿಚಯವಾಗ್ತಾರೊ
ಅವರು ನಮ್ ಜೊತೆ ಪ್ರಯಾಣ
ಮಾಡ್ತಿರೊ ಸಹಪ್ರಯಾಣಿಕರಿದ್ದಂತೆ
ಯಾರು ನಮ್ಮಿಂದ ದೂರವಾಗ್ತಾರೊ
ಅವರ... ನಿಲ್ದಾಣ ಬಂದಿದೆ ಎಂದರ್ಥ.

**ಆರ್. ವಿ. ಮಂಜುನಾಥ**
ನಂ. ೩೦, ೨ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ, ವಿದ್ಯಾರಣ್ಯಪುರ
ಮೈಸೂರು - ೫೭೦ ೦೦೮

# ಶಾಲಾ ಶಿಕ್ಷಣದಲ್ಲಿ ಹಿರಿಮೆಗಿಂತ ಸಮತೆಯೇ ದೊಡ್ಡದು

**ಡಾ|| ನಿರಂಜನಾರಾಧ್ಯ ವಿ. ಪಿ.**

**ವಾಸ್ತವಿಕವಾಗಿ ನಮ್ಮ ಶಿಕ್ಷಣ ವ್ಯವಸ್ಥೆಯ ಈ ಎಲ್ಲಾ ನ್ಯೂನತೆಗಳನ್ನು ಆರಂಭದಲ್ಲಿಯೇ ಗುರುತಿಸಿದ ೧೯೬೪-೬೬ರ ಶಿಕ್ಷಣ ಆಯೋಗ (ಕೊಥಾರಿ ಆಯೋಗ) ಇಂತಹ ಶ್ರೇಣೀಕೃತ ಅಸಮಾನತೆಯಿಂದ ಕೂಡಿದ ಶಿಕ್ಷಣ ವ್ಯವಸ್ಥೆಯಿಂದ ಹೊರಬಂದು ಎಲ್ಲಾ ಮಕ್ಕಳಿಗೂ ಸಮಾನ ಅವಕಾಶ ಕಲ್ಪಿಸುವ ಸಮಾನ ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳುವಂತೆ ಪ್ರಬಲವಾಗಿ ಶಿಫಾರಸ್ಸು ಮಾಡಿತ್ತು. ಈ ಶಿಫಾರಸ್ಸನ್ನು ನಂತರ ನಾವು ರೂಪಿಸಿಕೊಂಡ ೧೯೬೮, ೧೯೮೬ ಮತ್ತು ೧೯೯೨(ಪರಿಷ್ಕೃತ)ರ ರಾಷ್ಟ್ರೀಯ ಶಿಕ್ಷಣ ನೀತಿಗಳಲ್ಲಿಯೂ ಸಹ ಅಳವಡಿಸಿಕೊಳ್ಳಲಾಗಿತ್ತು. ಆದರೆ, ಇದು ಕೇವಲ ಶಿಫಾರಸ್ಸಾಗಿಯೇ ಉಳಿದ ಕಾರಣ ಮತ್ತು ಅಂದಿನಿಂದ ಇಂದಿನವರೆಗೆ ಶಿಕ್ಷಣ ಕ್ಷೇತ್ರದಲ್ಲಿ ಖಾಸಗೀಕರಣವು ಯಾವುದೇ ಲಂಗುಲಗಾಮಿಲ್ಲದೆ ಬೆಳೆದ ಕಾರಣ ಅಗಾಧವಾದ ಅಸಮಾನತೆ, ತಾರತಮ್ಯ ಮತ್ತು ಶ್ರೇಣೀಕೃತ ವ್ಯವಸ್ಥೆ ಸೃಷ್ಟಿಯಾಗಿದ್ದು ಶಾಲಾಶಿಕ್ಷಣದ ವ್ಯವಸ್ಥೆಯೇ ಒಂದು ಗೊಂದಲದ ಗೂಡಾಗಿ ಪರಿಣಮಿಸಿದೆ.**

**ನಾ**ಗರಿಕತೆಯ ಪ್ರಾರಂಭದಲ್ಲಿ ಮಾನವನ ಬದುಕು ಸಾಮೂಹಿಕ ಒಡೆತನ ಮತ್ತು ಪರಸ್ಪರ ಸಹಕಾರದಿಂದ ಕೂಡಿತ್ತು. ಶಿಕ್ಷಣ ಅನೌಪಚಾರಿಕವಾಗಿದ್ದು, ಪರಸ್ಪರ ಅನುಭವ ಹಂಚಿಕೆಯ ಮೂಲಕ ಜ್ಞಾನವನ್ನು ಕಟ್ಟಿಕೊಳ್ಳುವ ಪ್ರಕ್ರಿಯೆ ಸಾಂಘಿಕವಾಗಿತ್ತು. ಕ್ರಮೇಣವಾಗಿ ಕುಟುಂಬ ಮತ್ತು ಆಸ್ತಿಯ ಉಗಮವಾದ ನಂತರ ಸಾಮೂಹಿಕ ಒಡೆತನದ ಬದಲು ಗುಂಪುಗಳ ಮತ್ತು ಕೌಟುಂಬಿಕ ಒಡೆತನ ಪ್ರಾರಂಭವಾಯಿತು. ಈ ವಿಭಜನೆಯಿಂದಾಗಿ ಒಬ್ಬರು ಮತ್ತೊಬ್ಬರನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುವ ಮೂಲಕ ಸಮಾನತೆಯ ಬದಲಾಗಿ ಗುಲಾಮಗಿರಿ ಸಂಸ್ಕೃತಿಯನ್ನು ಮಾನವನ ನಾಗರಿಕತೆಯಲ್ಲಿ ಹುಟ್ಟುಹಾಕಲಾಯಿತು. ಕೇವಲ ಬೆರಳೆಣಿಕೆಯಷ್ಟು ಒಡೆಯರು, ಬಹುಸಂಖ್ಯಾತ ಜನರನ್ನು ಗುಲಾಮರನ್ನಾಗಿಸಿಕೊಂಡು ದುಡಿಸಿಕೊಳ್ಳುವ ಶೋಷಣೆಯ ಸಂಸ್ಕೃತಿ ಮಾನವನ ಬದುಕಿನಲ್ಲಿ ಪ್ರಾರಂಭವಾಯಿತು.

ಬಹುಸಂಖ್ಯಾತ ಜನರು ಸದಾಕಾಲ ತಮ್ಮ ಸೇವಕರಾಗಿ ಉಳಿಯಬೇಕಾದರೆ ಮತ್ತು ತಮ್ಮ ಅಧಿಪತ್ಯವನ್ನು ನಿರಂತರವಾಗಿ ಮುಂದುವರಿಸಬೇಕಾದರೆ ಬಹುಸಂಖ್ಯಾತರನ್ನು ಶಿಕ್ಷಣವೆಂಬ ವಿಮೋಚನೆಯ ಅಸ್ತ್ರದಿಂದ ದೂರವಿಡಬೇಕೆಂಬ ಸತ್ಯವನ್ನು ಯಜಮಾನಿಕೆಯ ವರ್ಗವು ಚೆನ್ನಾಗಿ ತಿಳಿದಿತ್ತು. ಈ ಕಾರಣದಿಂದಾಗಿಯೇ ಶತಮಾನಗಳ ಕಾಲ ಶಿಕ್ಷಣ ಒಂದು ಸವಲತ್ತಾಗಿತ್ತೆ ಹೊರತು ಹಕ್ಕಾಗಿರಲಿಲ್ಲ. ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಅದರಲ್ಲೂ ವಿಶೇಷವಾಗಿ ಎಲ್ಲಾ ಮಕ್ಕಳಿಗೆ ಸಮಾನ ಗುಣಮಟ್ಟದ ಶಿಕ್ಷಣವನ್ನು ಒದಗಿಸುವ ಸಂಬಂಧ ನಡೆಯುವ ಯಾವುದೇ ಚರ್ಚೆ ಶಿಕ್ಷಣದ ಈ ರಾಜಕೀಯ ಸತ್ಯದಿಂದ ಹೊರತಾಗಿರಲು ಸಾಧ್ಯವಿಲ್ಲ. ಹೀಗಾಗಿ, ಸಮಾನ ಶಿಕ್ಷಣದ ಹೋರಾಟ ಒಂದು ರಾಜಕೀಯ ಹೋರಾಟ ಎಂಬುದನ್ನು ಮನಗಾಣುವುದು ಇಂದಿನ ತುರ್ತು ಅಗತ್ಯವಾಗಿದೆ. ಶಿಕ್ಷಣವನ್ನು ಒಂದು ಸಾಮಾಜಿಕ ಒಳಿತೆಂದು ಗುರುತಿಸಿ ಅದನ್ನು ಮಾರಾಟದ ಸರಕನ್ನಾಗಿಸಲು ಹೊರಟಿರುವ ಮಾರುಕಟ್ಟೆಯ ಕಪಿಮುಷ್ಟಿಯಿಂದ ಸ್ವತಂತ್ರಗೊಳಿಸದಿದ್ದರೆ ನಮ್ಮ ಎಲ್ಲ ಹೋರಾಟಗಳು ನಿರರ್ಥಕವಾಗುತ್ತವೆ.

ಫೆಬ್ರವರಿ ೨, ೧೮೩೫ರಲ್ಲಿ ಮೆಕಾಲೆಯವರು ತಮ್ಮ ಪ್ರಸಿದ್ಧ ಟಿಪ್ಪಣಿಯಲ್ಲಿ ಭಾರತೀಯರಿಗೆ ಯಾವ ರೀತಿಯ ಶಿಕ್ಷಣ ನೀಡಬೇಕೆಂಬ ವಿಷಯವನ್ನು ತೀರ್ಮಾನಿಸುತ್ತಾ ''ಬಣ್ಣ ಮತ್ತು ರಕ್ತದಲ್ಲಿ ಭಾರತೀಯರಾಗಿದ್ದು, ಅಭಿರುಚಿ, ತೀರ್ಮಾನ, ನೈತಿಕತೆ ಮತ್ತು ಬುದ್ಧಿವಂತಿಕೆಯಲ್ಲಿ ಆಂಗ್ಲರನ್ನು ಹೋಲುವ ಮಿಲಿಯಾಂತರ ದುಭಾಷಿಗಳನ್ನು ತಯಾರಿಸುವುದೇ ಶಿಕ್ಷಣದ ಉದ್ದೇಶ'' ಎಂದು ಫರ್ಮಾನು ಹೊರಡಿಸಿದ್ದರು. ನಿಜ ಹೇಳಬೇಕೆಂದರೆ, ನಾವು ಈಗ ಚರ್ಚಿಸುತ್ತಿರುವ ಉಚಿತ ಮತ್ತು ಕಡ್ಡಾಯ ಶಿಕ್ಷಣದ ವಿಷಯ ಮೊಟ್ಟಮೊದಲಿಗೆ ಕಾಯ್ದೆಯಾಗಿ ೧೮೭೦ರಲ್ಲಿ ಇಂಗ್ಲೆಂಡ್‌ನಲ್ಲಿ ಜಾರಿಯಾದಾಗ ಅದರ ಹಿಂದಿದ್ದ ಉದ್ದೇಶ ಶಿಕ್ಷಣದ ಸಾರ್ವತ್ರೀಕರಣಕ್ಕಿಂತಲೂ ಹೆಚ್ಚಾಗಿ ಕೈಗಾರಿಕಾ ಕ್ರಾಂತಿಯ ಭಾಗವಾಗಿ ವಸಾಹತುಶಾಹಿ ತನ್ನ ಮಾರುಕಟ್ಟೆಯನ್ನು ವಿಸ್ತರಿಸುವ ಕೆಲಸಕ್ಕೆ ಅಗತ್ಯವಾದ ಅರೆಕೊರೆ ಶಿಕ್ಷಿತರ (ಸುಶಿಕ್ಷಿತರಲ್ಲದ) ಒಂದು ದುಡಿಯುವ ವರ್ಗವನ್ನು ಕಟ್ಟಿಕೊಳ್ಳುವುದಾಗಿತ್ತು. ಇಂದಿಗೂ ನಾವು ಈ ಮೂಲ ಚೌಕಟ್ಟಿನಿಂದ ಪೂರ್ಣವಾಗಿ ಹೊರಬಂದಿಲ್ಲ ಎಂಬುದು ಗಮನಿಸಬೇಕಾದ ಮುಖ್ಯಾಂಶ.

ಭಾರತದಲ್ಲಿ ಸ್ವಾತಂತ್ರ್ಯದ ನಂತರ ಕೇವಲ ಓದು, ಬರಹ ಮತ್ತು ಲೆಕ್ಕಾಚಾರಕ್ಕೆ ವಿಭಿನ್ನವಾಗಿ ಬುದ್ಧಿ, ಮನಸ್ಸು ಮತ್ತು ಅಂಗಾಂಗಗಳ ಚಲನ ಶೀಲತೆಯನ್ನು ಒಳ ಗೊಳ್ಳುವ ಶಿಕ್ಷಣ



ಪ್ರಕ್ರಿಯೆಯ ಮೂಲಕ ಮಾನವನ ಸರ್ವತೋಮುಖ ಅಭಿವೃದ್ಧಿಗೆ ನೆರವಾಗುವ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳಲು ಪ್ರತಿಪಾದಿಸಲಾಯಿತಾದರೂ ಅದು ಮರೀಚಿಕೆಯಾಗಿಯೇ ಉಳಿಯಿತು. ಬದಲಾಗಿ, ಸಂವಿಧಾನ ಪ್ರತಿಪಾದಿಸುವ ಮೂಲ ತತ್ವಗಳಾದ ಸಮಾನತೆ, ಸಾಮಾಜಿಕ ನ್ಯಾಯ ಮತ್ತು ತಾರತಮ್ಯರಹಿತ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ನಾವು ಕಟ್ಟಿಕೊಳ್ಳಲು ಸಾಧ್ಯವಾಗಿಲ್ಲವೆಂಬುದು ಇಂದಿನ ಸಂದರ್ಭದಲ್ಲಿ ಗಂಭೀರವಾಗಿ ಚರ್ಚಿಸಬೇಕಾದ ವಿಷಯ. ವಾಸ್ತವಿಕವಾಗಿ ನಮ್ಮ ಶಿಕ್ಷಣ ವ್ಯವಸ್ಥೆಯ ಈ ಎಲ್ಲ ನ್ಯೂನತೆಗಳನ್ನು ಆರಂಭದಲ್ಲಿಯೇ ಗುರುತಿಸಿದ ೧೯೬೪-೬೬ರ ಶಿಕ್ಷಣ ಆಯೋಗ (ಕೊಥಾರಿ ಆಯೋಗ) ಇಂತಹ ಶ್ರೇಣೀಕೃತ ಅಸಮಾನತೆಯಿಂದ ಕೂಡಿದ ಶಿಕ್ಷಣ ವ್ಯವಸ್ಥೆಯಿಂದ ಹೊರಬಂದು ಎಲ್ಲ ಮಕ್ಕಳಿಗೂ ಸಮಾನ ಅವಕಾಶ ಕಲ್ಪಿಸುವ ಸಮಾನ ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳುವಂತೆ ಪ್ರಬಲವಾಗಿ ಶಿಫಾರಸ್ಸು ಮಾಡಿತ್ತು. ಈ ಶಿಫಾರಸ್ಸನ್ನು ನಂತರ ನಾವು ರೂಪಿಸಿಕೊಂಡ ೧೯೬೮, ೧೯೮೬ ಮತ್ತು ೧೯೯೨(ಪರಿಷ್ಕೃತ)ರ ರಾಷ್ಟ್ರೀಯ ಶಿಕ್ಷಣ ನೀತಿಗಳಲ್ಲಿಯೂ ಸಹ ಅಳವಡಿಸಿಕೊಳ್ಳಲಾಗಿತ್ತು. ಆದರೆ, ಇದು ಕೇವಲ ಶಿಫಾರಸ್ಸಾಗಿಯೇ ಉಳಿದ ಕಾರಣ ಮತ್ತು ಅಂದಿನಿಂದ ಇಂದಿನವರೆಗೆ ಶಿಕ್ಷಣ ಕ್ಷೇತ್ರದಲ್ಲಿ ಖಾಸಗೀಕರಣವು ಯಾವುದೇ ಲಂಗುಲಗಾಮಿಲ್ಲದೆ ಬೆಳೆದ ಕಾರಣ ಅಗಾಧವಾದ ಅಸಮಾನತೆ, ತಾರತಮ್ಯ ಮತ್ತು ಶ್ರೇಣೀಕೃತ ವ್ಯವಸ್ಥೆ ಸೃಷ್ಟಿಯಾಗಿದ್ದು ಶಾಲಾಶಿಕ್ಷಣದ ವ್ಯವಸ್ಥೆಯೇ ಒಂದು ಗೊಂದಲದ ಗೂಡಾಗಿ ಪರಿಣಮಿಸಿದೆ.

ಪ್ರಸ್ತುತ ದೇಶಾದ್ಯಂತ ಚರ್ಚೆಯಾಗುತ್ತಿರುವ ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಶಿಕ್ಷಣ ಕಾಯ್ದೆ ೨೦೦೯, ನಂತರದಲ್ಲಿ ಶಿಕ್ಷಣ ಹಕ್ಕು ಕಾಯ್ದೆಯನ್ನು ಎತ್ತಿ ಹಿಡಿಯುವ ಸರ್ವೋಚ್ಚ ನ್ಯಾಯಾಲಯದ ಏಪ್ರಿಲ್ ೨೦೧೨ರ ತೀರ್ಪು ಮತ್ತು ಕರ್ನಾಟಕ ರಾಜ್ಯ ಸರ್ಕಾರ ಕಳೆದ ತಿಂಗಳು ರೂಪಿಸಿರುವ ಶಿಕ್ಷಣದ ನಿಯಮಗಳನ್ನು ನಾವು ವಿಶಾಲ ದೃಷ್ಟಿಕೋನದಲ್ಲಿ ಅರ್ಥೈಸಬೇಕಾದರೆ ಮೇಲಿನ ತಾತ್ವಿಕ ಚೌಕಟ್ಟು ಬಹಳ ಮುಖ್ಯವಾಗುತ್ತದೆ.

ಏಪ್ರಿಲ್ ೧, ೨೦೧೦ರಂದು ಶಿಕ್ಷಣ ಹಕ್ಕು ಕಾಯ್ದೆ ೨೦೦೯ ಜಾರಿಯಾದಾಗ ದೇಶದಲ್ಲಿ ಶಿಕ್ಷಣ ಕ್ರಾಂತಿಯಾಯಿತು ಎಂದು ಬಿಂಬಿಸಲಾಗಿತ್ತು. ಶಿಕ್ಷಣ ಹಕ್ಕು ಕಾಯ್ದೆಯಲ್ಲಿರುವ ಸಂವಿಧಾನ ವಿರೋಧಿ ಅಂಶಗಳನ್ನು ಗುರುತಿಸಲಾಗದ ಹಲವು ತಜ್ಞರು ಕಾಯಿದೆಯನ್ನು ಹಗಲು ರಾತ್ರಿ ಹಾಡಿ ಹೊಗಳಿದ್ದುಂಟು. ಹುಟ್ಟಿನಿಂದ ಹದಿನಾಲ್ಕು ವರ್ಷ ವಯಸ್ಸಿನ ಮಕ್ಕಳಿಗಿದ್ದ ಸಂವಿಧಾನಬದ್ಧ ಶಿಕ್ಷಣದ ಹಕ್ಕನ್ನು ಮೊಟಕುಗೊಳಿಸಿ ಕೇವಲ ಆರರಿಂದ ಹದಿನಾಲ್ಕು ವರ್ಷ ವಯಸ್ಸಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಕಾನೂನು ವಿಧಿಸುವ ರೀತಿಯಲ್ಲಿ ಒದಗಿಸಲು ಪ್ರತಿಪಾದಿಸಿದ ಮತ್ತು ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆಯ ಅನ್ವಯ ಹದಿನೈದರಿಂದ ಹದಿನೆಂಟು ವರ್ಷ ವಯಸ್ಸಿನ ಮಕ್ಕಳಿಗೆ ಶಿಕ್ಷಣವನ್ನು ವಿಸ್ತರಿಸದ ಈ ಕಾಯ್ದೆಯು ಸಂವಿಧಾನದ ಹಾಗೂ ಅಂತರರಾಷ್ಟ್ರೀಯ ಕಾನೂನುಗಳ ಮೂಲ ಆಶಯವಾದ ಸಮಾನತೆ, ಸಾಮಾಜಿಕನ್ಯಾಯ ಮತ್ತು ತಾರತಮ್ಯ ರಹಿತ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳಲು ಹೇಗೆ ಸಹಾಯಕವಾಗುತ್ತದೆ ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಇರಾದೆ ಅವರಿಗಿರಲಿಲ್ಲ.

ಈಗ ಮತ್ತೊಮ್ಮೆ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ನಂತರ ಶೇಕಡ ೨೫ರ ಪ್ರವೇಶದ ಬಗ್ಗೆ ಇದೇ ರೀತಿಯ ಚರ್ಚೆಗಳು ಪ್ರಾರಂಭವಾಗಿವೆ. ವ್ಯವಸ್ಥೆಯ ಮೂಲ ಸಮಸ್ಯೆಗಳನ್ನು ಅಡಗಿಸಿಟ್ಟು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಗುಣಾತ್ಮಕತೆಯ ಆಧಾರದ ಮೇಲೆ ಪುನರ್‌ರಚಿಸಿ ಬಲಿಷ್ಠ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳದೆ ಕೇವಲ ತೋರಿಕೆಯ ಬದಲಾವಣೆಗಳನ್ನು ವೈಭವೀಕರಿಸುವ ಈ ಚರ್ಚೆಗಳು ಅತ್ಯಂತ ಅಪಾಯಕಾರಿ. ಈ ವಿಷಯದಲ್ಲಿ ಇಂದಿನ ವಾಸ್ತವಿಕತೆಯನ್ನು ತಿಳಿಸುವ ಮೂಲಕ ಹೊಸ ಚರ್ಚೆಯನ್ನು ಹುಟ್ಟುಹಾಕಬೇಕಾಗಿದೆ. ಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನ್‌ರವರು ಹೇಳುವಂತೆ ''ಸಮಸ್ಯೆಯನ್ನು ಸೃಷ್ಟಿಸಿರುವ ಪ್ರಜ್ಞೆಯ ಮೂಲಕವೇ ಸಮಸ್ಯೆಯನ್ನು ಬಗೆಹರಿಸಲಾಗದು, ಲೋಕವನ್ನು ನಾವು ಹೊಸದಾಗಿ ನೋಡಬೇಕಾಗುತ್ತದೆ.''

ಇಂದಿನ ನಮ್ಮ ಶಿಕ್ಷಣ ವ್ಯವಸ್ಥೆ ಅಸಮಾನತೆಯಿಂದ ಕೂಡಿದ್ದು ಎಲ್ಲಾ ಮಕ್ಕಳಿಗೆ ಸಮಾನ ಅವಕಾಶ ಮತ್ತು ಸಮಾನ ಭೌತಿಕ ಸೌಲಭ್ಯಗಳನ್ನು ಒದಗಿಸುವಲ್ಲಿ ವಿಫಲವಾಗಿದೆ. ಖಾಸಗಿ ಶಾಲೆಗಳಲ್ಲಿ ಎಲ್ಲವೂ ಇದೆ, ಸರ್ಕಾರಿ ಶಾಲೆಗಳಲ್ಲಿ ಏನೂ ಇಲ್ಲವೆಂಬ ಮನೋಧೋರಣೆ ಹೆಚ್ಚಾಗುತ್ತಿದ್ದು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಶಿಥಿಲಗೊಳಿಸುವ ಎಲ್ಲಾ ಪ್ರಯತ್ನಗಳು ನಡೆಯುತ್ತಿವೆ. ಮುಂದುವರಿದು, ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪರಿಣಾಮವಾಗಿ ಸಾರ್ವಜನಿಕ ಕ್ಷೇತ್ರದಲ್ಲಿರುವುದೆಲ್ಲಾ ಕಳಪೆ ಗುಣಮಟ್ಟದ್ದು ಮತ್ತು ಖಾಸಗಿ ಕ್ಷೇತ್ರದಲ್ಲಿರುವುದು ಶ್ರೇಷ್ಠ ಗುಣಮಟ್ಟದ್ದೆಂಬ ಅಪಪ್ರಚಾರದ ಮೂಲಕ ಶಿಕ್ಷಣದ ಖಾಸಗೀಕರಣ ಮತ್ತು ವ್ಯಾಪಾರೀಕರಣವನ್ನು ಮತ್ತಷ್ಟು ವಿಸ್ತರಿಸುವ ಮೂಲಕ ಲಾಭಾಂಶವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನಗಳು ವ್ಯವಸ್ಥಿತವಾಗಿ ನಡೆಯುತ್ತಿವೆ.

ಇದಕ್ಕೆ ಭಿನ್ನವಾಗಿ ಇಂದು ಜಗತ್ತಿನಲ್ಲೇ ಅತ್ಯಂತ ಶ್ರೇಷ್ಠ ಶಿಕ್ಷಣ ವ್ಯವಸ್ಥೆಯೆಂದು ಶ್ಲಾಘನೆಗೆ ಒಳಪಟ್ಟಿರುವ ಫಿನ್‌ಲ್ಯಾಂಡ್ ದೇಶದಲ್ಲಿ ಪೂರ್ವ ಪ್ರಾಥಮಿಕದಿಂದ ಪಿಹೆಚ್.ಡಿ.ಯವರೆಗೆ ಶಿಕ್ಷಣವು ಸಾರ್ವಜನಿಕ ವಲಯದಲ್ಲಿದೆ ಎಂಬುದು ಗಮನಾರ್ಹವಾದ ಅಂಶ. ಆ ದೇಶದ ಶ್ರೇಷ್ಠ ಶಿಕ್ಷಣತಜ್ಞ ಮತ್ತು ಶಿಕ್ಷಣ ಸಚಿವಾಲಯದ ನಿರ್ದೇಶಕರಾದ ಪಾಶಿ ಶಾಲ್‌ಬರ್ಗ್ ಹೇಳುವಂತೆ ''ದೇಶದ ಶಿಕ್ಷಕರಿಗೆ ಅತ್ಯುತ್ತಮವಾದ ಗೌರವಯುತ ಸಂಬಳ, ಸಾಕಷ್ಟು ಜವಾಬ್ದಾರಿ, ಶಿಕ್ಷಕ ವೃತ್ತಿಗೆ ಪ್ರವೇಶಿಸಲು ಕಡ್ಡಾಯವಾಗಿ ಸ್ನಾತಕೋತ್ತರ ಶಿಕ್ಷಣ ಮತ್ತು ಶಿಕ್ಷಕರ ತರಬೇತಿಗಾಗಿ ಆಯ್ಕೆಯಾದ ಕೆಲವೇ ಪ್ರತಿಷ್ಠಿತ ವೃತ್ತಿಪರಿಣಿತ ಸಂಸ್ಥೆಗಳ ಪರಿಣಾಮದಿಂದಾಗಿ ಪ್ರಪಂಚದಲ್ಲಿಯೇ ಅತ್ಯಂತ ಉತ್ತಮವಾದ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿಕೊಳ್ಳಲು ನಮ್ಮಲ್ಲಿ ಸಾಧ್ಯವಾಗಿದೆ.

ಮುಂದುವರಿದ ಅವರು ''ನಿಜವಾದ ವಿಜೇತರು ಎಂದಿಗೂ ಸ್ಪರ್ಧಿಸುವುದಿಲ್ಲ, ಬದಲಾಗಿ ಪರಸ್ಪರ ಸಹಾಯ ಮತ್ತು ಸಹಕಾರದಿಂದ ಗುಣಮಟ್ಟವನ್ನು ಸಾಧಿಸುತ್ತಾರೆ. ನನ್ನ ದೇಶದಲ್ಲಿ ಪ್ರತಿಷ್ಠಿತ ಶಾಲೆಗಳಾಗಲಿ, ಶಿಕ್ಷಕರಾಗಲಿ ಇಲ್ಲ. ನನ್ನ ದೇಶದಲ್ಲಿನ ಶಿಕ್ಷಣ ವ್ಯವಸ್ಥೆ ಮತ್ತು ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಶಿಕ್ಷಣ ವ್ಯವಸ್ಥೆಗಿರುವ ಮೂಲ ವ್ಯತ್ಯಾಸವೆಂದರೆ, ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಪಾಲಕರು ತಮ್ಮ ಮಕ್ಕಳನ್ನು ಸೇರಿಸಲು ಉಳಿದೆಲ್ಲ ಮಾರುಕಟ್ಟೆ ವ್ಯವಸ್ಥೆಯಂತೆ ಶಿಕ್ಷಣದಲ್ಲಿ ಖಾಸಗಿ ಶಾಲೆಗಳನ್ನು (ಅಂಗಡಿಗಳನ್ನು) ಆಯ್ಕೆ ಮಾಡಿಕೊಳ್ಳುವ ಮೂಲಕ ತಮಗೆ ಇಷ್ಟವಾದ ಅಂಗಡಿಯಲ್ಲಿ ಶಿಕ್ಷಣವನ್ನು ಕೊಂಡುಕೊಳ್ಳಬಹುದು. ನಮ್ಮ ದೇಶದಲ್ಲಿಯೂ ಸಹ ತಂದೆ ತಾಯಿಗಳು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿದ್ದಾರೆ. ಆದರೆ ಅವರಿಗೆ ಎಲ್ಲೆಡೆ ಒಂದೇ ರೀತಿಯ ಆಯ್ಕೆಗಳು ಮಾತ್ರ ದೊರೆಯುತ್ತವೆ. ಅಂತಿಮವಾಗಿ ನಮ್ಮ ದೇಶದಲ್ಲಿ ಒಟ್ಟಾರೆ ಶಿಕ್ಷಣ ಕಾರ್ಯಕ್ರಮದ ಉದ್ದೇಶ ಹೆಚ್ಚುಗಾರಿಕೆಗಿಂತ ಸಮತೆಯೇ ದೊಡ್ಡದು ಎಂಬ ತತ್ವದಿಂದ ಕೂಡಿದೆ.''

ಜಗತ್ತಿನ ಒಂದು ಪುಟ್ಟ ರಾಷ್ಟ್ರಕ್ಕೆ ಇಂತಹ ಅತ್ಯುತ್ತಮವಾದ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳಲು ಸಾಧ್ಯವಾದರೆ, ಪ್ರಪಂಚದಲ್ಲಿಯೇ ಬಲಿಷ್ಠ ರಾಷ್ಟ್ರವೆಂಬ ಹೆಗ್ಗಳಿಕೆಗೆ ಪೈಪೋಟಿ ನಡೆಸುತ್ತಿರುವ ನಮ್ಮ ದೇಶಕ್ಕೆ ಇದು ಏಕೆ ಸಾಧ್ಯವಿಲ್ಲವೆಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಎಲ್ಲದಕ್ಕಿಂತ ಮಿಗಿಲಾಗಿ ಸಂವಿಧಾನದಲ್ಲಿ ಸಮಾಜವಾದಿ ಆಶಯಗಳನ್ನು ಮೈಗೂಡಿಸಿಕೊಂಡಿರುವ ನಮಗೆ ಸಮಾನತೆಯ ನೆಲೆಗಟ್ಟಿನಲ್ಲಿ ಶಿಕ್ಷಣ ವ್ಯವಸ್ಥೆಯನ್ನು ಕಟ್ಟಿಕೊಳ್ಳಲು ಸಾಧ್ಯವಾಗದಿದ್ದರೆ ಸಂವಿಧಾನದ ಮೌಲ್ಯಗಳನ್ನು ಜಾರಿಗೊಳಿಸುವ ಬಗೆಯಾದರೂ ಹೇಗೆ ?

ಒಟ್ಟಾರೆ, ಹತ್ತು-ಹಲವು ಸಮಸ್ಯೆಗಳು ಇಂದು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಕಾಡುತ್ತಿದ್ದು ಅವುಗಳಿಗೆ ವೈಜ್ಞಾನಿಕ ಮತ್ತು ದೂರದೃಷ್ಟಿಯ ಆಧಾರದಲ್ಲಿ ಪರಿಹಾರ ಕಂಡುಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ಸರ್ಕಾರ ರಾಜ್ಯದಲ್ಲಿ ಶಿಕ್ಷಣ ವ್ಯವಸ್ಥೆ ಹೇಗಿರಬೇಕೆಂಬ ಬಗ್ಗೆ ಒಂದು ಸಮಗ್ರ ನೀತಿಯನ್ನು ರೂಪಿಸಿ ಸಾರ್ವಜನಿಕವಾಗಿ ಚರ್ಚಿಸಬೇಕಾಗಿದೆ. ಇಂತಹ ಒಂದು ಸಮಗ್ರ ನೀತಿಯನ್ನು ರೂಪಿಸಲು ತಜ್ಞರ ಸಮಿತಿಯನ್ನು ರಚಿಸಿ ಪ್ರಾಮಾಣಿಕವಾಗಿ ಸರ್ಕಾರಿ ಶಾಲೆಗಳನ್ನು ಸಬಲೀಕರಣಗೊಳಿಸುವ ಮೂಲಕ ಶಿಕ್ಷಣದ ಮೂಲಭೂತ ಹಕ್ಕನ್ನು ನಿಜವಾದ ಅರ್ಥದಲ್ಲಿ ಜಾರಿಗೊಳಿಸಿ ರಾಜ್ಯದ ಎಲ್ಲಾ ಮಕ್ಕಳಿಗೆ ಗುಣಾತ್ಮಕ ಶಿಕ್ಷಣ ಒದಗಿಸುವ ಕಾಯಕಲ್ಪಕ್ಕೆ ಸರ್ಕಾರ ಸಂಕಲ್ಪ ಮಾಡಬೇಕಾಗಿದೆ.

ಕೊನೆಯದಾಗಿ ಗ್ರಾಂಸಿಯವರು ಹೇಳುವಂತೆ ''ಪ್ರತಿಯೊಂದು ಯಜಮಾನಿಕೆಯ ಸಂಬಂಧ ಅವಶ್ಯಕವಾಗಿ ಶಿಕ್ಷಣದ ಸಂಬಂಧವಾಗಿರುತ್ತದೆ.'' ಇಂದಿನ ಮಾರುಕಟ್ಟೆಯ ಯಜಮಾನಿಕೆ ಶಿಕ್ಷಣ ಮತ್ತು ಸಮಾಜದ ಸಂಬಂಧವನ್ನು ಮಾರಾಟದ ಸಂಬಂಧವನ್ನಾಗಿಸಿ ವಿದ್ಯಾರ್ಥಿ ಮತ್ತು ಪಾಲಕರನ್ನು ಗ್ರಾಹಕರನ್ನಾಗಿಸಲು ಹೊರಟಿರುವುದು ನಮ್ಮ ಸಂವಿಧಾನದ ಮೂಲ ಆಶಯಗಳನ್ನು ಬುಡಮೇಲು ಮಾಡುವ ಅಪಾಯವಿದೆ. ಭಾರತದಲ್ಲಿ ಪ್ರಜಾಪ್ರಭುತ್ವವನ್ನು ಉಳಿಸಿ-ಬೆಳೆಸುವ ನಿಟ್ಟಿನಲ್ಲಿ ಈ ಸಂಬಂಧವನ್ನು ತೊಡೆದುಹಾಕಿ ಶಿಕ್ಷಣವನ್ನು ಸಾಮಾಜಿಕ ಒಳಿತನ್ನಾಗಿ ಸ್ವೀಕರಿಸುವ ಕಾಲ ಸನ್ನಿಹಿತವಾಗಿದೆ. ಈ ಮೂಲಕ ಕನಿಷ್ಠ ಪೂರ್ವ ಪ್ರಾಥಮಿಕ ಶಿಕ್ಷಣದಿಂದ ಹನ್ನೆರಡನೆಯ ತರಗತಿವರೆಗಾದರೂ ಶಿಕ್ಷಣವನ್ನು ಸಾರ್ವಜನಿಕ ಕ್ಷೇತ್ರದಲ್ಲಿ ಉಳಿಸಿಕೊಂಡು ಎಲ್ಲಾ ಮಕ್ಕಳು ತಮ್ಮ ನೆರೆಹೊರೆಯ ಶಾಲೆಯಲ್ಲಿ ಸಮಾನ ಶಿಕ್ಷಣ ವ್ಯವಸ್ಥೆಯನ್ನು ಪಡೆಯುವ ವ್ಯವಸ್ಥೆಗೆ ನಾಂದಿ ಹಾಡಬೇಕಿದೆ.

**ಡಾ|| ನಿರಂಜನಾರಾಧ್ಯ ವಿ. ಪಿ.**
ಫೆಲೋ ಮತ್ತು ಶಾಲಾ ಶಿಕ್ಷಣದ ಸಾರ್ವತ್ರೀಕರಣ ಕಾರ್ಯಕ್ರಮ ಮುಖ್ಯಸ್ಥರು ಮಗು ಮತ್ತು ಕಾನೂನು ಕೇಂದ್ರ, ಭಾರತ ವಿಶ್ವವಿದ್ಯಾಲಯದ ರಾಷ್ಟ್ರೀಯ ಕಾನೂನು ಶಾಲೆ, ಬೆಂಗಳೂರು - ೫೬೦ ೨೪೨

ತೆಲುಗು ಮೂಲ : ಪೈಡಿ ತೆರೇಶ್ ಬಾಬು ಕನ್ನಡಕ್ಕೆ : ನಗರಗೆರೆ ರಮೇಶ್



# ಸೋಮಾಲಿಯಾ ಮೇಕೆ

ಅದೊಂದು ರಮಣೀಯ ಹೂದೋಟ.

ಆ ತೋಟದಲ್ಲಿ ಒಂದು ಮೇಕೆ.

ಅದರಲ್ಲಿಯೂ ಹೆಣ್ಣು ಮೇಕೆ. ಮೈಕೈ ತುಂಬಿಕೊಂಡು ತುಂಬಾ ಆಕರ್ಷಕವಾಗಿತ್ತು.

ಹೆಸರು ಸೋಮಾಲಿಯಾ.

ಸೋಮಾಲಿಯಾ ಜಗದೇಕ ಸುಂದರ ಮೇಕೆ ಎಂಬ ಅತಿ ಪ್ರಶಸ್ತವಾದ ಪುರಸ್ಕಾರಕ್ಕೆ ಭಾಜನಳಾಗಿದ್ದಳು. ವ್ಯಾಘ್ರ ರಾಜನಿಂದ ಫಲಪುಷ್ಪಾದಿ ಭರಿತ ಪರ್ಣ ಕಿರೀಟವನ್ನು ಬಹುಮಾನವಾಗಿ ಸ್ವೀಕರಿಸಿದ್ದಳು. ಅಂಥಾ ಅದ್ಭುತ ಮೇಕೆ ಅವಳು.

ಆ ಹೆಣ್ಣಿಗೊಂದು ಗಂಡು.

ಹೆಸರು ದೇಸಿ. ಅವನು ಅಪ್ಪಟ ದೇಸಿ.

ಅವನ ಮೈಯೆಲ್ಲಾ ದೇಸೀಯತೆಯ ಘಮಘಮ. ಅವನ ವಯಸ್ಸಿಗೆ ತಕ್ಕಂತೆ ದಷ್ಟಪುಷ್ಟವಾದ ಮೈ. ಜಟ್ಟಿಯಂತೆ ಮಾಂಸಖಂಡಗಳು ಉಬ್ಬುತ್ತಿದ್ದ ಮೈ. ಅವನನ್ನು ನೋಡಿದವರನ್ನು ಮರುಳುಮಾಡುತ್ತಿದ್ದಂತಹ ಮೈ. ತನ್ನ ದೇಶದ ಮೇಕೆಗಳನ್ನಲ್ಲದೆ ಬೇರೆ ದೇಶಗಳ ಮೇಕೆಗಳನ್ನು ಕಣ್ಣೆತ್ತಿಯೂ ನೋಡುವುದಿಲ್ಲವೆಂಬ ಭೀಷಣ ಪ್ರತಿಜ್ಞೆಯನ್ನು ಮಾಡಿದ್ದ ಈ ದೇಸಿ.

ವ್ಯಾಮೋಹವು ಹುಟ್ಟುವಾಗ ನಮ್ಮನ್ನು ಕೇಳಿ ಹುಟ್ಟುವುದಿಲ್ಲ. ದೇಸಿ, ಪರದೇಸಿಗಳ ನಡುವಿನ ವ್ಯತ್ಯಾಸಗಳು ತಿಳಿಯುವುದಿಲ್ಲ. ವಿಧಿಯ ಲೀಲೆ. ದೇಸಿಯ ಕಣ್ಣು ಸೋಮಾಲಿಯಾಳ ಮೈಕಟ್ಟಿನ ಮೇಲೆ ಬಿತ್ತು. ತಕ್ಷಣ ಹೃದಯ ತುಂಬಿಬಂದಿತು. 'ತಡೆಯ ಲಾರದ ಮೋಹವಾಯಿತೇ' ಎಂದು ಹಾಡುವ ಮನಸ್ಸಾಯಿತು. ಒಂದು ವಿಧವಾದ ಮಾನಸಿಕ ತುಮುಲ ಶುರುವಾಯಿತು. ಪಾಪ ! ದೇಸಿ. ದೇಸಿಯನ್ನು ನೋಡಿದ ಸೋಮಾಲಿಯಾಳ ಸ್ಥಿತಿಯೂ ಇದಕ್ಕಿಂತಲೂ ಬೇರೆಯಾಗಿರಲಿಲ್ಲ.

ಹೀಗೆ ಆ ಮೇಕೆ ಜೋಡಿಯ ನಡುವೆ ಬಹಳ ಕಾಲದಿಂದಲೂ ರಹಸ್ಯ ಪ್ರೇಮಲೀಲೆಗಳು ನಡೆಯುತ್ತಲೇ ಇದ್ದವು.

ಒಂದು ತಣ್ಣನೆಯ ರಾತ್ರಿ.

ಒಂದು ಬೆಚ್ಚಗಿನ ಭಾವತೀವ್ರತೆ.

ಒಂದು ಹತ್ತಿರದ ದೂರ.

ಒಂದು ದೂರದ ಹತ್ತಿರ.

ದೇಸಿಯ ಕಣ್ಣುಗಳಲ್ಲಿ ತನ್ನ ನೋಟವನ್ನು ನೆಟ್ಟು ನೋಡುತ್ತಿದ್ದ ಸೋಮಾಲಿಯಾಳ ಮುಖದಲ್ಲಿ ಆರಾಧನಾ ಭಾವ. ಆ ಭಾವ ಪರವಶತೆಯಲ್ಲಿಯೇ ಸೋಮಾಲಿಯಾ ಮಾತನಾಡಿದಳು: ''ಈ ಜೀವನ ನಶ್ವರ. ಸೌಂದರ್ಯವೇ ಶಾಶ್ವತ. ಈ ನಶ್ವರ ಜಗತ್ತಿಗೆ ನಿನ್ನ ಸೌಂದರ್ಯ ಮೀಮಾಂಸೆಯ ಮೂಲಕ ಒಂದು ಶಾಶ್ವತತೆಯನ್ನು ಪ್ರಸಾದಿಸು ಪ್ರಿಯಾ !''

ದೇಸಿಯ ಬಾಯಿಂದ ಜೊಲ್ಲು ಸುರಿಯುತ್ತಿತ್ತು. ಅದು ಬುದ್ಧಿಜೀವಿ ಜೊಲ್ಲು.

ಜತೆಗೆ ಒಂದು ಪ್ರಶ್ನೆ, 'ಸೌಂದರ್ಯ ಎಂದರೇನು ?'

ಸೋಮಾಲಿಯಾ ಉತ್ತರಿಸಿದಳು, ''ಸೌಂದರ್ಯ ಎಂದರೆ ಹಸಿವು. ಸೌಂದರ್ಯ ಎಂದರೆ ನೀರಡಿಕೆ. ಸೌಂದರ್ಯ ಎಂದರೆ ಅತ್ಯಂತ ಮನಮೋಹಕ ಭಯಾನಕ ದೃಶ್ಯ.''

ದೇಸಿಯ 'ಉಹು' ಸೋಮಾಲಿಯಾಳ ಭಾವ ಪ್ರವಾಹವನ್ನು ನಿಲ್ಲಿಸಿತು. ಆಗ ಪುರುಷಾಹಂಕಾರ ಹಾಗೂ ಸ್ತ್ರೀವಾದಿ ಮಾನವತಾವಾದಗಳು ತುಂಬಿದ ಗತ್ತಿನಿಂದ ದೇಸಿ ಮಾತನಾಡತೊಡಗಿದ.

''ಸೌಂದರ್ಯ ಎಂದರೆ ಶ್ವೇತ ಭವನ. ಸೌಂದರ್ಯ ಎಂದರೆ ಥೇಮ್ಸ್ ನದಿಯ ದಂಡೆಯ ಮೇಲೆ ಹೆಪ್ಪುಗಟ್ಟಿದ ಒಂದು ಅಲೆ. ಬರ್ಲಿನ್ ಗೋಡೆಯ ಶಿಥಿಲಗಳಡಿಯಲ್ಲಿ ಹೂತುಹೋದ ಅರ್ಥಂಬರ್ಥ ಒಣಗಿದ ಬೆರಣಿ. ಕ್ರೆಮ್ಲಿನ್ ರಾಜಸೌಧದಲ್ಲಿ ಬಾಡಿಗೆಗೆ ಸಿಗುವ ಮಂಚ. ಸೌಂದರ್ಯವೆಂದರೆ ರಾಮಮಂದಿರದ ಸುತ್ತಲಿನ ಗೋಡೆಯ ಆಚೆಗಿನ ಮುರಿಯದ ಇಟ್ಟಿಗೆ. ತಿಯಾನ್ಮನ್ ಚೌಕದ ಹತ್ತಿರ ಮಾರಾಟವಾಗುವ ಕಳ್ಳೆಪುರಿ. ಸೌಂದರ್ಯವೆಂದರೆ ಒಂದು ಎನ್.ಜಿ.ಓ. ಸಿದ್ಧಪಡಿಸಿದ ವರದಿ. ಎಲ್ಲಕ್ಕಿಂತಲೂ ಮಿಗಿಲಾಗಿ, ಸೌಂದರ್ಯವೆಂದರೆ ಬಡತನದ ನಿರ್ಮೂಲನೆಯ ಬಗ್ಗೆ ಪಂಚತಾರಾ ಹೋಟೇಲಿನ ಎ.ಸಿ. ಸಭಾಂಗಣದಲ್ಲಿ ರಹಸ್ಯವಾಗಿ ನಡೆಯುವ ವಿಚಾರಸಂಕಿರಣ.''

ಇಷ್ಟು ಹೊತ್ತು ಸೋಮಾಲಿಯಾ ಮೇಕೆಯ ದೈನ್ಯತೆ ತುಂಬಿದ ಕಣ್ಣುಗಳು ಬೇರೆಲ್ಲೋ ನೆಟ್ಟಿದ್ದವು. ಆ ನೋಟದ ದೀನ ಪ್ರಖರತೆಯಿಂದಾಗಿ ದಿಗಂತದ ರೇಖೆ ಸೀಳಿತು. ಸ್ವಲ್ಪ ಹೊತ್ತಿನ ನಂತರ ಈ ಜಗತ್ತಿಗೆ ಮರಳಿದ ಸೋಮಾಲಿಯಾ, ''ಪ್ರಿಯಾ, ದೇಸಿ ! ಅತಿಯಾದ ಆರ್ಥಿಕ ಗುಲಾಮಗಿರಿ ನಿನ್ನಿಂದ ಈ ಮಾತುಗಳನ್ನು ಹೇಳಿಸುತ್ತಿದೆ. ನನಗೆ ಗೊತ್ತು. ಬಾ, ಹತ್ತಿರ ಬಾ'' ಎಂದಳು.

ದೇಸಿ ಸೋಮಾಲಿಯಾಳ ಮೈಗೆ ಮೈ ಸೋಕಿಸಿ ನಿಂತ.

ಸೋಮಾಲಿಯಾಳ ಬಾಯಿಂದ ಪ್ರವಾಹ. ಜಲಪ್ರಳಯವನ್ನಾದರೂ ತಡೆಯಬಹುದೇನೋ, ಆದರೆ ಆ ಲಾಲಾಜಲ ಪ್ರಳಯವನ್ನು ತಡೆಯುವುದು ಆ ಹರಿಹರ ಬ್ರಹ್ಮಾದಿಗಳಿಗೂ ಸಾಧ್ಯವಾಗದ ಮಾತು. ಆದರೂ ಕಷ್ಟಪಟ್ಟು ತನ್ನನ್ನು ತಾನು ಹಿಡಿತಕ್ಕೆ ತಂದುಕೊಂಡಳು ಸೋಮಾಲಿಯಾ. ತಾನು ಹಸಿವಿನಿಂದ ಕಲಿತ ಪಾಠಗಳನ್ನೆಲ್ಲಾ ಬಳಸಿ ಒಂದು ಗಂಭೀರ ಮಂದ ಹಾಸವನ್ನು ಚೆಲ್ಲಿದಳು.

ದೇಸಿಯ ದೇಹದೊಳಗಿನ ಸ್ನಾಯುಗಳು ಬಿಗಿಗೊಳ್ಳಲಾರಂಭಿಸಿದವು. ಮೈಯೊಳಗೆ ವ್ಯಾಮೋಹ

ಉಕ್ಕಿ ಉರಿಯುತ್ತಿತ್ತು. ಆದರೂ ದೇಹ ಮೋಹಗಳಿಗೆ ಅಹಂ ಅಡ್ಡಬಂದು ಸೋಹಂ ಅನ್ನುತ್ತಿತ್ತು.

''ಸೌಂದರ್ಯವೆಂದರೆ ಹಸಿವಿನಿಂದ ಚೀರಾಡುವ ಕರುಳು. ಸೌಂದರ್ಯವೆಂದರೆ ಎಳೆದು ಹಾಕುವವರಿಲ್ಲದೆ ನಡುಬೀದಿಯಲ್ಲಿ ಅನಾಥವಾಗಿ ಬಿದ್ದು ಕೊಳೆತು ನಾರುವ ಹೆಣ. ಸೌಂದರ್ಯವೆಂದರೆ...'' ಇನ್ನೂ ಏನೇನೋ ಹೇಳ ಹೊರಟಿದ್ದಳು ಸೋಮಾಲಿಯಾ.

ಅಷ್ಟರಲ್ಲಿ ದೇಸಿಯ ಬಾಯಿಂದ ''ನಿಲ್ಲಿಸು'' ಎಂಬ ಉದ್ವಿಗ್ನ ಭರಿತ ಉದ್ಗಾರವೊಂದು ಹೊರಬಂದಿತು.

''ಸೌಂದರ್ಯವೆಂದರೆ ಜಾತಿ. ಸೌಂದರ್ಯವೆಂದರೆ ಧರ್ಮ. ಸೌಂದರ್ಯವೆಂದರೆ ಜಾತಿ, ಧರ್ಮಗಳನ್ನೇ ಉಸಿರಾಡುತ್ತಾ, ಪ್ರಗತಿ ಎಂದು ಒಂದು ಬಾರಿ, ಕ್ರಾಂತಿ ಎಂದು ಒಂದು ಬಾರಿ ಬಡಬಡಿಸುವುದು. ಕೆಂಪು, ಹಳದಿಗಳ ಮುಂದಾಳುತ್ವದಲ್ಲಿ ಏಳು ಬಣ್ಣಗಳನ್ನು ಒಂದುಮಾಡಿ ಹಸಿರು ಕನಸುಗಳನ್ನು ಬಿಕರಿ ಮಾಡುವುದು. ಪ್ರಾಣಿಗಳ ಜಡತ್ವವನ್ನೇ ಚೈತನ್ಯವೆಂದು ಬಿಂಬಿಸುವ ವಕ್ರಸೂತ್ರವೊಂದನ್ನು ತೇಲಿಬಿಟ್ಟು ಆ ಸುಳ್ಳನ್ನೇ ಗಟ್ಟಿಯಾಗಿ ನೆಲೆ ನಿಲ್ಲುವಂತೆ ಮಾಡುವುದು. ಅದು ಮಾಡುವುದು,... ಇದು ಮಾಡುವುದು... ಮಾಡುವುದು... ಡುವುದು... ವುದು...ದು... ಉ.

ದೇಸಿಯ ಈ ಆವೇಶ ಭರಿತ ಆಣಿ ಮುತ್ತುಗಳನ್ನು ಕೇಳಿಸಿಕೊಂಡ ಸೋಮಾಲಿಯಾ ಹೇಳಿದಳು, ತಣ್ಣಗೆ , ''ಅಲ್ಲ ಅನ್ನಿಸುತ್ತೆ, ಪ್ರಿಯಾ !''

''ಹೌದು ಅಂತ ನನಗನ್ನಿಸುತ್ತೆ, ಪ್ರಾಣಸಖಿ !'' ದೇಸಿಯ ಕಂಠದಲ್ಲಿ ಆತ್ಮವಿಶ್ವಾಸ ತುಂಬಿತ್ತು.

''ನಾನು ನಿನ್ನನ್ನು ಪ್ರೀತಿಸುತ್ತೇನೆ.''

''ನಾನು ನಿನ್ನನ್ನು ಪ್ರೀತಿಸುತ್ತಾ, ನಿನ್ನ ಪ್ರೀತಿಯನ್ನು ಅನುಮಾನದಿಂದ ನೋಡುತ್ತೇನೆ.'' ದೇಸಿ ಉವಾಚ.

''ನಿನ್ನ ಮನದಾಳದ ಮಾತು ಅದೇನು ಹೇಳು, ಪ್ರಾಣ ಕಾಂತಾ !'', ಸೋಮಾಲಿಯಾ ಬೇಡಿದಳು.

''ನಿನ್ನ ಸೌಂದರ್ಯದ ಗುಟ್ಟೇನು ?'' ದೇಸಿ ಪ್ರಶ್ನಿಸಿದ.

''ನಾನು ಹೇಳಲಾರೆ.''

''ಹಾಗಾದರೆ ನಾನೂ ಹೇಳಲಾರೆ.''

''ಅಷ್ಟೇನಾ ಹಾಗಾದರೆ ?'', ಸೋಮಾಲಿಯಾ ಮುದ್ದುಮುದ್ದಾಗಿ ಕೇಳಿದಳು.

''ಅಷ್ಟಲ್ಲದೆ ಮತ್ತಿನ್ನೇನು ?'', ದೇಸಿ ಅಷ್ಟೇ ಮುದ್ದುಮುದ್ದಾಗಿ ಉತ್ತರಿಸಿದ.

''ಹೋಗೋ ಗೂಷ್ಲೂ!'' ಹಠಾತ್ತನೆ ಕಿರುಚಿದ ಸೋಮಾಲಿಯಾ ಪಶ್ಚಿಮದ ಕಡೆಗೆ ಹೊರಟಳು.

''ಹೋಗೇ ಗುಗ್ಗೂ!'' ಎಂದ ದೇಸಿ ಪೂರ್ವ ದಿಕ್ಕಿಗೆ ಮುಖ ಮಾಡಿದ.

ಎಲ್ಲಿಂದಲೋ ಗಾಳಿಯಲ್ಲಿ ಹಾಡು ತೇಲಿಬರುತ್ತಿತ್ತು : ''ಮತ್ತದೇ ಸಂಜೆ... ಅದೇ ಬೇಸರ... ಅದೇ ಏಕಾಂತ.''

ಹೃದಯಗಳಲ್ಲಿ ಉತ್ಕಟವಾದ ಪ್ರೀತಿಯನ್ನು ತುಂಬಿಕೊಂಡಿದ್ದ ಆ ಮೇಕೆ ಜೋಡಿ ಹೀಗೆ ಬೇರೆಯಾಗುವುದರ ಹಿಂದೆ ಒಂದು ಉಪಕಥೆ ಇದೆ. ಅದನ್ನು ಹೇಳದಿದ್ದರೆ ಈ ದೊಡ್ಡ ಕಥೆಯನ್ನ ಪೂರ್ಣ ಹೇಳಿದಂತೆಯೇ ಅಲ್ಲ.

*   *   *

ಕೆಲ ಕಾಲದ ಹಿಂದೆ...

ಮೊಲದ ಜಾಣತನಕ್ಕೆ ಬಲಿಯಾದ ಮೃಗರಾಜ ಬಾವಿಯಲ್ಲಿ ಬಿದ್ದು ಸತ್ತ ನಂತರ, ರಾಜ್ಯಾಧಿಕಾರ ಹಲವು ಪಂಜಗಳನ್ನ ದಾಟಿ ಕೊನೆಗೆ ಹುಲಿಯೇ ಕಾಡಿನ ರಾಜನೆಂದು ಘೋಷಿಸಲಾಯಿತು. ಕಾಡಿನ ಸುದ್ದಿ ಮಾಧ್ಯಮಗಳು ಈ ವಿಷಯವನ್ನು ಮತ್ತೆ ಮತ್ತೆ ಪ್ರಸಾರ ಮಾಡಿದವು. ಇದನ್ನು ನೋಡಿದ, ಕೇಳಿದ ಮೇಕೆಗಳಿಗೆ ಎದೆ ಸೀಳಿದಂತಾಯಿತು. ಮೇಕೆಗಳ ಕುರಿತಾದ ತನ್ನ ನೀತಿಯನ್ನು ರಾಜಾ ಹುಲಿರಾಯ ಸ್ಪಷ್ಟವಾಗಿ ಪ್ರಕಟಿಸಬೇಕೆಂಬ ಹಕ್ಕೊತ್ತಾಯವನ್ನು ಮಂಡಿಸಿದವು.

ತಮ್ಮ ಚಳುವಳಿಯ ಅಂಗವಾಗಿ ಮೇಕೆಗಳು ಕಾಡಿನ ಸ್ವಾತಂತ್ರ್ಯ ಉದ್ಯಾನವನದಲ್ಲಿ ಬಹಿರಂಗ ಸಭೆಯೊಂದನ್ನು ನಡೆಸಿ, ನಂತರ ಸುತ್ತುಮುತ್ತಲಿನ ಮರಗಳ ಎಲೆಗಳನ್ನೆಲ್ಲಾ ಮೇಯ್ದುಬಿಡುವ ಪ್ರತಿಭಟನಾ ಕಾರ್ಯಕ್ರಮವನ್ನು ಹಮ್ಮಿಕೊಂಡವು. ಅದಕ್ಕೆ ಮುಂಚೆ ಕೆಲವು ದಿನಗಳ ಮಟ್ಟಿಗೆ ಉಪಹಾರ ಸತ್ಯಾಗ್ರಹವನ್ನು ನಡೆಸಿದವು. ಕೊನೆಗೂ ರಾಜಾ ಹುಲಿರಾಯ ಇಳಿದು ಬರಲೇಬೇಕಾಯಿತು.

''ಇನ್ನು ಮುಂದೆ ನಾವು ಮೇಕೆಗಳನ್ನಾಗಲಿ, ಬೇರೆ ಯಾವುದೇ ಪ್ರಾಣಿಗಳನ್ನಾಗಲಿ ತಿನ್ನುವುದಿಲ್ಲ, ಕೇವಲ ವಿಶ್ವಬ್ಯಾಂಕಿನ ಹಣವನ್ನು ಮಾತ್ರ ತಿನ್ನುತ್ತೇವೆ'', ಎಂದು ಘೋಷಣೆ ಮಾಡಿದ ಹುಲಿರಾಯ ಇನ್ನೂ ಒಂದು ಬಹುಮುಖ್ಯವಾದ ಪ್ರಕಟಣೆಯನ್ನೂ ಹೊರಡಿಸಿದ : ''ಇಂದಿನಿಂದ ಹುಲಿಗಳು ಮತ್ತು ಮೇಕೆಗಳು ಸಂಪೂರ್ಣವಾಗಿ ಭಯ, ಸಂಶಯರಹಿತ ವಾತಾವರಣದಲ್ಲಿ ಸಂಚರಿಸುತ್ತಾ ಶಾಂತಿಯುತ ಸಹಜೀವನವೆಂದರೆ ಏನು ಎಂಬುದನ್ನು ಜಗತ್ತಿಗೇ ತೋರಿಸಲಿದ್ದಾರೆ.'' ಅವನ ಉತ್ಸಾಹಕ್ಕೆ ಮೇರೆಯೇ ಇರಲಿಲ್ಲ. ಮೇಕೆಗಳಿಗಾಗಿ ಹಲವು ಸಾಂಸ್ಕೃತಿಕ, ಸಾಮಾಜಿಕ, ಆಧ್ಯಾತ್ಮಿಕ ಕಾರ್ಯಕ್ರಮಗಳನ್ನು ಆಯೋಜಿಸುವಂತೆ ತನ್ನ ಅಧಿಕಾರಿಗಳಿಗೆ ಆದೇಶ ನೀಡಿದ. ತಕ್ಷಣವೇ ಕಾರ್ಯಪ್ರವೃತ್ತರಾದ ಅಧಿಕಾರಿಗಳು ಅಂಥ ಹಲವು ಕಾರ್ಯಕ್ರಮಗಳನ್ನು ನಡೆಸಿಯೇ ಬಿಟ್ಟರು. ಅವುಗಳಲ್ಲಿ ಒಂದು ಹಾಗೂ ಬಹು ಮುಖ್ಯವಾದದ್ದು ಸೌಂದರ್ಯ ಸ್ಪರ್ಧೆ.

ಜಗತ್ತಿನ ಮೂಲೆಮೂಲೆಗಳಿಂದ ಸುಂದರಿ

## ಒಂದು ಕವಿತೆಯ ಹಾಡು



ದೇಹದ ದಣಿವು ಆರಿಲ್ಲ ನಿದ್ದೆ ಇನ್ನೂ ಸಾಕಾಗಿಲ್ಲ
ಆದರೂ ಸೂರ್ಯ ಮೇಲೇರಿದ್ದಾನೆ ಏನೂ ತಿಳಿಯದವನಂತೆ
ತೆರೆಯದ ಕಣ್ಣು ತೆರೆಯುತ್ತ ನಿಧಾನವಾಗಿ ಜೀವಂತವಾಗುತ್ತ
ಅಂಗಳಕ್ಕೆ ಬಂದರೆ
ಅಲ್ಲಿ ಮಾವಿನಮರಕ್ಕೆ ಮೈಯೆಲ್ಲಾ ಚೈತ್ರದ ಚಿಗುರು
ಆ ಚಿಗುರಿನ ಒಳಗಿನಿಂದಲೇ ನಸುನಗುತ್ತ ಕೇಳಿತೊಂದು
ಪುಟ್ಟ ಕವಿತೆ
ಬರಲೇ ಈಗ ಬಳಿಗೆ ನಿನ್ನ ಒಳಗೆ ಎಂದು.
ಬೇಡ ಈಗ ಬೇಡ
ಮುಂಜಾನೆಯ ಗಡಿಬಿಡಿ ಹತ್ತಾರು ಯೋಚನೆಗಳು
ತಲೆ ತುಂಬ ನಿನ್ನೆಯ ಅರ್ಧ ಮುಗಿದ ಕೆಲಸದ ತಂಗಳು

ಮಧ್ಯಾಹ್ನ ಆಸ್ಪತ್ರೆಯಲ್ಲಿ ಕಾಯುತ್ತಿದ್ದಾನೆ
ಮಗಳನ್ನು ಹೆರಿಗೆಗೆ ಸೇರಿಸಿದ ಅಪ್ಪ
ಅಸಹಾಯಕತೆಯ ಮುದ್ದೆಯಾಗಿ
ಕಣ್ಣೆರಡು ಭಯ ಆತಂಕದ ಆಳ ಬಾವಿಗಳು
ಮುಖದ ತುಂಬ ಬಡತನದ ಕಾರ್ಮೋಡ
ನಡುವೆಯೇ ಮಿಂಚಿ ಕೇಳಿತು
ಆ ಪುಟ್ಟ ಕವಿತೆ
ನಾ ಬರಲೆ ಸನಿಹ ಎಂದು.
ಬೇಡ ಈಗ ಬೇಡ
ನೋಡಲ್ಲಿ ಹೊರಗೆ ಇನ್ನೂ ಇಪ್ಪತ್ತು ಗರ್ಭಿಣಿಯರು
ಕಾಯುತ್ತಿದ್ದಾರೆ ಗೊಣಗುತ್ತ ತಮ್ಮ ತಪಾಸಣೆಗಾಗಿ

ಸಂಜೆ ಆರಕ್ಕೆ ಹದಿನಾರು ತಾಸು
ಬೇನೆ ತಿಂದು
ಎಲ್ಲ ದೇವರನ್ನು ಬೈದು ಚೀರಾಡಿ
ಕೊನೆಗೂ ಹಡೆದು ಪಾರಾದಳು ಸಂಗವ್ವ
ಮಗುವನ್ನು ಹುರಿ ಕತ್ತರಿಸುವ ಮೊದಲೇ
ಅವಳೆದೆಯ ಮೇಲೆ ಹಾಕಿದಾಗ
ದಣಿದಣಿದು ಸೋತು ಬತ್ತಿದ ಕೆರೆಯಾಗಿದ್ದ
ಅವಳ ಮುಖದಲ್ಲೂ ಕ್ಷಣದಲ್ಲೇ ಅರಳಿತು
ಸ್ವರ್ಗದ ನಗು
ಕೂಡಲೆ ಆ ನಗುವಿನ ಹಿಂದಿನಿಂದ ಇಣುಕಿ
ಕೇಳಿತು ಆ ಪುಟ್ಟ ಕವಿತೆ
ಬರಲೆ ನಾ ಈಗ ಸ್ವಲ್ಪ ಒಳಗೆ ಎಂದು.
ಬೇಡ ಈಗ ಬೇಡ
ಊಟ ಆಗಿಲ್ಲ ಇನ್ನೂ ಕೆಲಸ ಮುಗಿದಿಲ್ಲ

ಡಾ|| ಸಂಜೀವ ಕುಲಕರ್ಣಿ
'ನಗೆ ಮಲ್ಲಿಗೆ', ನಂ. ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ ಧಾರವಾಡ ಜಿಲ್ಲೆ - ೫೮೦ ೦೦೭

ಮೇಕೆಗಳು ವಿಶ್ವಸುಂದರಿ ಮೇಕೆ ಸ್ಪರ್ಧೆಯಲ್ಲಿ ಭಾಗವಹಿಸಲು ಬಂದು ಕಾಡಿನಲ್ಲಿ ಬೀಡುಬಿಟ್ಟವು. ಅವುಗಳಲ್ಲಿ ಒಂದಾದ ಸೋಮಾಲಿಯಾ ಮೇಕೆಯ ಸೌಂದರ್ಯಕ್ಕೆ ಕಾಡಿಗೆ ಕಾಡೇ ಮಂತ್ರಮುಗ್ಧವಾಯಿತು. ಅಲ್ಲಿನ ಎಲ್ಲಾ ಪ್ರಾಣಿಗಳೂ ಪ್ರಜ್ಞೆ ತಪ್ಪಿದವು.

ಮೊದಲು ಪ್ರಜ್ಞೆ ಬಂದಿದ್ದು ದೇಸಿಗೆ. ನಂತರದ ಬೆಳವಣಿಗೆಳೆಲ್ಲಾ ಬೇಗಬೇಗ, ಕಣ್ಣುಮುಚ್ಚಿ ತೆಗೆಯುವುದ ರೊಳಗಾಗಿ ನಡೆದುಹೋದವು. ಸ್ಪರ್ಧೆ ನಡೆದೇ ಹೋಯಿತು, ಸೋಮಾಲಿಯಾ ವಿಶ್ವಸುಂದರಿಯೆಂದು ಘೋಷಿತಳಾಗಿಯೇ ಬಿಟ್ಟಳು. ದೇಸಿ ಸೋಮಾಲಿಯಾಳಿಗೆ ಮನಸೋತೇ ಬಿಟ್ಟ.

ರಾಜಾ ಹುಲಿರಾಯನ ಅಧಿಕೃತ ನಿವಾಸದಲ್ಲಿ ಸೋಮಾಲಿಯಾಳಿಗಾಗಿಯೇ ವಿಶೇಷವಾದ ಒಂದು ಔತಣ ಕೂಟವನ್ನು ಏರ್ಪಡಿಸಲಾಯಿತು.

ಸೋಮಾಲಿಯಾ ಭೋಜನಶಾಲೆಗೆ ಆಗಮಿಸಿದಳು.

ಹುಲಿಗಳೆಲ್ಲವೂ ಸೋಮಾಲಿಯಾಳಿಗೆ ಸಾದರ ಸ್ವಾಗತವನ್ನು ಕೋರಲು ಕಾತುರದಿಂದ ಕಾದಿದ್ದವು.

ಸೋಮಾಲಿಯಾ ಅಲ್ಲಿದ್ದ ದೊಡ್ಡ ಮೇಜಿನ ಕಡೆ ನೋಡಿದಳು. ಆಶ್ಚರ್ಯ ಚಕಿತಳಾಗಿ ಕೇಳಿದಳು :

''ಇದೇನಿದು ! ಭಕ್ಷ್ಯಗಳೆಲ್ಲಿ? ಇಲ್ಲಿ ಏನೂ ಇಲ್ಲವಲ್ಲ ?''

''ಭಕ್ಷ್ಯವೇ ! ನೀನೇ ಇದ್ದೀಯಲ್ಲ!'' ಊಟದ ಮನೆಯ ಬಾಗಿಲನ್ನು ಮುಚ್ಚುತ್ತ ಹೇಳಿದವು ಹುಲಿಗಳು. ಸೋಮಾಲಿಯಾಳಿಗೆ ತಲೆಯ ಮೇಲೆ ಸಿಡಿಲು ಬಿದ್ದ ಭಾವನೆ.

''ಏನು ? ನಾನೇ ನಿಮಗೆ ಆಹಾರವಾ !'' ಭಯ, ಆಶ್ಚರ್ಯ, ಅಳು ಎಲ್ಲವೂ ಇತ್ತು ಸೋಮಲಿಯಾಳ ದನಿಯಲ್ಲಿ, ಮೈಯೆಲ್ಲಾ ಬೆವರುತ್ತಿತ್ತು.

''ನಿನ್ನನ್ನು ತಿನ್ನದ ಬದುಕೂ ಒಂದು ಬದುಕೇ!'', ರಾಜಾ ಹುಲಿರಾಯ ನಾಲಿಗೆ ಚಪ್ಪರಿಸುತ್ತಾ ಸೋಮಾಲಿಯಾಳ ಕಡೆಗೇ ಹಸಿವು ತುಂಬಿದ ಕಣ್ಣುಗಳನ್ನು ನೆಟ್ಟಿದ್ದ.

''ಆದರೆ... ಮೇಕೆಗಳನ್ನು ತಿನ್ನುವುದಿಲ್ಲವೆಂದು ನೀವು ಪ್ರಕಟಿಸಿದ್ದೀರಲ್ಲವೇ ! ಅದೇ ನಿಮ್ಮ ನೀತಿಯಲ್ಲವೇ !''

''ನಾವು ಎಂದಿಗೂ ಹೇಳುವುದನ್ನು ಮಾಡುವುದಿಲ್ಲ, ಮಾಡುವುದನ್ನು ಹೇಳುವುದಿಲ್ಲ, ನಾವು ಆಳುವವರು'', ಎಲ್ಲಾ ಹುಲಿಗಳು ಒಟ್ಟಾಗಿ ಹೇಳಿದವು, ಗಹಗಹಿಸಿ ನಗುತ್ತಾ.

ಸೋಮಾಲಿಯಾಳ ಪ್ರಾಣಪಕ್ಷಿ ಇನ್ನೇನು ಹಾರಿಹೋಗುವುದರಲ್ಲಿತ್ತು.

''ನಮ್ಮ ಈ ಔತಣಕೂಟ ನಿನ್ನ ಕೊನೆಯ ಆಸೆಯಿಂದ ಶುರುವಾಗಿ ನಮ್ಮ ಮೊದಲ ಆಸೆಯೊಂದಿಗೆ ಮುಗಿಯುತ್ತೆ... ಬಾ ಊಟದ ಮೇಜಿನ ಮೇಲೆ ಹತ್ತಿ ಅದರ ಮಧ್ಯದಲ್ಲಿ ಕುಳಿತುಕೋ.'' ಹುಲಿರಾಯನ ಆದೇಶ ಪೂರ್ವಕ ಆಹ್ವಾನ.

ಹೌದು, ಪ್ರಭುಗಳ ಲೀಲೆಗಳೇ ಹಾಗೆ. ಸಾಮಾನ್ಯ ಜನರಿಗೆ ಅವು ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಈ ವಿಷಯವನ್ನರ್ಥಮಾಡಿಕೊಂಡಿದ್ದ ಸೋಮಾಲಿಯಾಳ ಮುಖದ ಮೇಲೆ ವಿಷಾದದ ಛಾಯೆ ತುಂಬಿದ ಕಿರು ನಗೆಯೊಂದು ಹೀಗೆ ಕಾಣಿಸಿಕೊಂಡು ಹಾಗೆ ಮಾಯವಾಯಿತು.

''ಔತಣಕ್ಕೆ ಕರೆದು ನನಗೆ ನೀವೆಲ್ಲಾ ಒಂದು ಒಳ್ಳೇ ಷಾಕ್ ಕೊಟ್ಟಿದ್ದೀರಿ. ಸರಿಯೇ ! ಈಗ ನಾನೂ ನಿಮಗೆ ಒಂದು ಷಾಕ್ ಕೊಡದೇ ಹೋದರೆ ಏನು ಚೆನ್ನ ? ತಗೊಳಿ. ಏನೋ, ಸಣ್ಣ ಮೇಕೆ ಸೇವೆ'', ಅಂದಳು.

''ನಮಗೇ ನೀನು ಷಾಕ್ ಕೊಡೋದೇ ! ಅಹಹಹಾ...'' ಎಲ್ಲಾ ಹುಲಿಗಳು ಒಂದೇ ಬಾರಿಗೆ ದೊಡ್ಡದಾಗಿ ನಕ್ಕವು.

''ನಾನೂ ಹುಲಿಯೇ. ನಾನು ಮೇಕೆ ಅಲ್ಲ''

ಹುಲಿಗಳಿಗೆ ನಿಜವಾಗಿಯೂ ಷಾಕ್ ಅಂದರೇನು ಎನ್ನುವುದು ಈಗ ಅನುಭವಕ್ಕೆ ಬಂತು.

''ಹೌದು. ನಾನು ಮೇಕೆ ಚರ್ಮದ ಹುಲಿ. ಹಸಿವಿನ ನರಳಾಟ ತುಂಬಿದ ಸೋಮಾಲಿಯಾದಲ್ಲಿ ಹಸಿವಿನ ಜತೆ ಸೆಣಸಾಡಿ, ಸೆಣಸಾಡಿ ಸುಸ್ತಾಗಿರುವ ಹುಲಿ... ಸಾವಿನ ದವಡೆಯಿಂದ ಪಾರಾಗಿಬಂದಿರುವ, ಕೃಶಿಸಿ, ಕೃಶಿಸಿ ಎಲುಬಿನ ಗೂಡಾಗಿರುವ, ಗೂಡಾಗಿ ಮೇಕೆಯಷ್ಟೇ ಸಣ್ಣಗಾಗಿರುವ ನಿಮ್ಮ ಜತೆಯ ಹುಲಿ. ನಿಮ್ಮಷ್ಟೇ ಮೆರೆದ ಹುಲಿ.'' ಈ ಮಾತುಗಳನ್ನು ಕೇಳುತ್ತಿದ್ದ ಹುಲಿಗಳ ಮುಖಗಳು ಬಿಳಿಚಿಕೊಂಡವು. ಅನುಮಾನ ತುಂಬಿದ ಅವುಗಳ ಕಣ್ಣುಗಳು ಇನ್ನೂ ದೊಡ್ಡದಾದವು.

''ಕೇವಲ ವರದಿಗಳನ್ನು ಮಾತ್ರ ನಂಬುವ ಆಳುವವರಿಗೆ ವಾಸ್ತವಗಳು ಹಿಡಿಸುವುದಿಲ್ಲ, ಆದರೆ ನಿಜ ಅನ್ನೋದು ಚರ್ಮದ ಹಾಗೆ. ಚರ್ಮ ಸುಲಿದರೆ ಮಾತ್ರ ಅರ್ಥವಾಗುವ ಒಂದು ನಗ್ನ ವಾಸ್ತವವನ್ನು ನಿಮ್ಮ ಮುಂದೆ ನಿಲ್ಲಿಸುತ್ತಿದ್ದೇನೆ ನೋಡಿ''.

ಹೀಗೆನ್ನುತ್ತಾ ಸೋಮಾಲಿಯಾ ತನ್ನ ಚರ್ಮವನ್ನು ತಾನೇ ಸುಲಿದುಕೊಂಡು ಆ ಎಲ್ಲ ಹುಲಿಗಳ ಮುಂದೆ ನಗ್ನಳಾಗಿ ನಿಂತಳು. ಆ ಭೀಭತ್ಸ ವಾಸ್ತವವನ್ನು ನೋಡಲಾರದೆ ಒಂದು ಹುಲಿಯ ಕಣ್ಣುಗಳು ಪಟೀರೆಂದು ಸಿಡಿದವು. ಎರಡು ಹುಲಿಗಳು ಕೂತಿದ್ದಲ್ಲಿಯೇ ವಾಂತಿ ಮಾಡಿಕೊಂಡವು. ಮೂರು ಹುಲಿಗಳು ಜೀವನ ವೆಂದರೇನೇ ವೈರಾಗ್ಯ ಹುಟ್ಟಿ ತಲೆ ತಲೆ ಚಚ್ಚಿಕೊಂಡವು. ಇನ್ನು ರಾಜಾ ಹುಲಿರಾಯನಂತೂ ಮೂರ್ಛೆ ಹೋದವನು ಎಷ್ಟು ಹೊತ್ತಾದರೂ ಏಳಲೇ ಇಲ್ಲ.

ಆ ದೃಶ್ಯವನ್ನು ಇನ್ನು ನೋಡಲಾರದ ಗಂಡು ಹುಲಿಗಳೆಲ್ಲವೂ ಸೋಮಾಲಿಯಾಳ ಮುಂದೆ ತಲೆಬಾಗಿ ನಿಂತವು. ಒಕ್ಕೊರಲಿನಿಂದ ಕೇಳಿಕೊಂಡವು, ಅಂಗಲಾಚಿ ಬೇಡಿಕೊಂಡವು, ''ದಯವಿಟ್ಟು ಆ ಮೇಕೆ ಚರ್ಮದಿಂದ ನಿನ್ನ ಮೈ ಮುಚ್ಚಿಕೋ.'' ಅವರ ಮಾತಿಗೆ ಮನ್ನಣೆ ಕೊಟ್ಟವಳಂತೆ ಸೋಮಾಲಿಯಾ ಮೇಕೆಯ ಚರ್ಮವನ್ನು ಸುಲಿದಷ್ಟೇ ವೇಗವಾಗಿ ಧರಿಸಿ ಮತ್ತೆ ತನ್ನ ಎಂದಿನ ಸೌಂದರ್ಯದ ಭವ್ಯತೆಯನ್ನು ಪ್ರದರ್ಶಿಸುತ್ತಾ ನಿಂತಳು.

ರಾಜಾ ಹುಲಿರಾಯನ ಮೂರ್ಛಾವಸ್ಥೆ ಕೊನೆಗೊಂಡ ಮೇಲೆ ತನ್ನ ಮಂತ್ರಿ ಮಂಡಲದ ತುರ್ತು ಸಭೆಯೊಂದನ್ನು ಕರೆದ. ಆ ಸಭೆಯಲ್ಲಿ ತಮಗೂ, ಸೋಮಾಲಿಯಾಳಿಗೂ ಒಪ್ಪಿಗೆಯಾಗುವ ಒಂದು ರಹಸ್ಯ ತೀರ್ಮಾನಕ್ಕೆ ಬರಲಾಯಿತು. ಅದರ ಸಾರಾಂಶ ಇದು : ತಕ್ಷಣವೇ ಸೋಮಾಲಿಯಾ ಒಂದು ಸೌಂದರ್ಯ ಮೀಮಾಂಸೆಯನ್ನು ರಚಿಸಿ ಕೊಡಬೇಕು. ಅದು ಎಷ್ಟು ಮನಮೋಹಕ ಕ್ರೂರ ಸಂಚಿನಿಂದ ತುಂಬಿರಬೇಕೆಂದರೆ, ಆ ಮೀಮಾಂಸೆಯನ್ನು ಕೇಳಿದ ಎಲ್ಲ ಮೇಕೆಗಳು ದಂಗಾಗಬೇಕು, ಅದನ್ನು ಮೆಚ್ಚಿ ಅಹುದಹುದೆನ್ನಬೇಕು. ಹುಲಿಗಳ ಆಳ್ವಿಕೆಯನ್ನು ಯದ್ವಾತದ್ವಾ ಹೊಗಳಬೇಕು. ನಿಧಾನವಾಗಿ ತಾವಾಗಿಯೇ ಬಂದು ಹುಲಿಗಳಿಗೆ ಆಹಾರವಾಗಬೇಕು. ಈ ಆಹಾರ ಉತ್ಪಾದನೆ ಮತ್ತು ಪೂರೈಕೆಗಾಗಿ ಸೋಮಾಲಿಯಾಗೆ ಬೇನಾಮಿ ಹೆಸರಿನಲ್ಲಿ ಮನೆಗಳು, ನಿವೇಶನಗಳು, ಜಮೀನು, ವಾಹನಗಳು, ಕೊನೆಗೆ ಈ ಎಲ್ಲ ಸಂಪತ್ತಿಗೂ ಭದ್ರತೆ ಸಿಗುತ್ತವೆ.

''ಈ ಕೆಲಸ ಮಾಡುವುದೆಂದರೆ ಕತ್ತಿಯಂಚಿನ ಮೇಲೆ ಕಸರತ್ತು ಮಾಡಿದಂತೆ'' ಅಂದಳು ಸೋಮಾಲಿಯಾ.

''ಅದೇನೋ ಸರಿಯೇ. ಆದರೆ ಅದೇನೂ ನೆಲ ಬಿಟ್ಟು ಮಾಡೋ ಕಸರತ್ತೇನೂ ಅಲ್ಲವಲ್ಲಾ!'', ಹುಲಿರಾಯ ಉತ್ತರಿಸಿದ.

''ಆದರೆ ನನ್ನದೊಂದು ಷರತ್ತು''

''ಏನದು ?''

''ಮೇಕೆಗಳ ನಂಬಿಕೆಯನ್ನು ಗಳಿಸಿಕೊಳ್ಳಬೇಕಾದರೆ ನಾನು ಸರ್ಕಾರಿ ವಿರೋಧಿ ಶಕ್ತಿಯಾಗಿ ನಟಿಸಬೇಕಾಗುತ್ತೆ. ಅದಕ್ಕೆ ನನಗೆ ಅವಕಾಶವಿರಬೇಕು.''

''ಅದಕ್ಕೇನು ! ಯಾವ ಅಡ್ಡಿಯೂ ಇಲ್ಲದೆ ನೀನು ನಮ್ಮ ಸರ್ಕಾರದ ವಿರುದ್ಧ ಟೀಕಾಪ್ರಹಾರ ಮಾಡಬಹುದು. ಚಳುವಳಿಗಳನ್ನು ನಡೆಸಬಹುದು. ಬಸ್ಸುಗಳನ್ನು ಸುಡಬಹುದು. ರಾಸ್ತಾ ರೋಕೋ, ರೈಲ್ ರೋಕೋಗಳನ್ನು ಮಾಡಬಹುದು. ಬೇಕಾದರೆ ಜೈಲ್ ಭರೋ ಸಹ. ನಿನ್ನ ಇಷ್ಟ. ನಮ್ಮ ಮನೆಗಳಿಗೆ ಬೆಂಕಿಯನ್ನು ಹಚ್ಚಬಹುದು. ನಿನಗೆ ಏನೂ ಆಗೋದಿಲ್ಲ. ಹೀಗೆ ಇಲ್ಲಿ ಬಂಧಿಸಿ ಹಾಗೆ ಅಲ್ಲಿ ಬಿಟ್ಟು ಬಿಡುತ್ತೇವೆ. ಆದರೆ ಒಂದು ಮಾತು ನೆನಪಿಟ್ಟುಕೋ. ನಿನ್ನ ಚಳುವಳಿ ಎಷ್ಟು ಜೋರಾಗಿರುತ್ತದೋ, ನಮಗೆ ಮೇಕೆಗಳ ಸರಬರಾಜೂ ಅಷ್ಟೇ ಜೋರಾಗಿರಬೇಕು.''

''ಅದಕ್ಕಂತೂ ಎಂದಿಗೂ ಸಂಚಕಾರ ಬರೋದಿಲ್ಲ ಬಿಡಿ.''

''ಸರಿ. ನಿನಗೆ ಒಳ್ಳೆಯದಾಗಲಿ. ಹೋಗಿ ಬಾ !'' ಎನ್ನುತ್ತ ಹುಲಿಗಳು ಸೋಮಾಲಿಯಾಳಿಗೆ ವಿದಾಯ ಹೇಳಿದವು. ಅವತ್ತಿನಿಂದ ಒಂದು ಅತಿ ವಿಶಿಷ್ಟ ಸೌಂದರ್ಯ ಮೀಮಾಂಸೆಯನ್ನು ಸೃಷ್ಟಿಸುವಲ್ಲಿ ಸೋಮಾಲಿಯಾ ಮುಳುಗಿಹೋದಳು. ಆ ಸಮಯದಲ್ಲಿಯೇ ಅವಳಿಗೆ ದೇಸಿಯ ಪರಿಚಯವಾಯಿತು. ಇದೇ ಸರಿಯಾದ ಅವಕಾಶವೆಂದು ಬಗೆದ ಸೋಮಾಲಿಯಾ ತನ್ನ ಹೊಸ ಸಿದ್ಧಾಂತವನ್ನು ದೇಸಿಯ ಮೇಲೆ ಪ್ರಯೋಗಿಸಲು ಹೊರಟಳು. ದೇಸಿ ಏನೂ ಕಡಿಮೆ ಕಿಲಾಡಿ ಅಲ್ಲ, ನಿರ್ಲಕ್ಷಿತ ಸಮುದಾಯಗಳ ಅಧ್ಯಯನ ನಡೆಸುವುದರಲ್ಲಿ ಎತ್ತಿದ ಕೈ; ಪ್ರಖ್ಯಾತ ಸ್ವಯಂಸೇವಾ ಸಂಸ್ಥೆಗಳೊಂದಿಗೆ ಸಂಬಂಧವಿತ್ತು; ಕ್ರಾಂತಿಕಾರಿ ಚಳುವಳಿಯ ಹಿನ್ನೆಲೆಯಿತ್ತು. ತಾನೇ ತಾನಾಗಿ ಸರ್ಕಾರಕ್ಕೆ ಶರಣಾದನಂತರ ಜೀವನದ ಎಲ್ಲ ಸವಲತ್ತುಗಳನ್ನೂ ಅನುಭವಿಸುತ್ತಾ, ರಿಯಲ್ ಎಸ್ಟೇಟು ಹಾಗೂ ಫೋರ್ತ್ ಎಸ್ಟೇಟು ಎರಡನ್ನೂ ನಿಭಾಯಿಸುತ್ತಾ ಒಳ್ಳೆಯ ಕಮಾಯಿಯನ್ನೇ ಮಾಡಿದ್ದ. ಜತೆಗೆ, ಮಾಧ್ಯಮಗಳಲ್ಲಿ ಪ್ರಖ್ಯಾತಿ ಗಳಿಸಿದ ರೀತಿಯಲ್ಲಿಯೇ ಮದ್ಯದ ವಿಷಯದಲ್ಲಿಯೂ ಪ್ರಖ್ಯಾತಿಯನ್ನು ಗಳಿಸಿದ್ದ. 'ಮದಿರೆಗಿಂತಲೂ ಮಾನಿನಿಯೇ ಚಂದ' ಎಂದು ಜ್ಞಾನೋದಯವಾದಮೇಲೆ ದೇಸಿಗೆ ಸೋಮಾಲಿಯಾಳ ಮೇಲೆ ಮನಸಾಯಿತು.

ಇಂಥಾ ದೇಸಿಗೂ ತನ್ನದೇ ಆದ, ಒಂದು ಅತ್ಯದ್ಭುತ ಸೌಂದರ್ಯ ಮೀಮಾಂಸೆ ಇದೆ, ಒಂದು ತಾತ್ವಿಕ ನಿಲುವಿದೆ. ಅದು ಹೀಗೆ : ನಂಬಿ ವಂಚನೆಗೊಳಗಾಗುವುದು

ನರಕ ಸದೃಶವೇ ಸರಿ. ಆದರೆ ಅರ್ಥಮಾಡಿಕೊಂಡು ಅನುಭವಿಸುವುದು ಅದರ ನೂರು ಪಟ್ಟು ಸ್ವರ್ಗಸುಖ. ಆದರೂ ಅರ್ಥವಾಗದ, ನಿರ್ಭೇದ್ಯ ರಹಸ್ಯದ ರೀತಿಯ, ಉತ್ತರವಿಲ್ಲದ ಪ್ರಶ್ನೆಯೊಂದು ದೇಸಿಯ ತಲೆಯನ್ನು ಕೊರೆಯುತ್ತಿತ್ತು.

'ಹಸಿವಿನ ಚೀರಾಟಗಳ ಸೋಮಾಲಿಯಾ ಇಂಥಾ ಅದ್ಭುತ ಸೌಂದರ್ಯವನ್ನು ಪ್ರದರ್ಶಿಸಲು ಅದು ಹೇಗೆ ಸಾಧ್ಯವಾಯಿತು ?' ಎನ್ನುವುದೇ ಆ ಪ್ರಶ್ನೆ. – ಆ ಪ್ರಶ್ನೆಗೆ ಉತ್ತರ ಸಿಗುವವರೆಗೂ ತಾನು ಸೋಮಾಲಿಯಾಳಿಗೆ ಶರಣಾಗಬಾರದು; ತನ್ನ ಪ್ರೀತಿಯನ್ನು ತನ್ನ ಹಿಡಿತದಲ್ಲಿಯೇ ಇಟ್ಟುಕೊಂಡಿರಬೇಕು ಎಂದು ತನಗೆ ತಾನೇ ನಿರ್ಬಂಧವನ್ನು ಹೇರಿಕೊಂಡ. ಅದನ್ನು ಯಾವಾಗಲೂ ನೆನಪಿನಲ್ಲಿಟ್ಟು ಕೊಳ್ಳಲು ಒಂದು ಚೀಟಿಯಲ್ಲಿ ಬರೆದುಕೊಂಡು ಜೇಬಿನಲ್ಲಿಟ್ಟುಕೊಂಡು ತಿರುಗಾಡುತ್ತಿದ್ದ.

ಅದು ಹಿಮ ತುಂಬಿದ ಬೆಳದಿಂಗಳ ರಾತ್ರಿ.

ಅಲ್ಲಿ ಹಸಿರಿನಿಂದ ಕಂಗೊಳಿಸುತ್ತಿದ್ದ ಒಂದು ಪಾರದರ್ಶಕ ಪುಷ್ಪ ಕುಟೀರ.

ಸೋಮಾಲಿಯಾ ಹಸಿವಿನಿಂದ ಕಂಗಾಲಾಗಿದ್ದಳು.

ದೇಸಿಯ ಮೋಹಪಾಶಕ್ಕೆ ಸಿಕ್ಕಿ ಬಡಕಲಾಗಿದ್ದಳು.

ತೊಟ ಮುರಿದ ಅಣಬೆಯಂತೆ ಆಕಾಶದಲ್ಲಿ ನೇತಾಡುತ್ತಿದ್ದ ಚಂದ್ರನನ್ನು ನೋಡುತ್ತಾ ಹಾಡತೊಡಗಿದಳು:

'ನೀನು ಗಗನದ ಚಂದಿರ
ನಾನು ಧೂಳಿನ ಆಗರ'

ದೇಸಿ ಸಹ ತಾನೇನೂ ಕಡಿಮೆಯಿಲ್ಲವೆನ್ನುವಂತೆ,

'ನೀನೇ ಎನ್ನ ಮನದಲ್ಲಿ
ತುಂಬಿರುವುದು ಈಗ ನೋಡಿಲ್ಲಿ' ಎಂದು ಹಾಡಿದನು.

ಸೋಮಾಲಿಯಾ ತನ್ನ ಹಾಡನ್ನು ನಿಲ್ಲಿಸಿ ಮೋಹಪರವಶಳಾಗಿ ದೇಸಿಯನ್ನೇ ನೋಡುತ್ತಾ ನಿಂತುಬಿಟ್ಟಳು.

''ಹಾಡು ಸೋಮಾಲಿಯಾ ! ಹಾಡು. ಏಕೆ ನಿಲ್ಲಿಸಿಬಿಟ್ಟೆ ? ಹಾಡು. ಮಧುರವಾದ ನಿನ್ನ ಗಾನಸುಧೆಯಲ್ಲಿ ಮುಳುಗಿ ಏಳಬಯಸಿದ ನನ್ನ ಬಯಕೆಯನ್ನು ಈಡೇರಿಸು. ಈ ಶೃಂಗಾರ ದೇವತೆಯ ಸನ್ನಿಧಿಯಲ್ಲಿ ನಮ್ಮ ಸಂಗೀತ ಪ್ರತಿಭೆಯನ್ನು ಸಾರ್ಥಕಪಡಿಸಿಕೊಳ್ಳೋಣ. ಬಾ ! ಹಾಡು'' ದೇಸಿಯ ಧ್ವನಿಯಲ್ಲಿ ಮಾದಕತೆ ತುಂಬಿತ್ತು.

''ನಿನ್ನ ಲೀಲೆ ಹಾಡುವೆ ದೇವಾ'', ಸೋಮಾಲಿಯಾ ಶುರು ಹಚ್ಚಿಕೊಂಡಳು.

''ಆಹಾ ! ಎಷ್ಟು ಮಧುರ ! ಏನು ಕೋಮಲ ಧ್ವನಿ ! ಏನು ಸೌಂದರ್ಯ ! ಏನು ಚಿಂತನೆ !'' ದೇಸಿ ಸೋಮಾಲಿಯಾಳ ಹಾಡಿಗೆ ತನ್ಮಯನಾಗಿ ಅರ್ಧನಿಮೀಲಿತ ನೇತ್ರನಾದನು.

''ಸಿಕ್ಕಿದೆಯಲ್ಲ, ಸಿಕ್ಕಿದೆಯಲ್ಲ ನನ್ನ ಮುದ್ದು ನಲ್ಲಾ'' ಎಂದು ಹೊಸ ಧಾಟಿಯಲ್ಲಿ ಹಾಡುತ್ತಾ ಇನ್ನೇನು ಸೋಮಾಲಿಯಾ ದೇಸಿಯ ಮೈಮೇಲೆ ಬೀಳಬೇಕು, ಹಠಾತ್ತನೆ ದೇಸಿಯ ಕಣ್ಣು ಪೂರ್ತಿ ತೆರೆಯಿತು.

''ಅದಿರಲಿ... ಈಗ ಹೇಳು. ಸೌಂದರ್ಯ ಎಂದರೆ ಏನು ?'' ಎಂದನು. ಸರಿ, ಕಥೆ ಮತ್ತೆ ಮೊದಲಿಗೇ ಬಂದಿತು. ಮುಂಗುರುಳುಗಳನ್ನು ಸರಿಪಡಿಸಿಕೊಳ್ಳುವಂತೆ ನಟಿಸುತ್ತಾ ಸೋಮಾಲಿಯಾ ಹಣೆ ಚಚ್ಚಿಕೊಂಡಳು.

''ನನ್ನಿಂದ ಉತ್ತರ ಬರುವವರೆಗೂ ಬಿಡುವಹಾಗಿಲ್ಲ ಈ ದೇಸಿ, ದರ್ಬೇಸಿ'' ಎಂದುಕೊಂಡಳು. ಮಾತನಾಡಲೇ ಬೇಕಾಗಿತ್ತು, ಮಾತನಾಡಿದಳು.

''ಸೌಂದರ್ಯ ಎಂದರೆ ಹಳೇ ಕಾಲದ ಗುಲಾಮಗಿರಿ. ಬಂಧಿಸಲಾಗಿರುವ ಸ್ವಾತಂತ್ರ್ಯ. ಸ್ವಾತಂತ್ರ್ಯ ತುಂಬಿದ ಬಂಧನ. ಕಣ್ಣಿಗೆ ಕಾಣುವ ಜಗತ್ತಿಗೆ ಕುರುಡಾಗಿ, ಕಾಣದ ಜಗತ್ತಿನ ಅರ್ಥಗಳಿಗಾಗಿ ಹುಡುಕಾಡುತ್ತಿದ್ದೀಯ ನೀನು. ನಮ್ಮ ಇಂದಿನ ಕುರುಡುತನವನ್ನ ಹೋಗಲಾಡಿಸಿ, ಕಣ್ಣುಗಳಿಗೆ ಒಂದು ಹೊಸ ಕುರುಡುತನವನ್ನ ಉಡುಗೊರೆಯಾಗಿ ಕೊಡುವುದೇ ಸೌಂದರ್ಯ.''

''ಇದು ಯಾವುದೂ ಅಲ್ಲ.''

''ಮತ್ತೆ! ಏನು ಸೌಂದರ್ಯ ಎಂದರೆ ?'' ಒಳಗೊಳಗೇ ಸುಡುತ್ತಿದ್ದ ಜಠರಾಗ್ನಿಯ ಮೇಲೆ ಲಾಲಾಜಲವನ್ನು ಹರಿಸಿ ತಾತ್ಕಾಲಿಕವಾಗಿ ತನ್ನೊಳಗಿನ ಬೆಂಕಿಯನ್ನು ನಂದಿಸಲು ಯತ್ನಿಸುತ್ತಾ ಕೇಳಿದಳು ಸೋಮಾಲಿಯಾ.

''ಚಲನ ಐಹಿಕ, ಚಲನ ಸೂತ್ರ ಪಾರಮಾರ್ಥಿಕ. ಗಮನ ಐಹಿಕ, ಗಮ್ಯ ಪಾರಮಾರ್ಥಿಕ. ಕಣ್ಣಿಗೆ ಕಾಣಿಸುವುದನ್ನು ಕಾಣದ್ದು ನಿರ್ದೇಶಿಸುವುದು ಸೌಂದರ್ಯ. ಜೀವನವನ್ನು ಮಾತುಗಳನ್ನಾಗಿಸಿ, ಕಾಲವನ್ನು ಕಾರ್ಪೊರೇಟೀಕರಿಸಿ, ನಮ್ಮ ಜೀವನ ಕಾಲವನ್ನು ನಿಮಿಷಗಳ ಲೆಕ್ಕದಲ್ಲಿ ಹರಾಜು ಹಾಕುವುದೇ ಸೌಂದರ್ಯ. ಗಂಟೆಗೊಬ್ಬ ಹೆಂಗಸು, ಅರ್ಧ ಗಂಟೆಗೊಬ್ಬ ಗಂಡಸನ್ನ ಬದಲಾಯಿಸುತ್ತಾ ವ್ಯಭಿಚಾರಾತ್ಮಕ ಪಾತಿವ್ರತ್ಯವನ್ನು ಪ್ರದರ್ಶಿಸುವುದೇ ಸೌಂದರ್ಯ. ಮುಷ್ಟಿಯಲ್ಲಿ ರಷ್ಯಾವನ್ನೂ, ಮುಷ್ಟಿಯ ಗಾತ್ರದ ಎದೆಯಲ್ಲಿ ಅಮೆರಿಕವನ್ನೂ ಹಿಡಿದಿಟ್ಟು ಚರ್ಮ ಸುಲಿದು ಒಳಗಿನ ಗುಂಡಿಗೆಯನ್ನು ರಹಸ್ಯವಾಗಿ ನೇಣು ಹಾಕುವುದೇ ಸೌಂದರ್ಯ''... ದೇಸಿ ವಿವರಿಸುತ್ತಾ ಹೋದನು.




''ನೀನು ಹೈ ಅಂದರೆ, ನಾನು ನೈ. ಏನು ಮಾಡೋದು ?'' ಸೋಮಾಲಿಯಾ ಪ್ರಶ್ನಿಸಿದಳು.

''ನೀನು ಒರಳು, ನಾನು ಅರಳು. ನಾನೇನು ಮಾಡಲಿ ?'' ದೇಸಿ.

''ನಿನ್ನ ಆ ಬುದ್ಧಿಜೀವಿ ಪೈತ್ಯವನ್ನು ಸ್ವಲ್ಪ ನಿಲ್ಲಿಸ್ತೀಯಾ ?'', ಸೋಮಾಲಿಯಾ ರೇಗಿದಳು.

''ನೀನೂ ಅಷ್ಟೇ. ಆ ತೌಡು ಕುಟ್ಟುವ ರೊಮಾಂಟಿಕ್ ರದ್ದಿಯನ್ನ ನಿಲ್ಲಿಸ್ತೀಯಾ'', ತಿರುಗೇಟು ನೀಡಿದ ದೇಸಿ.

''ಸುಲಭವಾಗಿ ಪ್ರಾಸ ಕೂಡಿಸಬಹುದು, ಆದರೆ ನಂಬಿಕೆ ಮತ್ತು ವ್ಯಾಪಾರಗಳನ್ನು ಒಂದುಗೂಡಿಸುವುದು ಸಾಧ್ಯವಿಲ್ಲ.''

''ಉಸಿರಾಡುವಷ್ಟು ಸುಲಭವಲ್ಲ ಪಡೆಯುವುದು... ಕಳೆಯುವುದು.''

''ಹಾಗಾದರೆ ನಮ್ಮ ಮಿಲನ ಇನ್ನು ಕೇವಲ ಕನಸೇನಾ ?'' ದೀನಳಾಗಿ ಕೇಳಿದಳು ಸೋಮಾಲಿಯಾ.

''ನಾವಿಬ್ಬರೂ ಒಂದಾಗಬೇಕಾದರೆ... ಮೊದಲು ನಮ್ಮಿಬ್ಬರ ಸೌಂದರ್ಯ ಮೀಮಾಂಸೆಗಳು ಒಂದಾಗ ಬೇಕು. ಸರಿ. ಇನ್ನೂ ಒಂದು ಸಲ ಕೇಳುತ್ತಿದ್ದೇನೆ. ಆಮೇಲೆ ಅದೂ, ಇದೂ ಅಂತ ತರಲೆ ತೆಗೆಯದೆ ಹೇಳು. ಸೌಂದರ್ಯ ಎಂದರೇನು ? ದೇಸಿ ಕೊನೆಯ ಬಾರಿ ಕೇಳಿದ.

''ಸರಿ ಹೇಳುತ್ತೇನೆ ಕೇಳು. ನಿನ್ನ ಕರುಳು ನಿನಗಾಗಿ ಕೂಗಾಡುವುದು ಸೌಂದರ್ಯ; ನಿನ್ನ ಎದೆ ನಿನಗಾಗಿ ಬಡಿಯುವುದು ಸೌಂದರ್ಯ; ನಾನು ನೀನುಗಳೆನ್ನುವ ಏಳುಬೀಳುಗಳನ್ನು ದಾಟಿ ನಿನ್ನನ್ನು ನೀನು ಸೇರಿಕೊಳ್ಳುವುದು ಸೌಂದರ್ಯ; ಅಷ್ಟೆಲ್ಲಾ ಯಾಕೆ ? ಹುಚ್ಚುನನ್ನ ಗಂಡುಮಗನೇ ! ನಿನ್ನ ಚರ್ಮದಡಿಯಲ್ಲಿ ನೀನು ಮಾತ್ರವೇ ವಾಸಮಾಡುವುದು ಸೌಂದರ್ಯ'' ಸೋಮಾಲಿಯಾ ತನ್ನ ಸೌಂದರ್ಯ ಮೀಮಾಂಸೆಯನ್ನು ತೆರೆದಿಟ್ಟಳು.

''ಅಷ್ಟೇ...''

ಏನಾಗುತ್ತಿದೆ ಎಂದು ತಿಳಿಯುವ ಮೊದಲೇ ದೇಸಿ ಸೋಮಾಲಿಯಾಳನ್ನು ಆಲಂಗಿಸಿದ. ಪ್ರೀತಿಯಿಂದಲ್ಲ, ಭಯದಿಂದ. ಭಯವಾಗಿದ್ದೇಕೆ ?

ವಾಸ್ತವ ಸಂಗತಿ ಏನೆಂದರೆ...

ದೇಸಿಯ ಚರ್ಮದ ಒಳಗೆ, ಅಂದರೆ ಅಡಿಯಲ್ಲಿ ದೇಸಿ ಇರಲಿಲ್ಲ, ಅಮೆರಿಕ, ಇಂಗ್ಲೆಂಡ್, ನ್ಯೂಜಿಲ್ಯಾಂಡ್, ಆಸ್ಟ್ರೇಲಿಯಾ, ಚೀನಾ, ಜಪಾನ್, ಜರ್ಮನಿ ಮೊದಲಾದ ದೇಶಗಳು ಅಲ್ಲಿದ್ದವು. ಸೋಮಾಲಿಯಾಳಿಗೆ ಈ ಸತ್ಯ ಎಲ್ಲಿ ತಿಳಿದುಬಿಡುತ್ತೋ ಎಂಬ ಭಯ ದೇಸಿಯನ್ನು ಕಾಡುತ್ತಿತ್ತು.

ಭಯವನ್ನು ಬಚ್ಚಿಡಲು ಸಾಧ್ಯವಾಗುವುದು ಪ್ರೀತಿಗೆ ಮಾತ್ರ. ಅದಕ್ಕೇ ದೇಸಿ ಸೋಮಾಲಿಯಾಳ ಬಗ್ಗೆ ಅಷ್ಟು ಷರತ್ತು ರಹಿತ ಪ್ರೀತಿಯನ್ನು ಪ್ರಕಟಿಸಿದ್ದು. ಕತ್ತು ಕುಯ್ಸಿಕೊಳ್ಳುವ ಮುನ್ನ ಕಟುಕನ ಬಗ್ಗೆ ಹುಟ್ಟುವ ನಂಬಿಕೆಯಂಥದೇ ದೇಸಿಯ ಮನದಲ್ಲಿಯೂ ಹುಟ್ಟಿತು. ಸೋಮಾಲಿಯಾಳ ಜತೆ ಜತೆಗೇ ದೇಸಿ ಹೆಜ್ಜೆ ಹಾಕಿದ. ಆ ನಂಬಿಕೆಯ ಪರಿಣಾಮ ಏನು ಎನ್ನುವುದು ನಿಮಗೆ ಗೊತ್ತು, ನನಗೆ ಗೊತ್ತು, ಸೋಮಾಲಿಯಾಳಿಗೂ ಗೊತ್ತು. ದೇಸಿಗೆ ಗೊತ್ತಾಗುವುದು ಯಾವಾಗಲೋ...!

ಕೊನೆಯ ಮಾತು...

ಒಬ್ಬರನ್ನೊಬ್ಬರು ಮೋಸ ಮಾಡಬಹುದೆಂಬ ಭರವಸೆಯೊಂದಿಗೆ ಸದಾ ಮುಂದೆ ಮುಂದೆ ಹೆಜ್ಜೆ ಹಾಕುತ್ತಾ ನಡೆಯುವುದೇ ಸೌಂದರ್ಯ.

ತೆಲುಗು ಮೂಲ : **ಪೈಡಿ ತೆರೇಶ್ ಬಾಬು**
ಕನ್ನಡಕ್ಕೆ : **ನಗರಗೆರೆ ರಮೇಶ್**
ಸಂಖ್ಯೆ. ೩೬೬, ೮ನೇ ಅಡ್ಡರಸ್ತೆ,
೮ನೇ ಮುಖ್ಯರಸ್ತೆ, ಪದ್ಮನಾಭನಗರ
ಬೆಂಗಳೂರು - ೫೬೦ ೦೭೦

ಮಂಜುನಾಥ ಡಿ. ಡೊಳ್ಳಿನ

# ಆಣೆ, ಪ್ರಮಾಣಗಳ ಪ್ರಹಸನ; ಒಂದು ಚರ್ಚೆ

ಧರ್ಮ, ಮೌಲ್ಯ ಹಾಗೂ ಆಚರಣೆಗಳು ಈಗ ಪುನರ್‌ವಿಮರ್ಶೆಗೆ ಒಳಪಡಬೇಕಾದ ಅಗತ್ಯವುಂಟಾಗಿದೆ. ಸಾತ್ವಿಕತೆ, ತಾತ್ವಿಕತೆಗಳನ್ನು ಮೈಗೂಡಿಸಿಕೊಳ್ಳಲು ಪೂರಕವಾಗಬೇಕಾಗಿದ್ದ ಈ ಮೇಲಿನ ಮೂರು ವಿಚಾರಗಳನ್ನು ನಾವಿಂದು ಅಕ್ಷರಶಃ ವ್ಯಾಪಾರೀಕರಣಗೊಳಿಸಿದ್ದೇವೆ, ರಾಜಕೀಯಮಯವಾಗಿಸಿದ್ದೇವೆ.

ಅಧಿಕಾರ ಹಾಗೂ ಗೌಪ್ಯತೆಯ ಪ್ರಮಾಣವಚನ ಸ್ವೀಕರಿಸಿ ಅಧಿಕಾರಕ್ಕೇರುವ ನಮ್ಮ ರಾಜಕಾರಣಿಗಳು ಅವುಗಳ ಪಾಲನೆಯನ್ನು ಸಮರ್ಪಕವಾಗಿ ನಿಭಾಯಿಸದಿರುವಾಗ ಯಾವ ನಾಚಿಕೆ, ಅಳುಕು, ಹಿಂಜರಿಕೆಗಳಿಲ್ಲದೆ ದೇವರ ಆಣೆ ಮಾಡುತ್ತೇನೆ ಎನ್ನುವುದು, ಸರ್ಕಾರಿ ಜಾಹೀರಾತುಗಳ ಮೂಲಕ ಬಹಿರಂಗ ಸವಾಲುಗಳನ್ನೆಸೆಯುವುದು, ನಂತರ ಇನ್ನಾವುದೋ ಕಾರಣ, ಪ್ರಭಾವಕ್ಕೊಳಗಾಗಿ ತಮ್ಮ ಸವಾಲುಗಳಿಂದ ಹಿಂದೆ ಸರಿಯುವುದು, ಈ ಎಲ್ಲ ಆಟಗಳು ಜನರನ್ನು ಮರುಳು ಮಾಡುವ ಪ್ರಯತ್ನಗಳಲ್ಲದೆ ಬೇರೇನೂ ಅಲ್ಲ.

ಪ್ರಾಮಾಣಿಕ ಆಸ್ತಿಕರಿಂದಾಗಲಿ, ಪ್ರಾಮಾಣಿಕ ನಾಸ್ತಿಕರಿಂದಾಗಲಿ ಯಾವ ಅಪಾಯಗಳೂ ಇಲ್ಲ. ಏಕೆಂದರೆ ಈ ಇಬ್ಬರೂ ತಾವು ರೂಢಿಸಿಕೊಂಡ ಜೀವನ ವಿಧಾನಕ್ಕೆ ಬದ್ಧರಾಗಿರುತ್ತಾರೆ. ಆಸ್ತಿಕರು ದೈವದ ಮೇಲಿನ ಅಚಲ ನಂಬಿಕೆ, ಶ್ರದ್ಧೆಗಳಿಂದಾಗಿ ಸುಳ್ಳು ಹೇಳಲು, ಅನ್ಯಾಯವೆಸಗಲು ಹಿಂಜರಿದರೆ, ನಾಸ್ತಿಕರು ತಾವು ನಂಬಿದ ಮೌಲ್ಯ, ಸತ್ಯ, ಪ್ರಾಮಾಣಿಕತೆಗಳಿಗೆ ಅನುಗುಣವಾಗಿ ವರ್ತಿಸುತ್ತಾರೆ. ಆದರೆ ಪ್ರಾಮಾಣಿಕರಾದ ಆಸ್ತಿಕರನ್ನೂ, ಪ್ರಾಮಾಣಿಕರಾದ ನಾಸ್ತಿಕರನ್ನೂ ಗುರುತಿಸುವುದೇ ಒಂದು ಸವಾಲಿನ ಕೆಲಸವೆನ್ನಬಹುದು.

ಭಗವದ್ಗೀತೆ, ಕುರಾನ್ ಅಥವಾ ಬೈಬಲ್ ಹೀಗೆ ವಿವಿಧ ಧರ್ಮಗ್ರಂಥಗಳು ಬೋಧಿಸಿದ ಮೌಲ್ಯಗಳಲ್ಲಿ, ದೈವತ್ವದಲ್ಲಿ, ವಿಶ್ವಾಸವಿರಿಸಿ ಅದಕ್ಕನುಗುಣವಾಗಿ ವ್ಯಕ್ತಿಯು ತಾನೊಬ್ಬ ಹಿಂದು, ಮುಸ್ಲಿಂ ಅಥವಾ ಕ್ರೈಸ್ತ ಎಂದು ಸಾರಿಕೊಂಡರೆ, ಅದರಿಂದ ಯಾವ ತೊಂದರೆಯೂ ಇಲ್ಲ. ಆದರೆ ಆಯಾ ಧರ್ಮಗಳಿಂದ ಅಧಿಕ ಹಿಂಬಾಲಕರು, ಬೆಂಬಲಿಗರನ್ನು ಗಳಿಸಿಕೊಳ್ಳುವ ದುರುದ್ದೇಶದಿಂದ ಧಾರ್ಮಿಕ ಮುಖವಾಡಗಳನ್ನು ಧರಿಸುವ ಅವಕಾಶವಾದಿಗಳಿಂದಾಗಿ ಇಂದು ಸ್ವತಃ ಧರ್ಮಗಳೇ ಸಂಕಷ್ಟಕ್ಕೆ ಸಿಲುಕಿವೆ.

ಭಾರತದ ಸಂದರ್ಭದಲ್ಲಿ ಬಹುಸಂಖ್ಯಾತರಾಗಿರುವ ಹಿಂದೂ ಧರ್ಮೀಯರ ಮತಗಳನ್ನು ಸೆಳೆಯಲು, ಅವರ ಬೆಂಬಲ ಪಡೆಯಲು ತಾನೊಬ್ಬ ಹಿಂದು ಎಂದು ಹೇಳಿಕೊಂಡು ಧರ್ಮವನ್ನು ನೇರವಾಗಿ ರಾಜಕಾರಣದ ಬಲೆಯೊಳಗೆ ಬೀಳಿಸುವ ಪ್ರಯತ್ನಗಳು ನಿರಂತರವಾಗಿ ಸಾಗಿಬರುತ್ತಲೇ ಇವೆ.

ಕನ್ನಡದ ನೆಲದಲ್ಲಿ ಇದೀಗ ತಾನೇ ನಡೆದಿರುವ ಆಡಳಿತ ಹಾಗೂ ವಿರೋಧ ಪಕ್ಷದವರ ಆಣೆ, ಪ್ರಮಾಣಗಳ ಪ್ರಹಸನದ ಹಿಂದೆಯೂ ಇದೇ ದುರುದ್ದೇಶವಿದೆ. ಜನಸಾಮಾನ್ಯನ ಮುಗ್ಧ ಭಕ್ತಿ-ಭಾವಗಳನ್ನೇ ಬಂಡವಾಳ ಮಾಡಿಕೊಂಡು ಅವುಗಳ ಮೂಲಕ ರಾಜಕೀಯ ಅಧಿಕಾರ ಗಳಿಸಿಕೊಳ್ಳುವ, ಉಳಿಸಿಕೊಳ್ಳುವ ಕುಟಿಲ ಪ್ರಯತ್ನಗಳು ಈಗ ಹೆಚ್ಚು ಇಂಬು ಪಡೆದುಕೊಳ್ಳುತ್ತಿವೆ.

ವಿಶೇಷವಾಗಿ ಹಿಂದುಳಿದ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ನಿಜಾಮರ ಆಳ್ವಿಕೆಯ ಕಾಲದಲ್ಲಿ ಕನ್ನಡ ಕಲಿಕೆಯೇ ಅಪರಾಧವಾಗಿತ್ತು. ಆ ಸಮಯದಲ್ಲಿ ಮಠಗಳೇ ಗಾಂವಠೀ ಶಾಲೆಗಳನ್ನು ನಡೆಸುವ ಮೂಲಕ 'ಸಾಲಿಗುಡಿ'ಗಳೆಂದು ಹೆಸರು ಗಳಿಸಿದ್ದವು. ಆ ಮೂಲಕ ಕನ್ನಡವನ್ನು ಉಳಿಸಿ, ಬೆಳೆಸುವಲ್ಲಿ ಯಶ ಕಂಡು ತಮ್ಮ ಸಾಮಾಜಿಕ ಕಾಳಜಿಯನ್ನು ಮೆರೆದಿದ್ದವು.

ಹಿಂದೆ ಈ ವೀರಶೈವ ಮಠಗಳು ಕೇವಲ ಲಿಂಗಾಯತರಿಗಷ್ಟೇ ಅಲ್ಲದೆ, ಇತರ ಎಲ್ಲ ಜಾತಿ-ಜನಾಂಗದವರಿಗೂ ಗುರುಸ್ಥಾನದಲ್ಲಿದ್ದವು. ಧಾರ್ಮಿಕ ವಿಧಿ-ವಿಧಾನಗಳನ್ನು

**ಸವರ್ಣೀಯರು ತಪ್ಪು ಮಾಡಿದಾಗ ಕೇವಲ ಆಣೆ ಪ್ರಮಾಣಗಳೇ ಸತ್ಯದ ತನಿಖೆಗೆ ಮಾನದಂಡವಾಗಿರುತ್ತವೆ. ಇಂಥದೇ ಪ್ರಸಂಗ ಶೂದ್ರರಿಗೆ ಬಂದಾಗ ಕುದಿಯುವ ಎಣ್ಣೆಯಲ್ಲಿ ಕೈ ಇಡುವ, ಕೊತಕೊತನೆ ಕುದಿಯುವ ಅನ್ನವನ್ನು ಬರಿಗೈಯಿಂದ ಪರೀಕ್ಷಿಸುವ, ಅಗ್ನಿಕುಂಡ ಪ್ರವೇಶಿಸುವ, ಮುಳ್ಳು ಹಾರುವ ಇನ್ನೂ ಮುಂತಾದ ಕ್ರೂರ, ಹಿಂಸಾತ್ಮಕ ಪರೀಕ್ಷೆಗಳನ್ನು ಒಡ್ಡುವ ಪರಿಪಾಠ ಈಗಲೂ ಹಲವೆಡೆ ರೂಢಿಯಲ್ಲಿದೆ. ದೇವರ ಮುಂದೆ ಸತ್ಯದ ನಿವೇದನೆ ಮಾಡಿಕೊಳ್ಳುವ ಬಗೆಗಳಲ್ಲೂ ತಮಗೊಂದು, ಶೂದ್ರರಿಗೊಂದು ಪದ್ಧತಿ ಹೇಳಿರುವ ಮನುವಾದಿಗಳ ಮುಂದುವರಿದ ಸಂತಾನವೇ ಇಂದಿನ ಆಣೆ, ಪ್ರಮಾಣದ ಪ್ರಹಸನವನ್ನು ತೆರೆಮರೆಯಲ್ಲಿ ನಿಂತು ನಿರ್ದೇಶಿಸುತ್ತಿದೆ.**



ಎಲ್ಲರಿಗೂ ಬೋಧಿಸಿಕೊಂಡು ಬರುತ್ತಿದ್ದವು. ಭಕ್ತರ ಕಷ್ಟ-ಸುಖಗಳಿಗೆ ಸ್ಪಂದಿಸುತ್ತಾ ಕಾಯಕ ಹಾಗೂ ದಾಸೋಹ ಗುಣಗಳೊಂದಿಗೆ ನಿಜ ಅರ್ಥದಲ್ಲಿ ಬಸವಣ್ಣನವರ ಕನಸಿನ ಸಮಾಜ ನಿರ್ಮಾಣಕ್ಕೆ ಒತ್ತು ನೀಡಿದ್ದವು. ಆದಾಗಲೂ ಅವುಗಳಿಂದ ಸಾಮಾಜಿಕ ಸಮಾನತೆಯನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗಲಿಲ್ಲ ಎಂಬ ವಿಚಾರದ ಕುರಿತು ಪ್ರತ್ಯೇಕವಾಗಿ ಚರ್ಚೆಯಾಗಬೇಕಿದೆ.

ಇತಿಹಾಸದ ಪುಟಗಳನ್ನು ತಿರುವಿಹಾಕಿದಾಗ ಆಡಳಿತ ನಡೆಸುವ ರಾಜಪೀಠ ಹಾಗೂ ಧಾರ್ಮಿಕ ಗುರುಪೀಠಗಳ ನಡುವೆ ಪರಸ್ಪರ ಸೌಹಾರ್ದ ಸಂಬಂಧಗಳಿದ್ದುದನ್ನು ತಿಳಿಯುತ್ತೇವೆ. ಆದರೆ ಅಧಿಕಾರ ಚಲಾವಣೆಯ ವಿಷಯದಲ್ಲಿ ಈ ಎರಡೂ ಪೀಠಗಳ ನಡುವೆ ಒಂದು ಆರೋಗ್ಯಕರ ಅಂತರವಿದ್ದೇ ಇತ್ತು ಎಂಬುದನ್ನು ಚರಿತ್ರೆ ಹೇಳುತ್ತದೆ. ಆದರೆ ವರ್ತಮಾನದಲ್ಲಿ ಈ ಅಂತರ ಇಲ್ಲವಾಗಿದೆ.

ಮಠ-ಮಂದಿರಗಳನ್ನು ನೇರವಾಗಿ ರಾಜಕೀಯ ಲಾಭಕ್ಕೆಳೆಯುತ್ತಿರುವುದು, ಬಹುತೇಕ ಮಠಗಳು ರಾಜಕೀಯ ಚಟುವಟಿಕೆಗಳ ಕೇಂದ್ರಗಳಾಗಿ, ಕಪ್ಪು ಹಣದ ಖಜಾನೆಗಳಾಗಿರುವುದು, ಬಹಿರಂಗವಾಗಿಯೇ ಒಂದು ಸಾಮಾಜಿಕ ವರ್ಗದ, ಗುಂಪಿನ ಜನರ ಬೆಂಗಾವಲಾಗಿ ನಿಲ್ಲುವಂತಾಗಿರುವುದು ನಮ್ಮ ಪರಂಪರೆಗೆ ಆದ ನಷ್ಟ ಎನ್ನಬಹುದು.

ಈ ವಿಭಜಕ ಲಕ್ಷಣವು, ಧರ್ಮವೊಂದರ, ಗುರುಪೀಠವೊಂದರ ಸಾರಭೂತ ಲಕ್ಷಣವೇನಲ್ಲ. ಆದರೆ ಸಂಕುಚಿತ ಮನಸ್ಕರು, ಅವುಗಳ ಒಳಕ್ಕೆ ಹೊರಗಿನಿಂದ ಹೊರಿಸಿರುವ ಲಕ್ಷಣ ಇದಾಗಿದೆ. ಶಾಂತಿ ನೀಡುವುದು, ಬಾಳಿಗೆ ಶಕ್ತಿ ಒದಗಿಸುವುದು, ಎಲ್ಲರಿಗೂ ಒಳಿತನ್ನು ಮಾಡುವುದು ಧರ್ಮದ ಮೂಲ ಸ್ವಭಾವವಾಗಿದೆ. ಅದು ಎಂದಿಗೂ ಹಿಂಸೆ, ಕದನಗಳಿಗೆ ಆಸ್ಪದ ನೀಡುವುದಿಲ್ಲ ಎಂಬುದು ವಿಶೇಷವಾಗಿ ಗಮನಿಸಬೇಕಾದ ಸಂಗತಿಯಾಗಿದೆ.

**ಕತ್ತಲಲ್ಲಿಡುವ ಹುನ್ನಾರ**

ದೇವರು, ಆಣೆ, ಪ್ರಮಾಣಗಳು ಮೇಲ್ನೋಟಕ್ಕೆ ಸತ್ಯದ ಸಾಬೀತಿಗೆ ಬಳಸುವ ಮಾರ್ಗಗಳು ಎಂದು ಕಂಡುಬಂದರೂ ಆಳದಲ್ಲಿ ಇದು ಮುಗ್ಧರನ್ನು, ಅಮಾಯಕರನ್ನು ವಂಚಿಸುವ, ಜನರನ್ನು ಕತ್ತಲಲ್ಲಿಯೇ ಮುಂದುವರಿಸುವ ಹುನ್ನಾರವಾಗಿದೆ. ಅಷ್ಟೇ ಅಲ್ಲ, ಇಂತಹ ಅವೈಜ್ಞಾನಿಕ ಆಚರಣೆಗಳ ಹಿಂದೆ ಜನರಲ್ಲಿ ಭಯ ಹುಟ್ಟಿಸಿ, ಅವರಲ್ಲಿ ವಿಚಾರ, ಪ್ರಜ್ಞೆಯ ಮೊಳಕೆಯೊಡೆಯದಂತೆ ನೋಡಿಕೊಂಡು ಪಟ್ಟಭದ್ರರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಕುತಂತ್ರವೂ ಇದೆ.

ಸಾವಿರಾರು ವರ್ಷಗಳಿಂದ ಅಸ್ತಿತ್ವವಾದಿಗಳು ಪಾಲಿಸಿಕೊಂಡು ಬಂದಿರುವ ಮನುಸ್ಮೃತಿಯಲ್ಲಿಯೇ ಇಂತಹ ತಂತ್ರಗಳು ಅವರಿಗೆ ಲಭ್ಯ ಇವೆ. ಕುಟಿಲತೆಗೆ ಮನುಸ್ಮೃತಿ ಸಾಕಷ್ಟು ಆಕರಗಳನ್ನು ಕೂಡ ಒದಗಿಸುತ್ತದೆ. ಶೂದ್ರನಿಗೆ ವಿಧಿಸುವ ಶಿಕ್ಷೆ, ಇಟ್ಟುಕೊಳ್ಳುವ ಹೆಸರು, ಆಹಾರ, ಅಕ್ಷರ ಹೀಗೆ ಎಲ್ಲ ಬಗೆಯ ನಿರ್ಬಂಧಗಳ ಕುರಿತು ಮನುಸ್ಮೃತಿ ಸ್ಪಷ್ಟವಾದ ಸೂಚನೆಗಳನ್ನು ನೀಡಿದೆ. ಸವರ್ಣೀಯರು ತಪ್ಪು ಮಾಡಿದಾಗ ಕೇವಲ ಆಣೆ ಪ್ರಮಾಣಗಳೇ ಸತ್ಯದ ತನಿಖೆಗೆ ಮಾನದಂಡವಾಗಿರುತ್ತವೆ. ಇಂಥದೇ ಪ್ರಸಂಗ ಶೂದ್ರರಿಗೆ ಬಂದಾಗ ಕುದಿಯುವ ಎಣ್ಣೆಯಲ್ಲಿ ಕೈ ಇಡುವ, ಕೊತಕೊತನೆ ಕುದಿಯುವ ಅನ್ನವನ್ನು ಬರಿಗೈಯಿಂದ ಪರೀಕ್ಷಿಸುವ, ಅಗ್ನಿಕುಂಡ ಪ್ರವೇಶಿಸುವ, ಮುಳ್ಳು ಹಾರುವ ಇನ್ನೂ ಮುಂತಾದ ಕ್ರೂರ, ಹಿಂಸಾತ್ಮಕ ಪರೀಕ್ಷೆಗಳನ್ನು ಒಡ್ಡುವ ಪರಿಪಾಠ ಈಗಲೂ ಹಲವೆಡೆ ರೂಢಿಯಲ್ಲಿದೆ.

ದೇವರ ಮುಂದೆ ಸತ್ಯದ ನಿವೇದನೆ ಮಾಡಿಕೊಳ್ಳುವ ಬಗೆಗಳಲ್ಲೂ ತಮಗೊಂದು, ಶೂದ್ರರಿಗೊಂದು ಪದ್ಧತಿ ಹೇಳಿರುವ ಮನುವಾದಿಗಳ ಮುಂದುವರಿದ ಸಂತಾನವೇ ಇಂದಿನ ಆಣೆ, ಪ್ರಮಾಣದ ಪ್ರಹಸನವನ್ನು ತೆರೆಮರೆಯಲ್ಲಿ ನಿಂತು ನಿರ್ದೇಶಿಸುತ್ತಿದೆ.

ಭಾರತದಲ್ಲಿ ಹಿಂದೂ ಧರ್ಮದ ರಕ್ಷಣೆಯ ಗುತ್ತಿಗೆ ಪಡೆದವರಂತೆ ವರ್ತಿಸುವ ತಂಟಕೋರ ಜನ ಇಂಗ್ಲೆಂಡ್‌ನಂತಹ ಮುಂದುವರಿದ ರಾಷ್ಟ್ರದಲ್ಲಿಯೂ ಇದ್ದಾರೆ. ಅವರು ಜ್ಞಾನದ ದ್ವೇಷಿಗಳು, ಜಡ್ಡು ಮತಧರ್ಮದ, ಮೌಢ್ಯಗಳ ಪೋಷಕರೂ ಆಗಿರುತ್ತಾರೆ. ಪ್ರಗತಿಪರ ವಿಚಾರಗಳನ್ನು, ವೈಜ್ಞಾನಿಕ ವಿಮರ್ಶೆಗಳನ್ನು ತಡೆಹಿಡಿಯಲು ಇಂಥವರು ಹೂಡುವ ಉಪಾಯ ತುಂಬ ಸರಳವಾದುದು. ಭಗವದ್ಗೀತೆ, ಕುರಾನ್ ಅಥವಾ ಬೈಬಲ್‌ಗಳನ್ನು ಚಾರಿತ್ರಿಕ, ವಿಮರ್ಶಾತ್ಮಕ ನೆಲೆಯಲ್ಲಿ ನೋಡಿ ಅಭಿಪ್ರಾಯ ವ್ಯಕ್ತಪಡಿಸುವವರಿಗೆ ಒಡನೇ ಅಡ್ಡಿಯುಂಟುಮಾಡಿ, ಇದು ನಮ್ಮ ಧಾರ್ಮಿಕ ಭಾವನೆಗಳಿಗೆ ಘಾಸಿಯುಂಟುಮಾಡುತ್ತದೆ; ಆದ್ದರಿಂದ ಇಂತಹ ಯಾವ ವಿಮರ್ಶೆಗಳನ್ನೂ ಕೈಗೆತ್ತಿಕೊಳ್ಳಕೂಡದು ಎಂದು ವಾದಿಸುತ್ತಾರೆ. ನ್ಯಾಯಾಲಯಗಳೂ ಕೂಡ ಅವರ ಬೆನ್ನಿಗೆ ನಿಲ್ಲುವುದರಿಂದ, ವೈಚಾರಿಕರು ಬಾಯಿ ಇದ್ದೂ ಮೂಕರಾಗಬೇಕಾದ ಸನ್ನಿವೇಶ ನಿರ್ಮಾಣವಾಗುತ್ತದೆ. ಈ ಪರಿಪಾಠ ಕೇವಲ ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ, ಇಂಗ್ಲೆಂಡ್‌ನಂತಹ ದೇಶದಲ್ಲಿಯೂ ಚಾಲ್ತಿಯಲ್ಲಿದೆ.

ಧರ್ಮಾಂಧತೆ, ಮೂಢನಂಬಿಕೆ, ಅನೈಕ್ಯತೆ ತಲೆದೋರಿದಾಗಲೆಲ್ಲ ಪರಕೀಯರ, ಸರ್ವಾಧಿಕಾರಿಗಳ ಹೊಡೆತಕ್ಕೆ ಸಿಕ್ಕಿ ಜನಸಾಮಾನ್ಯರು ಧ್ವಂಸವಾಗಿದ್ದಾರೆ. ಇತಿಹಾಸದಲ್ಲಿ ಇದಕ್ಕೆ ಸಾಕಷ್ಟು ಪುರಾವೆಗಳೂ ಇವೆ. ಮಹಾತ್ಮ ಗಾಂಧೀಜಿಯವರು ಕೂಡ ಈ ಕುರಿತು ಎಚ್ಚರಿಕೆ ನೀಡಿದ್ದರು. ಕಣ್ಣೆದುರು ನಡೆಯುತ್ತಿದ್ದ ಜಾತಿ, ಜಗಳಗಳ ವಿರುದ್ಧ ಕಟುವಾಗಿ ನುಡಿದು, ಪ್ರತಿಭಟಿಸಿದ್ದರು. ಗಾಂಧೀಜಿಯವರು ಅಸಹಾಯಕರ ನಡುವೆ ನಿಂತು ಅವರ ಭಾವನೆಗಳಿಗೆ ಧ್ವನಿಯಾಗುತ್ತಿದ್ದರು. ಇಂತಹ ಸಂಘರ್ಷಗಳ ಪರಿಣಾಮವಾಗಿಯೇ ಮಹಾತ್ಮ ಗಾಂಧೀಜಿಯವರು ಧರ್ಮಾಂಧನೊಬ್ಬನ ಗುಂಡಿಗೆ ಬಲಿಯಾಗಬೇಕಾಯಿತು.

ಸನಾತನ ಹಿಂದೂ ಧರ್ಮಕ್ಕೆ ನಿಷ್ಠರಾಗಿದ್ದ ಗಾಂಧೀಜಿಯವರು, ಧರ್ಮಾನುಯಾಯಿಗಳ ನಡುವೆಯೇ ವಿಚಾರಪರರಾಗಿ, ವಿಚಾರಪರರ ನಡುವೆಯೇ ಧರ್ಮಾನುಯಾಯಿಗಳಾಗಿದ್ದರು. ನಂಬಿಕೆ, ಧರ್ಮಶ್ರದ್ಧೆಗಳು ವಿಚಾರಪರತೆಯನ್ನು ಹೊರಗಿರಿಸಲಾರವು. ಅಂತೆಯೇ ವಿಚಾರಪರತೆಯೂ ಧರ್ಮಶ್ರದ್ಧೆಯನ್ನು ಹೊರತಾಗಿಸುವುದಿಲ್ಲ. ಗಾಂಧೀಜಿಯವರಂತಹ ನಿಜ ಆಸ್ತಿಕರು ನಮಗೀಗ ಪ್ರಸ್ತುತವಾಗಿದ್ದಾರೆ. ಜನರನ್ನು ಅಂಧಕಾರದಲ್ಲಿಯೇ ಇಡಬೇಕೆಂಬ ಮನುವಾದಿಗಳ ಹುನ್ನಾರವನ್ನು ವಿಚಾರಪರತೆ ಎಂಬ ಜ್ಯೋತಿ ಮಾತ್ರ ನಿವಾರಿಸಬಲ್ಲದು.

**ಮೇರೆಗಳಿಲ್ಲದ ಮತಾಂಧತೆ**

ಧರ್ಮ ಎಂಬ ಅಫೀಮು ತಲೆಗೇರಲು ಯಾವುದೇ ಮಿತಿಗಳೂ ಇರುವುದಿಲ್ಲ. ದೇಶ, ಭಾಷೆಗಳ ಹಂಗೂ ಅದಕ್ಕಿರುವುದಿಲ್ಲ. ೧೯೪೭ರಲ್ಲಿ ಭಾರತ ಇಬ್ಭಾಗವಾದಾಗ ಇದ್ದ ಅಸಹಿಷ್ಣುತೆ, ಕ್ರೌರ್ಯವನ್ನು ಹಿಂದು, ಮುಸ್ಲಿಂ ಎರಡೂ ಜಾತಿಯ ಕಂದಾಚಾರಿಗಳಲ್ಲಿ ಕಂಡಿದ್ದೇವೆ. ಮತಾಂಧತೆಗೆ ಒಳಗಾದ ಜನಾಂಗ ತನಗೆ ತಾನೇ ಮುಖಭಂಗ ಮಾಡಿಕೊಂಡಿದ್ದನ್ನು ಷಾ ಬಾನು ಎಂಬ ಅಸಹಾಯಕ ವೃದ್ಧೆಯ ಪ್ರಕರಣದ ಮೂಲಕ ಸೂಕ್ಷ್ಮವಾಗಿ ಇಲ್ಲಿ ನೋಡಬಹುದು. ವಕೀಲಿ ವೃತ್ತಿ ನಡೆಸುತ್ತಿದ್ದ ತನ್ನ ಗಂಡ ಇನ್ನೊಬ್ಬಳನ್ನು ಮದುವೆಯಾಗಿ, ತನಗೆ ಕೊಡುತ್ತಿದ್ದ ಕನಿಷ್ಠ ಜೀವನಾಂಶವನ್ನೂ ನೀಡಲು ನಿರಾಕರಿಸಿದಾಗ ವೃದ್ಧೆ ಷಾ ಬಾನು ನ್ಯಾಯಾಲಯದ ಮೆಟ್ಟಿಲೇರುತ್ತಾಳೆ. ಈಕೆ ನ್ಯಾಯಾಲಯವನ್ನು ಪ್ರವೇಶಿಸಿದ್ದೇ ಭಾರತದ ಮುಸ್ಲಿಂ ಮಹಿಳೆಯರ ಬದುಕಿನಲ್ಲಿ ಒಂದು ಚಾರಿತ್ರಿಕ ಸಂಗತಿ. ಇಂತಹ ಸಮಯದಲ್ಲಿ ಷಾ ಬಾನುವಿನೊಂದಿಗೆ ನಿಂತು ಮನುಷ್ಯ ಸಹಜ ಅಸಹಾಯಕತೆ, ಸ್ತ್ರೀ ಸಹಜ ನೋವಿನಲ್ಲಿ ಒಂದಾಗಬೇಕಾಗಿದ್ದ ಮುಸ್ಲಿಂ ಮಹಿಳೆಯರು, ಹಾಗೆ ಮಾಡದೆ ಮುಲ್ಲಾಗಳು ಹಾಗೂ ಕಂದಾಚಾರಿಗಳೊಂದಿಗೆ ಬೀದಿಗೆ ಇಳಿದು ಇಸ್ಲಾಂ ಧರ್ಮದ ನ್ಯಾಯವನ್ನು ಆರಿಸಿಕೊಂಡಿದ್ದು ಕುಚೋದ್ಯದ ಸಂಗತಿ.

ಹೀಗೆ ಮಾನವ ಪ್ರೇಮ, ಅಂತಃಕರಣ ಯಾವುದೂ ಇಲ್ಲದಂತೆ ನಮ್ಮನ್ನಾವರಿಸಿಬಿಡುವ ಮತಾಂಧತೆಗೆ ಯಾವುದೇ ಅಂಕೆ, ಮೇರೆಗಳಿಲ್ಲ. ಶ್ರೀಸಾಮಾನ್ಯನ ಆಳದಲ್ಲಿರಬಹುದಾದ ಧಾರ್ಮಿಕ ಭಾವನೆಗಳಿಗೆ ನೀರೆರೆದು, ಪೋಷಿಸಿ, ಬೆಳೆಸಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಅವಕಾಶವಾದಿತನದ ಮತ್ತೊಂದು ಮುಖವೇ ಈ ಆಣೆ, ಪ್ರಮಾಣಗಳ ನಾಟಕವಾಗಿದೆ.

ಭಾರತ ಹಲವು ಜಾತಿ, ಪಂಗಡಗಳು, ನೂರಾರು ಭಾಷೆ, ಸಾವಿರಾರು ಉಪಭಾಷೆಗಳು, ವೈವಿಧ್ಯಮಯ ಆಚರಣೆಗಳನ್ನೊಳಗೊಂಡ ಬಹುಸಂಸ್ಕೃತಿಯ ಚರಿತ್ರೆಯನ್ನುಳ್ಳ ದೇಶ. ನಾವೆಲ್ಲ ಸರ್ವಧರ್ಮಗಳ ಮೂಲಭೂತ ಲಕ್ಷಣವಾದ ದಯೆ, ದಾಕ್ಷಿಣ್ಯವನ್ನು ಅರಿತುಕೊಂಡು, ಜಾತಿಯನ್ನು ಸಾರ್ವಜನಿಕ ಬದುಕಿಗೆ ತರಲು ನಿರಾಕರಿಸಿ ಬದುಕಬೇಕಾಗಿದೆ.

ನೆರೆ ರಾಷ್ಟ್ರವಾದ ಚೀನಾದಲ್ಲಿ ಕಮ್ಯುನಿಸ್ಟ್ ಸರ್ಕಾರ ಹಲವು ಏಳು-ಬೀಳುಗಳ ನಡುವೆಯೂ ಮುನ್ನಡೆಯುತ್ತಿದೆ. ಮುಸ್ಲಿಂ ರಾಷ್ಟ್ರವಾದ ಪಾಕಿಸ್ತಾನ ತನ್ನ ಕಂದಾಚಾರಿ ಮುಲ್ಲಾಗಳ ಆಜ್ಞೆಯನ್ನು ಧಿಕ್ಕರಿಸಿ ಸುಮಾರು ಎರಡು ದಶಕಗಳ ಹಿಂದೆಯೇ ಮಹಿಳೆಯೊಬ್ಬಳನ್ನು ಪ್ರಧಾನಿಯನ್ನಾಗಿ ಮಾಡಿತು. ಈಗಲೂ ಅಲ್ಲಿ ಉನ್ನತ ವರ್ಗದ ಮುಸ್ಲಿಂ ಮಹಿಳೆಯರು ಧಾರ್ಮಿಕ ಕಟ್ಟಳೆಗಳಿಗೆ ಸೊಪ್ಪು ಹಾಕದೆ ಐಷಾರಾಮೀ, ಭೋಗ ಜೀವನ ಸಾಗಿಸುತ್ತಿರುವುದು, ಆಧುನಿಕ ಉಡುಪುಗಳನ್ನು ನಿಸ್ಸಂಕೋಚವಾಗಿ ಧರಿಸುತ್ತಿರುವುದನ್ನು ವಿಶೇಷವಾಗಿ ಕ್ರಿಕೆಟ್ ಪಂದ್ಯಗಳ ವೀಕ್ಷಣೆಯ ವೇಳೆ ದೃಶ್ಯವಾಹಿನಿಗಳಲ್ಲಿ ಕಾಣುತ್ತೇವೆ. ಇದರರ್ಥ ಧಾರ್ಮಿಕ ಕಟ್ಟುಪಾಡುಗಳು ಬಡವರ ಮೇಲೆಯೇ ಹೆಚ್ಚು ಹೇರಲ್ಪಟ್ಟಿವೆ ಎಂಬುದಾಗಿದೆ. ಬೌದ್ಧ ದೇಶವಾದ ಜಪಾನ್ ಸಿರಿವಂತಿಕೆಯ ಔನ್ನತ್ಯ ತಲುಪಿ ಭಾರತದ ಚಿಲ್ಲರೆ ಮತೀಯ, ಅವೈಜ್ಞಾನಿಕ ಆಚರಣೆಗಳನ್ನು ತಾತ್ಸಾರದಿಂದ ನೋಡುತ್ತಿದೆ. ಪಕ್ಕದ ಪುಟ್ಟ ಶ್ರೀಲಂಕಾದ ಬೌದ್ಧರಿಗೆ ನಮ್ಮ ಈ ಆಣೆ, ಪ್ರಮಾಣದಂತಹ ಪ್ರಹಸನಗಳು, ಅರ್ಥಹೀನ ನಡವಳಿಕೆಗಳು, ನಗೆಪಾಟಲಿನ ವಿಷಯಗಳಾಗಿವೆ. ಈ ಹಿನ್ನೆಲೆಯಲ್ಲಿ ನಾವೆಲ್ಲ ತಲೆತಗ್ಗಿಸದೆ ಬೇರೆ ದಾರಿಯೇ ಇಲ್ಲ.

**ಮಂಜುನಾಥ ಡಿ. ಡೊಳ್ಳಿನ**
ಪ್ರಸಾರ ನಿರ್ವಾಹಕ, ಆಕಾಶವಾಣಿ ಎಫ್. ಎಂ. ಕೇಂದ್ರ, ಹೊಸಪೇಟೆ - ೫೮೩ ೨೦೩.

ಸಾಯಿಲಕ್ಷ್ಮಿ ಎಸ್.

**ಭಾ**ರತೀಯರಾದ ನಾವು ನೀವು ಎಲ್ಲರೂ ಒಂದು ಲೆಕ್ಕಕ್ಕೆ ನಿರಾಧಾರ ಪರಂಜ್ಯೋತಿಗಳಾದರೆ, ಅದರಲ್ಲಿ ಹಲವರು ನಿರಾಹಾರಿಗಳೂ ಹೌದು. ಘನ ಸರ್ಕಾರ ನಮಗೆಲ್ಲರಿಗೂ, ಅಸ್ತಿತ್ವ ನೀಡಿ, ಭಾರತೀಯರೆಂಬ ಏಕಸೂತ್ರದಲ್ಲಿ ಬಂಧಿಸುವ ಉದ್ದೇಶದಿಂದ 'ಆಧಾರ' ಎಂಬ ಮಹತ್ತರ ಯೋಜನೆ ರೂಪಿಸಿದ್ದು, ಇದಕ್ಕೆ ಮಾರ್ಚ್ ೨೦೧೨ರ ಗಡಿ (ರೇಖೆ) ನಿಗದಿಪಡಿಸಿದೆ. ನಾವೆಲ್ಲ ಸ್ವ-ವಿವರಗಳನ್ನು ಭರ್ತಿ ಮಾಡುವ ಸಮಯ, ದಿನಾಂಕ ಗೊತ್ತಾದ ಕೇಂದ್ರಗಳಲ್ಲಿ, ಅಗತ್ಯ ಮಾಹಿತಿಗಳನ್ನು ಕೊಂಡೊಯ್ದು, ಕಂಪ್ಯೂಟರ್ ಮೂಲಕ ಮಾಡಿದರೆ ಮುಗಿಯಿತು, ಕೆಲವೇ ತಿಂಗಳಲ್ಲಿ ಕಾರ್ಡ್, ಮನೆ ಬಾಗಿಲಿಗೆ ಲಭ್ಯ. ಜೀವಿತಾವಧಿಗೆ ಪ್ರಮುಖ ರಹದಾರಿ. ಇದರೊಳಗೆ ಇನ್ನೂ ಅನೇಕ ಯೋಜನೆಗಳನ್ನು ಒಳಪಡಿಸುವ ಯೋಜನೆ ಸರ್ಕಾರಕ್ಕಿದೆ. ಪ್ರತಿ ಪ್ರಜೆಗೂ ಇದೊಂದು ಆಭರಣ. ಇದ್ದಾಗಲೇ ಬೇಕು ಎಂದಾದ ಮೇಲೆ, ನಮ್ಮ ಕುಟುಂಬ ಸುಮ್ಮನೆ ಕೂರಲಾದೀತೇ ? ಆ ದಿಕ್ಕಲ್ಲಿ ಕಾರ್ಯತತ್ಪರರಾದೆವು.

ನಮ್ಮ ಬಡಾವಣೆಯ ಬಿ.ಬಿ.ಎಂ.ಪಿ. ಕಚೇರಿ ಮುಂದೆ ಬೆಳಿಗ್ಗೆಯೇ ಸಾಲುಗಟ್ಟಿದ ಜನರನ್ನು ನೋಡಿ ದಂಗಾಗಿಹೋದೆವು. ಹಿಂದೆ ವರನಟ ರಾಜ್ ಸಿನಿಮಾಗೆ, ರಸಿಕರು ಹೀಗೆ ಕ್ಯೂ ನಿಲ್ಲುತ್ತಿದ್ದುದು ನೆನಪಾಯಿತು. ಗಾಬರಿಯೂ ಆಯಿತು. ಹಾಗೆಯೇ ನನ್ನ ಬಾಲ್ಯದ ದಿನಗಳಲ್ಲಿ ಮನೆಗಳಲ್ಲಿ ಗ್ಯಾಸ್ (ಅಡುಗೆ ಅನಿಲ ಸಿಲಿಂಡರ್) ಆಗಿನ್ನೂ ಬಂದಿರಲಿಲ್ಲ, ಸೀಮೆಎಣ್ಣೆ ತರಲು, ನಾವು ಮಕ್ಕಳು ಹೋಗಿ ಡಬ್ಬ ಇಟ್ಟು ಸರದಿಯಲ್ಲಿ ನಮ್ಮ ಸ್ಥಾನ ಬಲಪಡಿಸಿಕೊಳ್ಳುತ್ತಿದ್ದೆವು. ಸಾಹಿತ್ಯ ಪ್ರೇಮಿಯಾದ ನಾನು ಅಲ್ಲೇ ಕಲ್ಲಿನ ಮೇಲೆ ಕುಳಿತು, ಶಿವರಾಮ ಕಾರಂತ, ಭೈರಪ್ಪನವರ ಕಾದಂಬರಿಗಳನ್ನು ಓದುತ್ತಿದ್ದೆ. ನನಗೆ ಕ್ಯೂನಲ್ಲಿ ಕಾದ ಆಯಾಸವೇ ತಿಳಿಯುತ್ತಿರಲಿಲ್ಲ. ಆ ಕ್ಯೂ ಕಣ್ಣ ಮುಂದೆ ತೇಲಿ ಬಂದು ಅಷ್ಟು ಕ್ಯೂ ಕಾದ ಅನುಭವ, ಮೈಗೂಡಿಸಿಕೊಂಡಿರುವಾಗ, ಈ ಆಧಾರ್‌ಗೆ ಹೆದರಬಾರದು ಎನ್ನಿಸಿತು.

ಪಕ್ಕದ ರಸ್ತೆಯ ಗೆಳತಿ ಸಂಧ್ಯಾ, ಪೋಸ್ಟ್ ಆಫೀಸ್ ಉದ್ಯೋಗಿ. ಆಕೆ ಈ ಬಿಕ್ಕಟ್ಟು ಪರಿಹರಿಸಿದರು. ''ನಮ್ಮ ಆರ್. ಟಿ. ನಗರ ಪೋಸ್ಟ್ ಆಫೀಸಲ್ಲೇ ನಿಮಗೆಲ್ಲ ಮಾಡಿಸಿಕೊಡತೀನಿ'' ಎಂದವರು, ಅರ್ಜಿ ಫಾರಂಗಳನ್ನು ಕುಟುಂಬದ ಸದಸ್ಯರ ಸಂಖ್ಯೆಗೆ ಅನುಗುಣವಾಗಿ, ತಂದುಕೊಟ್ಟರು. ಮನೆಮಂದಿಯೆಲ್ಲ ಅಷ್ಟು ದೂರ, ಹೋಗಿ ನಿಲ್ಲಬೇಕೇ, ಎಂದುಕೊಳ್ಳುತ್ತಿರುವಾಗಲೇ, ನಮ್ಮ ನ್ಯೂಸ್ ಪೇಪರ್ ಹುಡುಗ, ದಿನಪತ್ರಿಕೆಯ ಒಳಗೆ, ಸೀರೆಯೊಳಗೆ ರವಿಕೆ ಕಣ ಹುದುಗಿಸಿಟ್ಟಂತೆ, ಒಂದು ಪ್ಯಾಂಫ್ಲೆಟ್ ಇಟ್ಟು, ನಮ್ಮ ಮನೆಯೊಳಗೆ ಹಾಕಿಹೋದ. ಅದರಲ್ಲಿ ನಮ್ಮ ಏರಿಯಾ ಎಂ.ಎಲ್.ಎ. ನಗುತ್ತಾ, ಬೀಗುತ್ತಿರುವ ಭಾವಚಿತ್ರ ಅಡಿಯಲ್ಲಿತ್ತು. ಮೇಲೆ 'ಆಧಾರ' ಯೋಜನೆಗೆ ಹತ್ತಿರದ ದೇವಸ್ಥಾನದ ನೆಲಮಹಡಿಯನ್ನು ಆರಿಸಲಾಗಿದ್ದು, ಅಲ್ಲಿ ಒಂದು ವಾರ ಕಾಲ, ಈ 'ಆಧಾರ' ಕಾರ್ಯಕ್ರಮ ಜಾರಿಯಲ್ಲಿರುತ್ತೆ, ಸ್ಥಳೀಕರು ಇದರ ಪ್ರಯೋಜನ ಪಡೆದುಕೊಳ್ಳಬೇಕೆಂದು ನಮೂದಾಗಿತ್ತು. ನನಗಾದ ಸಂತೋಷ ಅಷ್ಟಿಷ್ಟಲ್ಲ. ನಮ್ಮ ಎಂ.ಎಲ್.ಎ. ತುಳುಕಿಸಿದ ನಗುವಿಗಿಂತ, ನನ್ನ ನಗು ಇನ್ನು ಈ ಕಿವಿಯ ತುದಿಯಿಂದ ಆ ತುದಿಯವರೆಗೆ ಹಬ್ಬಿತ್ತು.

''ಶನಿವಾರ, ಭಾನುವಾರ ಬೇಡಾರೀ. ಐ.ಟಿ.ಯವರ ಕಾಟ ಇರತ್ತೆ, ನಡುವೆ ಹೋಗೋಣ'' ಎಂದು ಮನೆಯೊಡೆಯನ ಮನವೊಲಿಸಿದೆ.

ಬೆಳಿಗ್ಗೆಯೇ ಟೋಕನ್ ಹಂಚಿಬಿಡಲಾಗಿದ್ದು, ಅದರಲ್ಲಿ ಅದೇ ದಿನ ಇತರ ವಿವರಗಳನ್ನು ತುಂಬಲು, ಸಮಯ ನಿಗದಿಪಡಿಸಿರುತ್ತಾರೆ, ಸುಮಾರು ೨೦೦ ಟೋಕನ್‌ಗಳನ್ನಷ್ಟೇ ಒಂದು ದಿನಕ್ಕೆ ವಿತರಿಸುವುದು. ನಮ್ಮ ದುರಾದೃಷ್ಟಕ್ಕೆ ಹಿಂದಿನ ಬೆಳಿಗ್ಗೆಯೇ ಹೆಚ್ಚು ಜನ ಬಂದ ಕಾರಣ ಅವರಿಗೆಲ್ಲರಿಗೂ ಟೋಕನ್ ಮಾರನೇ ದಿನಕ್ಕೂ ಹಂಚಿಬಿಟ್ಟಿದ್ದರಿಂದ, ಬರಿ ೫೦ ಟೋಕನ್ ನಮ್ಮ ಕ್ಯೂ ಜನರ ಕೈ ಸೇರಲು ಕಾದಿತ್ತು. ನಮ್ಮ ಸಂಸಾರದ ಜೋಡಿ ಚಕ್ರಗಳಾದ ನಾವು ಮೊದಲು ಪಡೆದುಕೊಳ್ಳುವ ಸನ್ನಾಹದಲ್ಲಿ ಹೋಗಿದ್ದವರಿಗೆ, ಎರಡು ಟೋಕನ್ ದೊರೆತು ಆ ದಿನಕ್ಕೆ ಅದೇ ಕಡೆಯಾಯಿತು. ನಾವೇ ಭಾಗ್ಯಶಾಲಿಗಳು ಎಂದು ಹೆಮ್ಮೆಪಡುತ್ತಿರುವಾಗ ಮಗಳ ಗೆಳತಿ ಪೂಜಾಳ ಅಜ್ಜಿ ಎಲ್ಲ ಹಲ್ಲು ಕಿತ್ತಿಸಿಕೊಂಡು, ತಮ್ಮ ಹಲ್ಲು ಸೆಟ್ ಒಡವೆಯ ನಿರೀಕ್ಷೆಯಲ್ಲಿದ್ದ ತಮ್ಮ ಬಾಯಿಂದ, ಸ್ನೇಹದ ನಗೆ ಅರಳಿಸಿ, ಮಾತಿಗೆಳೆದರು.

'ಆಧಾರ್' ಕಾರ್ಡ್ ಪಡೆಯುವಲ್ಲಿ, ಫೋಟೋ ತೆಗೆಯುವ ಕಾರ್ಯಕ್ರಮವೂ ಭಾಗವಾಗಿರುವುದರಿಂದ, ಸರಿಯಾಗಿ ೪:೫೦ಕ್ಕೆ ಸಿಲ್ಕ್ ಸೀರೆ ಉಟ್ಟು, ಫೋಟೋ ಸೆರೆ ಹಿಡಿಯುವಂತೆ ಮಲ್ಲಿಗೆ ಹೂ ತಲೆಗೂದಲ ಬಲ ಭಾಗದಿಂದ ಇಣುಕುವಂತೆ ಶ್ರದ್ಧೆವಹಿಸಿ ಮುಡಿದೆ. ಯಜಮಾನರು ಮೀಸೆ, ಕ್ರಾಪ್ ಬಣ್ಣ ಬದಲಾಯಿಸಿ ಯುವಕನಾಗಿದ್ದರು. ಪುನಃ ಅದೇ ದೇವಸ್ಥಾನದ ಅದೇ ನೆಲಮಹಡಿಗೆ ಟೋಕನ್ ವಿವರಗಳನ್ನು ಭರ್ತಿ ಮಾಡಿದ ಅರ್ಜಿ ಹಾಗೂ ಚುನಾವಣೆ ಗುರುತಿನ ಕಾರ್ಡ್, ಸ್ವವಿಳಾಸದ ದಾಖಲೆ ಹಿಡಿದು ಹೋದೆವು. ಹೊರಗಿನಿಂದ ನೋಡಲು ಜನಸಂದಣಿಯೇ ಕಾಣಲಿಲ್ಲ. ಎಷ್ಟು ಆರಾಮ ವಾಗಿದೆಯೆಂದು ನೋಡಿದಾಗ, ಕಡೇ ಪಕ್ಷ ಒಂದು ಜೊತೆ ಪಾದರಕ್ಷೆಯೂ ಕಾಣಿಸಿಗಲಿಲ್ಲ, ಹೊರಗೆ ಬಂದು ಒಬ್ಬಾತ ಹೇಳಿದ, '' 'ಆಧಾರ್' ಕಾರ್ಡ್ ಮಾಡಿಸೋ ಕೆಲಸಕ್ಕೆ ಒಪ್ಪಂದದ ಮೇಲೆ ನೇಮಕ ಆಗಿರೋ ಯಾರಿಗೂ ಸಂಬಳ ಆಗಿಲ್ಲವಂತೆ. ಅವರೆಲ್ಲ ಮುಷ್ಕರದಲ್ಲಿದ್ದಾರೆ. ಪಗಾರ ಆಗೋವರೆಗೂ ಅವರ್ಯಾರೂ ಇಲ್ಲಿ ಸುಳಿಯೋಲ್ಲವಂತೆ.''



''ನಿನ್ನೆ ದಿನವು ಬಂದು ಹೋದೆವಿ. ಕೆಲಸ ಆಗಲಿಲ್ಲ. ವಿಳಾಸದ ದಾಖಲೆ ಕೇಳ್ತಾರೆ. ನನ್ನ ಹೆಸರಲ್ಲಿ ಏನೂ ಇಲ್ಲ. ಇವತ್ತು ಹಿರಿಯ ನಾಗರಿಕರ ಗುರುತಿನ ಕಾರ್ಡ್ ತಂದಿದೀನಿ.'' ಅವರಿದ್ದ ಲೇಔಟ್‌ನಲ್ಲಿ ಯಾವ ವಾಹನ ಸೌಕರ್ಯ ಸಿಗದ ಕಾರಣ ಆಕೆ ನಡೆದು ಬಂದು, ಸುಸ್ತಾಗಿ ಕುಳಿತಿದ್ದರು. ಆ ಗುರುತಿನ ಕಾರ್ಡ್ ಆಗುವುದಿಲ್ಲ ಎಂದು ತಿಳಿದು ಅವರು, ಹಿರಿಯ ಪುತ್ರ, ಪೂಜಾಳ ಮನೆಗೆ ಹೊರಟಿದ್ದರು. ನಮ್ಮ ಟೋಕನ್‌ನಲ್ಲಿ ಆ ದಿನದ ದಿನಾಂಕದೊಡನೆ ಸಂಜೆ ೪:೩೦ರ ಸಮಯಕ್ಕೆ ಎಂದು ಬರೆದಿತ್ತು. ಪೂಜಾಳ ಅಜ್ಜಿಗೆ, ''ಬನ್ನೀಮ್ಮ, ನಾವು ಮನೆಗೆ ಹೊರಟಿದೀವಿ, ಬಿಟ್ಟು ಹೋಗ್ತೀವಿ'' ಎಂದೆವು. ಅವರ ಲೇಔಟ್‌ನ ವಯಸ್ಸಾದ, ಹೆಜ್ಜೆ ಇಡಲಾರದ, ದೇಹ ತೂರಾಡುತ್ತಿದ್ದ ಹಿರಿಯ ಜೀವಿಯೊಬ್ಬರು ಮಫ್ಲರ್ ಕಟ್ಟಿಕೊಂಡು ಬಂದವರು ಕಾಣಸಿಕ್ಕರು. ಪೂಜಾ ಅಜ್ಜಿಯವರ ಕುಶಲ ವಿಚಾರಿಸಿದಾಗ, ಆತ, ''ಮೂರು ದಿನದಿಂದ ಬರ್ತಾನೆ ಇದೀನಿ. ಅದು ತನ್ನಿ, ಇದು ತನ್ನೀಂತ ಸತಾಯಿಸ್ತಾರೆ. ಬೆಳಿಗ್ಗೆ ಅಷ್ಟು ಹೊತ್ತಿಗೆ ಆಟೋ ಸಿಕ್ಕಿತು ಬಂದೆ, ಈಗ ಏನ್ ಗತಿನೋ ? ಇವತ್ತು ಮಧ್ಯಾಹ್ನ ಟೈಂ ಕೊಟ್ಟಿದಾರೆ'' ಎಂದು ತಮ್ಮ ಸಂಕಟ ತೋಡಿಕೊಂಡರು. ಪೂಜಾಳ ಅಜ್ಜಿ, ''ನನಗೂ ಇವತ್ತು ಮಧ್ಯಾಹ್ನ ಬರಹೇಳಿದಾರೆ. ನಾನು ಹಲ್ ಡಾಕ್ಟರ್ ಹತ್ರ ಹೋಗಿ, ಹಲ್ಲು ಸೆಟ್‌ಗೆ ಇಂಪ್ರೆಷನ್ ಕೊಡಬೇಕಿತ್ತು. ಅದು ನಿಧಾನ ಆದ್ರೂ ಪರ್ವಾಗಿಲ್ಲ, ಇದು ಮೊದಲು ಆಗಲಿ'' ಎಂದವರು ನಮ್ಮ ಕಾರ್ ಹತ್ತಿದರು. ಪಾಪ ! ಆ ವೃದ್ಧರು ಆಟೋ ಸಿಕ್ಕೀತೇ ಎಂದುಕೊಳ್ಳುತ್ತ ಅತ್ತ ಹೆಜ್ಜೆ ಹಾಕಿದರು. ನನಗೂ ಪರಿತಾಪವಾಗಿ ನಮ್ಮ ಎಂ.ಎಲ್.ಎ. ಮಹಾಶಯರಿಗೆ ಫೋನ್ ಮಾಡಿದೆ. ಅವರಿಗೆ ಪಾಪ ಒಂದಲ್ಲೊಂದು ದೇಶೋದ್ಧಾರದ ಕೆಲಸ. ''ನಾನು ಯಾರ ಹತ್ರಾನೋ ಮಾತಾಡ್ತಿದೀನಿ, ಮೆಸೇಜ್ ಮಾಡಿ'' ಎಂದು ಫೋನ್ ಆಫ್ ಮಾಡಿದರು. ನಾನು ಒಂದು ಪ್ಯಾರಾದಷ್ಟು ವಿಷಯ ಬರೆದು, ಅದರಲ್ಲಿ '' 'ಆಧಾರ್'ವಿಲ್ಲದ ಹಿರಿಯ ನಾಗರಿಕರು ಪಡುತ್ತಿರುವ ಬವಣೆ ವಿವರಿಸಿ, ಅವರಿಗಾಗಿ ಒಂದು ಕೌಂಟರ್ ಮಾಡಿ, ಕೂಡಲೇ ಗಮನಿಸಿ ಕಳಿಸಿಕೊಡುವ ವ್ಯವಸ್ಥೆ ಮಾಡಲಾಗದೆ ? ದಯವಿಟ್ಟು ತಿಳಿಸಿ'' ಎಂದು ಸಂದೇಶ ರವಾನಿಸಿದೆ. ಅದಕ್ಕೆ ಯಾವ ಉತ್ತರವೂ ಬರಲಿಲ್ಲ. ಅದು ತಿಳಿದ ಸಂಗತಿಯೇ. ಸುಮ್ಮನಾದೆ.

'ಆಧಾರ್' ಕಾರ್ಡ್ ಪಡೆಯುವಲ್ಲಿ ಫೋಟೋ ತೆಗೆಯುವ ಕಾರ್ಯಕ್ರಮವೂ ಭಾಗವಾಗಿರುವುದರಿಂದ, ಸರಿಯಾಗಿ ೪:೩೦ಕ್ಕೆ ಸಿಲ್ಕ್ ಸೀರೆ ಉಟ್ಟು, ಫೋಟೋ ಸೆರೆ ಹಿಡಿಯುವಂತೆ ಮಲ್ಲಿಗೆ ಹೂ ತಲೆಗೂದಲ ಬಲ ಭಾಗದಿಂದ ಇಣುಕುವಂತೆ ಶ್ರದ್ಧೆವಹಿಸಿ ಮುಡಿದೆ. ಯಜಮಾನರು ಮೀಸೆ, ಕ್ರಾಪ್ ಬಣ್ಣ ಬದಲಾಯಿಸಿ ಯುವಕನಾಗಿದ್ದರು. ಪುನಃ ಅದೇ ದೇವಸ್ಥಾನದ ಅದೇ ನೆಲಮಹಡಿಗೆ ಟೋಕನ್ ವಿವರಗಳನ್ನು ಭರ್ತಿ ಮಾಡಿದ ಅರ್ಜಿ ಹಾಗೂ ಚುನಾವಣೆ ಗುರುತಿನ ಕಾರ್ಡ್, ಸ್ವವಿಳಾಸದ ದಾಖಲೆ ಹಿಡಿದು ಹೋದೆವು. ಹೊರಗಿನಿಂದ ನೋಡಲು ಜನಸಂದಣಿಯೇ ಕಾಣಲಿಲ್ಲ, ಎಷ್ಟು ಆರಾಮವಾಗಿದೆಯೆಂದು ನೋಡಿದಾಗ, ಕಡೇ ಪಕ್ಷ ಒಂದು ಜೊತೆ ಪಾದರಕ್ಷೆಯೂ ಕಾಣಸಿಗಲಿಲ್ಲ. ಹೊರಗೆ ಬಂದು ಒಬ್ಬಾತ ಹೇಳಿದ: '' 'ಆಧಾರ್' ಕಾರ್ಡ್ ಮಾಡಿಸೋ ಕೆಲಸಕ್ಕೆ ಒಪ್ಪಂದದ ಮೇಲೆ ನೇಮಕ ಆಗಿರೋ ಯಾರಿಗೂ ಸಂಬಳ ಆಗಿಲ್ಲವಂತೆ. ಅವರೆಲ್ಲ ಮುಷ್ಕರದಲ್ಲಿದಾರೆ. ಪಗಾರ ಆಗೋವರೆಗೂ ಅವರ್ಯಾರೂ ಇಲ್ಲಿ ಸುಳಿಯೋಲ್ಲವಂತೆ.''

ಪತಿರಾಯರಿಗೆ ನಾನು ಹುರಿದುಂಬಿಸಿದೆ, ''ಇಲ್ಲಿರೋ ಬಿ.ಬಿ.ಎಂ.ಪಿ. ಆಫೀಸಿನಲ್ಲಿ ಏನಾದ್ರೂ ಮಾಡತಾರಾ ನೋಡಿ ಬರೋಣ್ವಾ ?'' ಎಂದು ನನ್ನ ಸಿಲ್ಕ್ ಸೀರೆ, ಮಲ್ಲಿಗೆ ಹೂ ಶೃಂಗಾರ ವ್ಯರ್ಥವಾಗಬಾರದೆಂಬ ಪರಮ ಕಾಳಜಿಯಿಂದ ಕೇಳಿಕೊಂಡೆ. ಅಲ್ಲೇ ಒಬ್ಬರು ಪುರುಷ ಹಿರಿಯ ನಾಗರಿಕರು, ಅಚ್ಚುಕಟ್ಟಾಗಿ 'ಆಧಾರ್'ಗೆ ಸಿದ್ಧವಾದವರು, ಜೊತೆಯಾದರು. ಬಂದಿದ್ದ ಒಬ್ಬ ಮಹಿಳೆಯನ್ನು ಅದಕ್ಕಾಗಿ ಆಹ್ವಾನಿಸಿದೆವು. ''ಇಲ್ಲೇ ಆಗಿದ್ರೆ ಆಗುತಿತ್ತು. ಮೊಮ್ಮಗ ಸ್ಕೂಲಿನಿಂದ ಬರೋ ಟೈಂ. ನಂಗೆ ಬರೋಕೆ ಆಗೋಲ್ಲ'' ಎಂದು ಮನೆಕಡೆ ಹೆಜ್ಜೆ ಹಾಕಿದರು. ಬಿ.ಬಿ.ಎಂ.ಪಿ. ಕಚೇರಿಯಲ್ಲೂ ಸಿಬ್ಬಂದಿ ಮುಷ್ಕರದ ಬಗ್ಗೆಯೇ ಒತ್ತಿ ಹೇಳಿದರು. ಸಂಬಳ ಎಲ್ಲರಿಗೂ ಆಮ್ಲಜನಕ. ಅದಿಲ್ಲದ ಮೇಲೆ ಸಿಬ್ಬಂದಿಯ ಬದುಕು ಸಾಗುವುದಾದರೂ ಹೇಗೆ, ಎಂದು ನಾವು ಮಾತನಾಡಿಕೊಳ್ಳುತ್ತ, ಕಾರೊಳಗಿನ ಆ ಹಿರಿಯರನ್ನು ಅವರ ವಸತಿ ಸಮುಚ್ಚಯದ ಬಾಗಿಲಿಗೆ ಮುಟ್ಟಿಸಿದೆವು. ಆತ ನಿವೃತ್ತ ಬ್ಯಾಂಕ್ ಅಧಿಕಾರಿ. ದಾರಿಯಲ್ಲಾತ ''ನೋಡಿ, ಬೆಳಿಗ್ಗೆ ಅಷ್ಟೊತ್ತಿಗೆ ನನ್ನ ಹೆಂಡ್ತಿಗೆ ತಯಾರಾಗೋಕೆ ಆಗೋಲ್ಲ. ಈ ಟೋಕನ್ ನಾಳೆ ಮಾನ್ಯ ಮಾಡ್ತಾರೋ ಇಲ್ವೋ ನಾ ಕಾಣೆ. ಬ್ಯಾಂಕ್‌ನಲ್ಲಿರೋವಾಗ, ಎಲ್ಲರೂ ಕಾದು ನನ್ನನ್ನು ಭೇಟಿಯಾಗೋರು. ಇವತ್ತು ನಾನು ಕಾದು ನಿಲ್ಲೋ ಪರಿಸ್ಥಿತಿ'' ಎಂದು ಒಂದು ದೊಡ್ಡ ಥ್ಯಾಂಕ್ಸ್ ಹೇಳಿದರು. ಕಡೇ ಪಕ್ಷ ಮನೆಗೆ ಕರೆದು, ಒಂದು ಲೋಟ ಕಾಫಿಯಿಂದ ಉಪಚರಿಸುವ ಸೌಜನ್ಯವೂ ತೋರಲಿಲ್ಲ. ಅಂತೂ ಆ ದಿನ ನಮಗೆ 'ಹೋದ ಪುಟ್ಟ ಬಂದ ಪುಟ್ಟ' ಎಂಬ ನುಡಿಗಟ್ಟು ಅನ್ವಯಿಸಿತು.

ನಾನು ಛಲ ಬಿಡದೆ, ಎಂ.ಎಲ್.ಎ.ಗೆ ಫೋನ್ ಮಾಡಿ, ಅಂದು ಎಲ್ಲರ ಮುಷ್ಕರದ ಫಲದಿಂದ ವಾಪಸ್ಸಾದ ಸಂಗತಿ ವಿವರಿಸಿದಾಗ, ಆತ ನಿಸೂರಾಗಿ ದಾರ್ಶನಿಕನಂತೆ ಉತ್ತರಿಸಿದರು : ''ಸಿಬ್ಬಂದಿ ಪಗಾರ ನಮ್ಮ ಕೈಲಿಲ್ಲ. ಅದೇ ಬೇರೆ ವ್ಯವಸ್ಥೇಲಿ ಮಂಜೂರಾಗೋದು. ನಿಮಗೆ ತೀರಾ ತುರ್ತಿದ್ದರೆ, ಆರ್. ಟಿ. ನಗರದ ಪೋಸ್ಟ್ ಆಫೀಸ್‌ಗೆ ಹೋದರೆ ಮಾಡಿಕೊಡ್ತಾರೆ.'' ನನಗೂ ಕೋಪ ಉಕ್ಕಿಬಂತು. ಜೊತೆಯಲ್ಲೇ ನೆರೆಯ ಸಂಧ್ಯಾ ತಂದುಕೊಟ್ಟ ಅರ್ಜಿ ಫಾರಂಗಳು ಸ್ಮರಣೆಗೆ ಬಂದು, ಕುದಿಯುತ್ತಾ ಹೇಳಿದೆ : ''ನಾವೆಲ್ಲ ಅಲ್ಲೇ ಹೋಗೋವರಿದ್ವಿ. ಆದರೆ ನಿಮ್ಮ ಭಾವಚಿತ್ರ ಇರೋ ಪ್ಯಾಂಫ್ಲೆಟ್ ನೋಡಿ, ದೇವಸ್ಥಾನದ 'ಆಧಾರ್' ಕೇಂದ್ರಕ್ಕೆ ಬಂದ್ವಿ. ಮಕ್ಕಳು, ವಯಸ್ಸಾದವ್ರು, ಎಲ್ಲರಿಗೂ ಪದೇ ಪದೇ ಹೀಗೆ ಬಂದು ವಾಪಸ್ ಆಗೋದು ಚಿತ್ರಹಿಂಸೆ ತಾನೆ. ನಮ್ಮ ಸಮಯವೂ ಹಾಳು.'' ''ಅದಕ್ಕೆ ತಾವು ಯಾವ ವಿಧದಲ್ಲೂ ಜವಾಬ್ದಾರರಲ್ಲ'' ಎಂಬ ಆರೋಪ ನಿರಾಕರಣೆಯ ನುಡಿ ಅತ್ತಲಿಂದ ತೇಲಿ ಬಂತು. ಆತನಾಡಿದ ರೀತಿ ನನಗೆ ಸಮಂಜಸವೆನಿಸಲಿಲ್ಲ. ಅದರಲ್ಲಿ ಧೋರಣೆಯಿತ್ತೇ ವಿನಾ ಯಾವ ಬಗೆಯ ಕಳಕಳಿಯೂ ಕೇಳಲಿಲ್ಲ.

ಮಾರನೆಯ ದಿನ ಎಲ್ಲಿಗೋ ಹೊರಟ ಮನೆಯೊಡೆಯ, ಆ ದೇವಸ್ಥಾನವನ್ನು ಹಾದುಹೋಗುವಾಗ, ಅಲ್ಲಿ ಆ ದಿನ ಜೇನುಗೂಡಿನ ರೀತಿ 'ಆಧಾರ್' ಚಟುವಟಿಕೆ ಆರಂಭವಾಗಿದ್ದು, ಅವರು ಹರುಷದಿಂದ ಈ ದಿನ ೪:೩೦ಕ್ಕೆ ಬಂದರೆ ನಿನ್ನೆಯ ಟೋಕನ್ ಮಾನ್ಯ ಮಾಡ್ತಾರಂತೆ. ರೆಡಿ ಇರು, ಮಧ್ಯಾಹ್ನ ಹೋಗಿಬಿಡೋಣ ಎಂದು ಫೋನ್ ಸಂದೇಶ ರವಾನಿಸಿದರು. ನಾನಂತು ಚೂರೇ ಚೂರು ಕೊಬ್ಬರಿ ಎಣ್ಣೆ ತಲೆಗೆ ಸವರಿದ್ದವಳು, ಓರಣವಾಗಿ ಬಾಚಿ, ಮಲ್ಲಿಗೆ ಮುಡಿದು, ಬಿಳಿ ಬಣ್ಣದ ಹಿನ್ನೆಲೆಯಲ್ಲಿ ಮೆರೂನ್ ಬಣ್ಣದ ಹೂಗಳ ಸೀರೆಯುಟ್ಟು, ಶ್ರದ್ಧೆವಹಿಸಿ ಸಿದ್ಧಳಾದೆ, ಅಲ್ಲಿ ತೆಗೆಯಲಿರುವ ಫೋಟೋದಲ್ಲಿ ಚಂದವಾಗಿ ಕಾಣಬೇಕೆಂದು. ಅಂತೂ ಸಂಜೆ ನಾವು 'ಆಧಾರ' ಕೇಂದ್ರ ಹೊಕ್ಕೆವು. ಅಲ್ಲಿ ಆಗಲೇ ಜನ ಎರಡು ಕಡೆಯೂ ಪ್ಲಾಸ್ಟಿಕ್ ಚೇರ್‌ಗಳಲ್ಲಿ ಜಮಾಯಿಸಿದ್ದರು. ಪೂಜಾಳ ಅಜ್ಜಿ ದೇವಸ್ಥಾನದ ಮೆಟ್ಟಿಲ ಮೇಲೆ ಕುಳಿತವರು ನಮ್ಮ ಕಡೆ ನೋಡಿ ನಕ್ಕರು. ಸ್ನೇಹದ ನಗು ತುಳುಕಿಸಿ ನುಡಿದರು, ''ನಂದು ಎಲ್ಲ ಆಯಿತು. ಫೋಟೋ ತೆಗೀಬೇಕು. ಕ್ಯೂನಲ್ಲಿ ಕೂತಿದೀನಿ. ಸೆಕೆ, ಅದಕ್ಕೆ ಹೊರಗೆ ಬಂದೆ.'' ನಾವು ನಮ್ಮ ವಿವರಗಳ ತಪಾಸಣೆ ಮಾಡಿಸಿಕೊಳ್ಳುವ ಕ್ಯೂ ಸೇರಿ ಜಯಶಾಲಿಗಳಾದೆವೇ ವಿನಾ ಫೋಟೋ, ಇತರ ಕ್ಯೂ ದೊಡ್ಡದಾಗಿದ್ದು, ಅಲ್ಲೊಬ್ಬ ಕಾರ್ಯಕರ್ತ ಹಿತವಚನ ನೀಡಿದ, ಸುಮ್ನೆ ಕೂರಬೇಡಿ, ಈಗ ಕೂತಿರೋರದೆಲ್ಲ ಮುಗಿಯೋಕೆ ರಾತ್ರಿ ೮ ಆಗತ್ತೆ. ಬೆಳಿಗ್ಗೆ ೮ಕ್ಕೆ ಬನ್ನಿ, ರಶ್ ಇರೋಲ್ಲ, ಹತ್ತು ನಿಮಿಷದಲ್ಲಿ ಆಗತ್ತೆ.'' ನನ್ನವರಿಗೆ ಈ ಸಲಹೆ ಪ್ರಿಯವಾಗಿ, ಹೊರಡಿಸಿಯೇಬಿಟ್ಟರು.

ಮಾರನೆಯ ಬೆಳಿಗ್ಗೆ, ತಲೆಯ ಕೊಬ್ಬರಿ ಎಣ್ಣೆ ಜಿಡ್ಡನ್ನು ತಲೆಸ್ನಾನದ ಮೂಲಕ ಹೋಗಲಾಡಿಸಿಕೊಂಡು ಒತ್ತಾದ ಮಲ್ಲಿಗೆ ಮಾಲೆ ಮುಡಿದು, ಅದು ಕಿವಿಯ ಪಕ್ಕದಿಂದ ಇಳಿಬಿಟ್ಟುಕೊಳ್ಳುವಂತೆ ಮುತುವರ್ಜಿವಹಿಸಿ ಹಿಂದಿನ ದಿನ ಉಟ್ಟ ರೇಶಿಮೆ ಸೀರೆ ಆಗಿಬರದ ಕಾರಣ, ಮತ್ತೊಂದು ಎದ್ದು ಕಾಣುವ ಬಣ್ಣದ ಸೀರೆ ಉಟ್ಟು, ಪತಿಯನ್ನು ಹಿಂಬಾಲಿಸಿದೆ. ಅದೇ ಹಿಂದಿನ ದಿನದ ಪ್ಲಾಸ್ಟಿಕ್ ಚೇರುಗಳು ಮಾರನೇ ಬೆಳಿಗ್ಗೆ ಕೆಲವೇ ಭರ್ತಿಯಾಗಿದ್ದು, ನಾವು ಅಲ್ಲಿ ಆಸೀನರಾದೆವು. ಒಬ್ಬಾಕೆ, ಕಂಪ್ಯೂಟರ್‌ಗೆ ಅಳವಡಿಸಿದ್ದ ಉಪಕರಣದ ಮೇಲೆ ಬೆರಳು ಒತ್ತುತ್ತಾ ಕೂತಿದ್ದಳು. ಅದಕ್ಕಾಗಿಯೇ ನಿಯಮಿತನಾಗಿದ್ದವ,

## ಅನಂತ ನಿರ್ಮಲ

ಆಕಾಶದಗಲ ಹರಡಿದ ಬೋಧಿ
ಟಿಸಿಲು ಒಡೆದು ವಿಶ್ವ
ಈಗ ಒಂದೇ ಕುಟುಂಬ

ಆ ಕುಟುಂಬವೇ ಒಂದು ದೇಹ
ದೇಹವೇ ಬೋಧಿವೃಕ್ಷ
ಬೋಧಿ ಒಂದು ವೃಕ್ಷವೇ ಅಲ್ಲ
ಅದು ಮನಸಿನ ಕನ್ನಡಿ
ಕನ್ನಡಿ ತಿಳಿ ನೀರ ಸರೋವರ
ಬುದ್ಧಸ್ಥಿತಿಯ ನಿರ್ಮಲ
ನಿರ್ಮಲಕ್ಕೆ ಧೂಳು ಹತ್ತೀತೆ ?
ಇಲ್ಲ ಬುದ್ಧ ನಿರ್ಮಲ ಅನಂತ
ನಿರ್ಮಲ ಬುದ್ಧ ಇನ್ನೂ ಅನಂತಾನಂತ
ಅದುಯಾವತ್ತೂ ಮುಷ್ಟಿಗೆ ಸಿಕ್ಕದ್ದು

**ಜಿ. ಇಂದ್ರಕುಮಾರ್**
*ಸಂಯುಕ್ತ ಕರ್ನಾಟಕ, ದೊಡ್ಡಲಿಂಗಪ್ಪ ಬಿಲ್ಡಿಂಗ್*
*ಕೆ.ಇ.ಬಿ. ರಸ್ತೆ, ತುಮಕೂರು - ೨*

ಅನೇಕ ಬಾರಿ ಆಕೆಯ ಬಲಗೈನ ನಾಲ್ಕು ಬೆರಳೂ ಒತ್ತಿಸಿಯೇ ಒತ್ತಿಸಿದ, ಅದರ ಅಚ್ಚು ಸರಿಯಾಗಿ ಮೂಡದ ಕಾರಣ, ಕಂಪ್ಯೂಟರ್ ಅದನ್ನು ತಿರಸ್ಕರಿಸುತಿತ್ತು. ಹೀಗೆ ಅರ್ಧ ಗಂಟೆ ಕಳೆಯುವಲ್ಲಿ ಆಕೆ ಆ ಬೆರಳಚ್ಚು ಪರೀಕ್ಷೆಯಲ್ಲಿ ಯಶಸ್ವಿಯಾದಳೆಂದು ಆ ನಿಯಾಮಕ ಸುದ್ದಿ ಕೊಟ್ಟ. ನಮ್ಮ ಪಕ್ಕದ, ಹಿಂದಿನ ಸಾಲಿನ ಪ್ಲಾಸ್ಟಿಕ್ ಕುರ್ಚಿಗಳು, ಆ ವೇಳೆಗೆ ಭರ್ತಿಯಾಗತೊಡಗಿದವು. ಕಂಪ್ಯೂಟರ್‌ಗೆ ಅಳವಡಿಸಿದ 'ಆಧಾರ' ವಿವರ ದಾಖಲಿಸುವ ಉಪಕರಣದ ಐದು ನಮೂನೆಗಳಿದ್ದವು. ಆದರೆ ನಾಲ್ಕು ಕಂಪ್ಯೂಟರ್ ಚಾಲಕರು ಇಲ್ಲದೆ, ಅವೆಲ್ಲ ಸುಮ್ಮನೆ ಶೋಗೆ ಇಟ್ಟಂತೆ ಕಂಡವು. ನನ್ನ ಪಕ್ಕದಲ್ಲಿ ಒಬ್ಬ ಸಾಫ್ಟ್‌ವೇರ್ ಬಹದ್ದೂರ್ ಗಂಡು ಉಸುರಿದ, ''ಒಂದೇ ಸಿಸ್ಟಂ ಕೆಲಸ ಮಾಡೋದು. ಉಳಿದಿದ್ದು ಬರೀ ತೋರಿಕೆಗೆ. ಅವು ಕೆಲಸ ಮಾಡದಿದ್ದರೂ, ಅವುಗಳನ್ನು ತೋರಿಸಿ ಬಾಡಿಗೆ ಗಿಟ್ಟಿಸಬಹುದಲ್ಲ.'' ಹೀಗೆಯೇ ಆಧಾರವಿಲ್ಲದೆ, ವಿನೋದವಾಗಿ ಕಾಲ ಕಳೆಯುತ್ತಿರುವಾಗ, ನನ್ನ ಹಾಗೂ ಯಜಮಾನರ ನಡುವೆ ಒಂದು ತಲೆ ಇಣಕಿ, ''ಏನ್ ಸಾರ್, ಮೇಡಂ ಫುಲ್ ಮೇಕಪ್‌ನಲ್ಲಿ ಬಂದಿದಾರೆ. ನೀವು ಮಾತ್ರ ಸಿಂಪಲ್ ಆಗಿದೀರಿ'' ಎಂದ. ನಾನು ಕತ್ತು ಹೊರಳಿಸಿ ನೋಡಿದೆ, ಅವರು ನಮ್ಮ ನೆರೆಮನೆಯ ಜಯಸಿಂಹ, ಇಸ್ರೋದಲ್ಲಿ ಹಿರಿಯ ವಿಜ್ಞಾನ ಅಧಿಕಾರಿ. ಸದಾ ಉಪಗ್ರಹಗಳ ಸುತ್ತಲೇ ಸುತ್ತುವ ಕೆಲಸ. ಶನಿವಾರದ ಬಿಡುವಿನಲ್ಲಿ, ತಂದೆ ತಾಯಿಯನ್ನು 'ಆಧಾರ್' ಕಾರ್ಡ್ ಮಾಡಿಸಲು ಕರೆತಂದಿದ್ದರು. ಅವರು ಅದಾಗಲೇ ಪತ್ನಿಯೊಡನೆ ತುಮಕೂರಿನಲ್ಲಿ 'ಆಧಾರ್' ಮಾಡಿಸಿ, ಕಾರ್ಡ್ ಪಡೆದಾಗಿತ್ತು. ಎಷ್ಟಾದರೂ ಅವರಿಗೆ ಅದು ರಾಣೀವಾಸದ ನಾಡು. ನನ್ನ ಪತಿಯೂ ನಗುತ್ತಾ ಜಯಸಿಂಹ ಅವರ ಪ್ರಶ್ನೆಗೆ ಉತ್ತರಿಸಿದರು, ''ನಾವು ಏನು ಮಾಡಿಕೊಂಡರೂ ಇವರುಗಳ ತರಹ ಎದ್ದು ಕಾಣೋಲ್ಲ. ಅಲಂಕಾರದ ಕಲೆ ಇರೋದೇ ಹೆಣ್ಣುಮಕ್ಕಳಿಗೆ.'' ಜಯಸಿಂಹ 'ಹಲೋ' ಹೇಳಿ ಅತ್ತ ಹೋದರು. ಅಂತೂ ಇನ್ನೊಂದು ಕಂಪ್ಯೂಟರ್‌ನೊಡನೆ ಸರ್ಕಸ್ ಮಾಡುತ್ತಿದ್ದಾತ, ಅನೇಕ ಸ್ವಿಚ್ಚುಗಳೊಡನೆ ಆಟವಾಡಿ, ತನ್ನ ದಾರಿಗೆ ತಂದುಕೊಂಡ ಪರಿಣಾಮ ನಾನು ಅವನೆದುರಿನ ಕುರ್ಚಿಯಲ್ಲಿ ಹೋಗಿ ಕುಳಿತೆ.

ಟ್ರಿಮ್ಮಾಗಿ ಬಂದು ಕುಳಿತ ಇನ್ನೊಬ್ಬ ಕಂಪ್ಯೂಟರ್ ಸೂತ್ರಧಾರಿ ಹರಸಾಹಸ ಮಾಡಿದರೂ, ಅದು ಕಾರ್ಯ ಪ್ರಾರಂಭಿಸಲಿಲ್ಲ. ನಾವೆಲ್ಲ ಅವನ ತಂತ್ರ ಗಮನಿಸುತ್ತಿದ್ದೇವೆಂದು ಬಲ್ಲ ಆ ಚಾಣಾಕ್ಷ ಗಾಂಭೀರ್ಯದಿಂದ, ಕೈಗಳನ್ನು ಹಿಂದೆ ಕಟ್ಟಿಕೊಂಡು, ಬಿಂಕದಿಂದ ಹೆಜ್ಜೆ ಹಾಕುತ್ತಾ ಬಂದವ, ಕುಳಿತವರನೆಲ್ಲ ಉದ್ದೇಶಿಸಿ, ಒಂದು ಮಹಾನ್ ಪ್ರಶ್ನೆ ಹಾಕಿದ. ''ನಿಮ್ಮದೆಲ್ಲ ವೆರಿಫಿಕೇಷನ್ ಆಗಿದೆಯಾ ?'', ''ಆ ಬಾಗಿಲು ದಾಟಿಯೇ ಸ್ವಾಮಿ, ನಾವು ಗರ್ಭಗುಡಿಗೆ ಬಂದಿರೋದು'' ಎಂದುಬಿಟ್ಟರು ಹಿರಿಯರೊಬ್ಬರು. ದಾಖಲಿಸುವ ಕೆಲಸ ಕಂಪ್ಯೂಟರ್ ಚಾಲನೆ ವಿಳಂಬದಿಂದ ನಿಧಾನವಾಗುತ್ತಿರುವ ಗತಿಗೆ ರೋಸಿಹೋದ ಕೆಲವರು, ''ಯಾರ್ರೀ ನಿಮಗೆಲ್ಲ ತರಬೇತಿ ಕೊಟ್ಟವರು ? ಎಷ್ಟು ಹೊತ್ತು ಮಾಡ್ತೀರೀ ?'' ಮಂತ್ರಕ್ಕಿಂತ ಉಗುಳೇ ಜಾಸ್ತಿಯಾಯಿತು ಎನ್ನುವಂತೆ ಕೂಗಾಡತೊಡಗಿದರು. ನನ್ನವರು ಸಂಧಾನಶೂರರು.




ಆರಡಿಯ ಅವರು ಕುಳಿತರೆ ನಿಂತಂತೆ ಕಾಣುವವರು, ಇನ್ನು ನಿಂತರೆ ಕೇಳಬೇಕೆ ? ಎಲ್ಲರಿಗೂ ಕೀಟಲೆ ಬೆರೆಸಿ ಸಮಾಧಾನ ಹೇಳಲು ಶುರು ಮಾಡಿದರು, ''ಕೂಗಾಡಬೇಡಿ, ಆಮೇಲೆ ಫೋಟೋ ಕೆಡಿಸಿಬಿಡ್ತಾರೆ ಅಷ್ಟೇ'' ಅಲ್ಲಿದ್ದವರೆಲ್ಲ ನಗತೊಡಗಿದರು. ಎದುರಿಗಿದ್ದ ನಮ್ಮ ಎಂ.ಎಲ್.ಎ. ಅವರ ಭಾವಚಿತ್ರವೂ, 'ಆಧಾರ್' ಬ್ಯಾನರ್ ಮೇಲೆ ನಗುತ್ತಲೇ ಇತ್ತು. ನಗಬೇಕು, ಸೈರಿಸಬೇಕು, ಸಹನೆ ಮುಖ್ಯ, ಇದು ಪ್ರಜಾಪ್ರಭುತ್ವ ಎಂಬ ಸಂದೇಶ ಸಾರುವಂತಿತ್ತು. ಅಷ್ಟು ಹೊತ್ತಿಗೆ ಇನ್ನೊಂದೆರಡು ಕಂಪ್ಯೂಟರ್‌ನಲ್ಲಿ ಬೆಳಕು ಕಂಡು, ಕಾರ್ಯೋನ್ಮುಖವಾಗುವ ಲಕ್ಷಣ ಕಾಣಿಸಿತು. ಅಷ್ಟೇ ಸಾಕು ನಮ್ಮ ಹಿಗ್ಗಿಗೆ. ಅಷ್ಟರಲ್ಲಿ ಒಬ್ಬ ಮಹಿಳೆ ಆಕರ್ಷಕವಾಗಿ ಅಲಂಕರಿಸಿಕೊಂಡು, ತನ್ನ ವೃತ್ತಿಯ ಐ.ಡಿ. ಕಾರ್ಡ್ ತೂಗುಹಾಕಿಕೊಂಡು, ತನ್ನೆರಡು ಮಕ್ಕಳು, ಮತ್ತೊಬ್ಬ ಸಖಿಯೊಡನೆ ಬಂದಳು. ಹೆಚ್ಚು ಪುರುಸೊತ್ತು ಇಲ್ಲದವಳೆನಿಸುತ್ತೆ. ಮುಂಚಿತವಾಗಿ ಹೇಳಿಟ್ಟಿದ್ದಳೇನೋ. ಆ ಆಧಾರ ಯೋಜನೆಯ ಸೇವಕನೊಬ್ಬ, ಹಲ್ಲು ಕಿರಿಯುತ್ತಾ ಓಡಿ ಹೋಗಿ, ಆ ದೇವಿಯ ಕೃಪಾದೃಷ್ಟಿಗೆ ಪಾತ್ರನಾಗಿ ಪುನೀತನಾದವನಂತೆ ನುಡಿದ : ''ಬನ್ನಿ ಮೇಡಂ, ಅಲ್ಲಿ ಮೊದಲ ಸಾಲಲ್ಲಿ ಆ ಕಡೆ ಕುಳಿತುಕೊಳ್ಳಿ'' ಎಂದು ನಾನು ಆಗಷ್ಟೇ ಬಿಟ್ಟುಬಂದಿದ್ದ ನನ್ನ ಪತಿಯ ಪಕ್ಕದ ಖಾಲಿ ಕುರ್ಚಿ ತೋರಿದ. ನನ್ನ ಗಂಡನೂ ಸೇರಿ, ಅಲ್ಲಿದ್ದವರೆಲ್ಲ ರೊಚ್ಚಿಗೆದ್ದರು : ''ಹೆಂಗ್ರೀ ಅವರನ್ನ ಈ ಸಾಲಿಗೆ ಸೇರಿಸ್ತೀರಿ ? ನಾವೆಲ್ಲ ಅಷ್ಟು ಹೊತ್ತಿನಿಂದ ಕಾಯ್ತಿದೀವಿ.'' ಅವನು ಈ ಪ್ರತಿಕ್ರಿಯೆ ನಿರೀಕ್ಷಿಸಿರಲಿಲ್ಲ. ತಬ್ಬಿಬ್ಬಾದವ ಮಾನ ಕಾಪಾಡಿಕೊಳ್ಳಲು ಹೇಳಿದ ನೀವೇ ಮಾಡಿಸಿಕೊಳ್ಳಿ ಸಾರ್, ಯಾರೂ ಕೂಗಾಡಬೇಡಿ, ಅವರು ನಿನ್ನೆಯೇ ಬಂದಿದ್ದರು. ಅದಕ್ಕೇ ಹಾಗೆ ಹೇಳಿದೆ, ಅಷ್ಟೆ. ಗುಂಪಿನಿಂದ ಇನ್ನೂ ನಾಲ್ಕು ದನಿಗಳು ಅರಚಿದವು, ''ನಾವೂ ಅಷ್ಟೇ, ನಿನ್ನೆ ಮೊನ್ನೆ ಎಲ್ಲ ಬಂದು, ಅಲೆದು, ಚಪ್ಪಲಿ ಸವೆದಿದೆ.'' ಅವನು ತಲೆ ತಗ್ಗಿಸಿ, ಹೊರಟೇಹೋದ. 'ಜನಶಕ್ತಿ' ಎಂದರೆ ಎಂತಹ ಪ್ರಬಲ ಅಸ್ತ್ರ ಎನಿಸಿತು ಆ ಒಂದು ಘಳಿಗೆ.

ನನ್ನ ವಿವರ ದಾಖಲಿಸಲು ಕುಳಿತಿದ್ದ ಕಂಪ್ಯೂಟರ್ ಯುವಕನನ್ನು ನಾನೊಂದು ಸಂದರ್ಶನ ಮಾಡಿಯೇ ಬಿಟ್ಟೆ. ನನ್ನ ಬಲಗೈನ ನಾಲ್ಕು ಬೆರಳುಗಳು ಅಚ್ಚು ಮೂಡಿಸಲು ಹಟ ಹಿಡಿಯುತ್ತಿದ್ದ ಸಮಯವನ್ನು ನಾನಿದಕ್ಕೆ ಬಳಸಿಕೊಂಡೆ. ಅವನು ತಮಗೆಲ್ಲ ವಿವರ ದಾಖಲಿಸಲು ತರಬೇತಿ ನೀಡಿದ್ದಾರೆಂದು, ಆ ಬಡಾವಣೆಯ ಒಂದು ಕಂಪ್ಯೂಟರ್ ಸಂಸ್ಥೆಗೆ ಈ ಯೋಜನೆಯ ಪರವಾನಗಿ ನೀಡಿದ್ದು, ಉಪಕರಣಗಳು ಅಲ್ಲಿಯದೇ ಎಂದು ಹೇಳಿದ. ಆ ವೇಳೆಗೆ ನನ್ನ ಎರಡು ಕರಗಳ ಬೆರಳಚ್ಚು ಮೂಡಿದೆಯೆಂದು ಕಂಪ್ಯೂಟರ್ ಒಪ್ಪಿಕೊಂಡಿದ್ದು, ಇನ್ನು ಫೋಟೋ ತೆಗೆಯುವ ಕಾರ್ಯಕ್ರಮ. ನಾನೆಷ್ಟು ದೃಢವಾಗಿ ಕೂತರೂ, ಕಂಪ್ಯೂಟರ್ ಪರದೆಯ ಮೇಲೆ ಸ್ಥಿರವಾಗದೆ ತೇಲುತ್ತಿರುವಂತೆ ಭಾಸವಾಗುತ್ತಿತ್ತು. ಆ ''ಕಂ ಯುವಕ'' ಹಾಗೇ ಹಿಡಿದುಬಿಟ್ಟ. ನನ್ನ ಚುನಾವಣೆ ಕಾರ್ಡ್ ಪಡೆದಿದ್ದವ, ವಿವರವನ್ನೆಲ್ಲ ಕಂಪ್ಯೂಟರ್‌ಗೆ ಉಣಿಸಿದ ''ಒಮ್ಮೆ ನೋಡಿ, ಸರಿ ಇದೆಯಾಂತ ?'' ಎಂದ. ನಾನು ಕಣ್ಣಲ್ಲಿ ಕಣ್ಣಿಟ್ಟು ಬಿಟ್ಟುಹೋಗಿದ್ದ ನಮ್ಮ ಮನೆಯ ಹೆಸರು 'ಹೊಂಗನಸು' ಸೇರಿಸಿದೆ. ಅದಂತೂ ಸೇರಿಸಲೇಬೇಕಾದ ವಿವರ, ಎಷ್ಟು ಕಷ್ಟಪಟ್ಟಿಲ್ಲ ಬೆಂಗಳೂರಿನಲ್ಲೊಂದು ಮಾಡಿರುವ ಗೂಡು ಹೊಂದಲು ! ಆಗಷ್ಟೇ ತೆಗೆದ ನನ್ನ ಫೋಟೋ ನೋಡಿದಾಗ ನನಗೆ ತೃಪ್ತಿ ಮೂಡಲಿಲ್ಲ. ಅಷ್ಟು ಚೆನ್ನಾಗಿ ಇಳಿ ಬೀಳಬೇಕಿದ್ದ ಮಲ್ಲಿಗೆಮಾಲೆ ನಾಪತ್ತೆಯಾಗಿದ್ದು, ನನ್ನಲ್ಲಿ ತೀವ್ರ ನಿರಾಸೆ ತಂದಿತು. ಆ ''ಕಂ ಯುವಕ''ನಿಗೆ ವಿಜ್ಞಾಪಿಸಿಕೊಂಡೆ, ''ಇನ್ನೊಂದು ಸಲ ಫೋಟೋ ತೆಗೀರಿ. ಇದ್ಯಾಕೋ ಸರಿಯಿಲ್ಲ. '' ಅವನೂ ಸಹಕರಿಸಿದ. ಹಿಂದೆ ಹೋಗಿ ಮರೆಯಾಗಿದ್ದ ಮಲ್ಲಿಗೆ ಮುಂದೆ ತಂದು ಬಲಕಿವಿಯ ಪಕ್ಕ ತೂಗಾಡಿಸಿದೆ. ಚೆನ್ನಾಗಿ ಕಂಡಿತು ಆ ಮಾಲೆ. ನೇರವಾಗಿ ಕಂಗಳು ಕಂಪ್ಯೂಟರ್ ನೋಡುತ್ತಿರುವಾಗ, ಆ ಕಂಪ್ಯೂಟರ್ ಎಂಬ ಆತ್ಮೀಯನನ್ನು ಕಂಡು ಒಂದು ಸಿರಿನಗೆ ತುಳುಕಿಸಿದೆ. ಅದು ಸೆರೆ ಹಿಡಿಯಿತು. ಫೋಟೋ ಚೆನ್ನಾಗಿ ಬಂತು. ''ಹಳೇದು ತೆಗೆದುಬಿಡಿ. ಇದಿರಲಿ'' ಎಂದಾಗ ''ಹಳೇದು ತೆಗೆದರಷ್ಟೇ, ಹೊಸದು ಅಲ್ಲಿ ಮೂಡೋದು'' ಎಂದು ಧೈರ್ಯ ಹೇಳಿದ. ನಾನವನಿಗೆ ಧನ್ಯವಾದ ಹೇಳಿ, ಫಾರಂಗೆ ಸಹಿ ಮಾಡಿ ಅವನು ಕೊಟ್ಟ ರಸೀತಿ ಪಡೆದು, ಉಳಿದವರತ್ತ ಜಂಭದ ನಗೆ ಬೀರುತ್ತಾ ಎದ್ದು ಹೊರಬಂದೆ. ಪತಿಯ ಕೈಯಲ್ಲೂ ಅಂತಹ ರಸೀತಿ ನಲಿದಾಡುತಿತ್ತು. ರಶೀತಿಯೊಳಗೆ, ಅಂದು ಕಂಪ್ಯೂಟರ್ ತೆಗೆದಿದ್ದ ನಮ್ಮ ಭಾವಚಿತ್ರವೂ ಸೇರಿತ್ತು. ''ನೋಡ್ರೀ, ನನ್ನ ಹೂ ಎಷ್ಟು ಚೆನ್ನಾಗಿ ಬಂದಿದೆ'' ಎಂದ ನನ್ನ ಮಾತಿಗೆ ಅವರು ಚುಡಾಯಿಸಿದರು, ''ಮುಖದ ಹತ್ರ ಕೈ ಎತ್ತಿ ಕಿವಿ ಹಿಡಿದಿದ್ದರೆ, ಈ ಕೆಂಪು ಗಾಜಿನ ಬಳೇನೂ ಬಂದಿರೋದು.''

ಮನೆ ತಲುಪುತ್ತಿದ್ದಂತೆ, ಬೀರು ತೆಗೆದು, ಆಯಸ್ಕಾಂತ ಶಕ್ತಿ ಉಳ್ಳ ಒಂದು ಉಡುಗೊರೆಯಾಗಿ ಬಂದ ಡಬ್ಬದಲ್ಲಿ ಎರಡು ರಸೀತಿ ಹುಗಿದು, ಮುಚ್ಚಿದರು. ಅದು ಅಲ್ಲಿ ಕಾಂತೀಯ ಆಕರ್ಷಣೆಯಲ್ಲಿ ಕಳೆದುಹೋಗದೆ ಹಾಗೇ ಇರಲೆಂದು.

**ಸಾಯಿಲಕ್ಷ್ಮಿ ಎಸ್.**
ಆಕಾಶವಾಣಿ, ರಾಜಭವನ ರಸ್ತೆ, ಬೆಂಗಳೂರು - ೫೬೦ ೦೦೧




# ಮಹಿಳಾ ಹೋರಾಟಗಾರ್ತಿಯ ವೀರಗಾಥೆ
# ವಿಶ್ವಮಹಿಳಾ ದಿನದ ರೂವಾರಿ ಕ್ಲಾರಾ ಜ಼ೆಟ್ಕಿನ್




ಕೃತಿ : **ವಿಶ್ವಮಹಿಳಾ ದಿನದ ರೂವಾರಿ ಕ್ಲಾರಾ ಜ಼ೆಟ್ಕಿನ್**
ಲೇಖಕರು : **ಡಾ|| ಎನ್. ಗಾಯತ್ರಿ**
ಪ್ರಕಾಶಕರು : **ಚಿಂತನ ಪುಸ್ತಕ**
ನಂ. ೪೦೫, ೧ನೇ ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ,
ಡಾಲರ್ಸ್ ಕಾಲೋನಿ, ಜೆ. ಪಿ. ನಗರ, ೪ನೇ ಫೇಸ್, ಬೆಂಗಳೂರು - ೭೮
ಪುಟಗಳು : **೧೧೮ + ೪** ಬೆಲೆ : **ರೂ. ೮೦-೦೦**

ಮಾರ್ಚ್ ೮ಅನ್ನು ಮಹಿಳಾ ದಿನಾಚರಣೆಯಾಗಿ ಪ್ರಪಂಚದಾದ್ಯಂತ ನೂರು ವರ್ಷಗಳಿಂದಲೂ ಆಚರಿಸಲಾಗುತ್ತಿದೆ. ಅಂದು ಸಭೆ ಸಮಾರಂಭಗಳಾಗುತ್ತವೆ. ಮಹಿಳೆಯರ ಸಮಾನತೆ, ಮಹಿಳಾ ವಿಮೋಚನೆ, ಮಹಿಳೆಯ ಹಕ್ಕುಗಳು ಮುಂತಾದ ವಿಷಯಗಳ ಕುರಿತು ಭಾಷಣಗಳ ಸುರಿಮಳೆಯಾಗುತ್ತದೆ. ಆದರೆ ಮಹಿಳೆಯರ ಸ್ಥಿತಿಗತಿಗಳು ಮಾತ್ರ ಇನ್ನೂ ಯಥಾಸ್ಥಿತಿ. ಇಂದು ಮಹಿಳೆಯರಿಗೆ ಕೆಲವು ಹಕ್ಕುಗಳು ಲಭಿಸಿದ್ದರೂ, ನಿಜವಾದ ವಿಮೋಚನೆಗೆ ಹೋರಾಟ ನಿರಂತರ. ಹತ್ತೊಂಬತ್ತು ಇಪ್ಪತ್ತನೇ ಶತಮಾನಗಳಲ್ಲಿ ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ನಡೆಸಿದ ಹೋರಾಟಗಳು, ಚಳವಳಿಗಳು ಚರಿತ್ರಾರ್ಹ. ಆ ಹಾದಿಯಲ್ಲೇ ಇಪ್ಪತ್ತೊಂದನೇ ಶತಮಾನದಲ್ಲೂ ಅದು ಮುಂದುವರಿಯುತ್ತಿದೆ. ಈ ಹೋರಾಟದ ಮುಂಚೂಣಿಯಲ್ಲಿ ನಿಂತ ಧೀಮಂತಿನಿಯರು ಹಲವರು. ಅಂಥವರಲ್ಲಿ ಒಬ್ಬರು ಜರ್ಮನಿಯ ಸಂಜಾತೆ ಕ್ಲಾರಾ ಜ಼ೆಟ್ಕಿನ್. ಈಕೆಯ ಹೋರಾಟದ ಬದುಕು, ಬರಹಗಳನ್ನು ಲೇಖಕಿ ಎನ್. ಗಾಯತ್ರಿಯವರು ನೂರು ಪುಟಗಳ ಕಿರುಹೊತ್ತಗೆಯಲ್ಲಿ ಮನಮುಟ್ಟುವಂತೆ ಕಟ್ಟಿಕೊಟ್ಟಿದ್ದಾರೆ.

ಅಂದಿನ ಜರ್ಮನಿಯ ಅತ್ಯಂತ ಪ್ರಭಾವಿ ರಾಜಕಾರಣಿ, ಮಹಿಳಾ ಹಕ್ಕುಗಳ ಪ್ರತಿಪಾದಕಿ ಕ್ಲಾರಾ ಜ಼ೆಟ್ಕಿನ್ ವಿಶ್ವ ಮಹಿಳಾ ದಿನಾಚರಣೆಯ ಪರಿಕಲ್ಪನೆಯನ್ನು ಹುಟ್ಟುಹಾಕಿದ ಮಹಿಳಾ ಹೋರಾಟಗಾರ್ತಿ. ಲೇಖಕಿಯ ಮಾತುಗಳಲ್ಲೇ ಹೇಳಬೇಕೆಂದರೆ ಈಕೆ, ''ಚರಿತ್ರೆಯಲ್ಲಿ ಅಮರವಾಗಿ ನಾಮಾಂಕಿತಳಾದವಳು. ಈಕೆ ಜರ್ಮನಿಯ ಹೆಮ್ಮೆಯ ಸ್ತ್ರೀಯಾಗಿರುವಷ್ಟೇ ಇಡೀ ವಿಶ್ವದ ಮಹಿಳಾ ಹಕ್ಕುಗಳ ಹೋರಾಟಗಾರ್ತಿಯರಿಗೆ ಧ್ರುವ ನಕ್ಷತ್ರದಂತೆ ದಾರಿದೀಪವಾದವಳು.''

ಶಿಕ್ಷಕ ತರಬೇತಿ ಪಡೆದ ಪ್ರಥಮ ಮಹಿಳೆ ಎನಿಸಿಕೊಂಡ ಈಕೆ ಜರ್ಮನಿಯಲ್ಲಿ ಸಮಾಜವಾದಿ ಚಳವಳಿಯ ಸಕ್ರಿಯ ಕಾರ್ಯಕರ್ತೆ. ಪತಿ ಓಸಿಪ್ ಜ಼ೆಟ್ಕಿನ್ ಸಂಗದಿಂದ ಮಾರ್ಕ್ಸ್‌ವಾದದ ಪರಿಚಯ ಮಾಡಿಕೊಂಡ ಈಕೆ ಕೊನೆಯವರೆಗೂ ಕಮ್ಯುನಿಸ್ಟ್ ಕಾರ್ಯಕರ್ತೆಯಾಗಿ ದುಡಿದ ಮಹಿಳೆ. ೧೮೮೯ರಲ್ಲಿ ಪ್ಯಾರಿಸ್‌ನಲ್ಲಿ ನಡೆದ ಎರಡನೆಯ ಅಂತರರಾಷ್ಟ್ರೀಯ ಕಾಂಗ್ರೆಸ್‌ನ ಸ್ಥಾಪನಾ ಸಮಾವೇಶದ ಸಂಘಟಕರಲ್ಲಿ ಒಬ್ಬರಾಗಿದ್ದ ಕ್ಲಾರಾ ಜ಼ೆಟ್ಕಿನ್ ಪ್ರಾಂತೀಯ ಅಂತರರಾಷ್ಟ್ರೀಯ ಕಾರ್ಯದರ್ಶಿಯಾಗಿ ಕೆಲಸ ಮಾಡಿದವರು. ಜರ್ಮನಿಯ ಸೋಷಿಯಲ್ ಡೆಮಾಕ್ರಟಿಕ್ ಪಕ್ಷದ ಕಾರ್ಯಕರ್ತೆಯಾಗಿ, ನಾಯಕಿಯಾಗಿ ಮಹಿಳಾಪರ ಹೋರಾಟಗಳ ಮುಂಚೂಣಿಯಲ್ಲಿದ್ದ ಈಕೆ ಪತ್ರಕರ್ತೆ ಕೂಡ. ಆಕೆ ನಡೆಸುತ್ತಿದ್ದ ಪತ್ರಿಕೆ ಪ್ರಸಾರದ ಸಂಖ್ಯೆ ಹತ್ತು ವರ್ಷಗಳಲ್ಲಿ ೧೧,೦೦೦ದಿಂದ ೧,೨೫,೦೦೦ಕ್ಕೆ ಏರಿತ್ತು. ಬೂರ್ಷ್ವಾ ಮಹಿಳೆಯರ ಹೋರಾಟದ ಸೀಮಿತವಾದ ಗುರಿ ಮತದಾನದ ಹಕ್ಕಿನ ಪ್ರತಿಪಾದನೆಯನ್ನು ದಾಟಿ 'ಸಮಾಜವಾದವು ವಿಜಯಿಯಾಗಬೇಕಾದರೆ ಅದು ಶ್ರಮಿಕ ಮಹಿಳೆಯರ ಹೋರಾಟದಿಂದ ಮಾತ್ರ ಸಾಧ್ಯ' ಎಂಬ ಸೈದ್ಧಾಂತಿಕ ನಿಲುವನ್ನು ಮಂಡಿಸಿದ ಕೀರ್ತಿ ಆಕೆಗೆ ಸಲ್ಲುತ್ತದೆ. ೧೯೨೦ರಿಂದಲೂ ಜರ್ಮನಿಯ ಪಾರ್ಲಿಮೆಂಟಾದ ರೈಶ್‌ಸ್ಟಾಗ್‌ಗೆ ಆಯ್ಕೆಯಾಗುತ್ತಿದ್ದ ಕ್ಲಾರಾ ಜರ್ಮನಿಯ ರಾಜಕಾರಣದಲ್ಲಿ ಅತ್ಯಂತ ಪ್ರಭಾವಿ ಮಹಿಳೆ. ಹಿಟ್ಲರನ ನ್ಯಾಷನಲ್ ಸೋಷಲಿಸ್ಟ್ ಪಾರ್ಟಿ ಪ್ರಾಬಲ್ಯ ಹೆಚ್ಚಿದ ಮೇಲೆ ಈಕೆ ತಾಯ್ನಾಡನ್ನು ತ್ಯಜಿಸಿ ರಷ್ಯಾದಲ್ಲಿ ನೆಲೆಸಿದರು. ತನ್ನ ೭೬ನೇ ವಯಸ್ಸಿನವರೆಗೂ ಅವಿಶ್ರಾಂತವಾಗಿ ಮಹಿಳಾಪರ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ ಈಕೆ ಅಲ್ಲಿಯೇ ಕೊನೆಯುಸಿರೆಳೆದರು.

ಅಂತರರಾಷ್ಟ್ರೀಯ ಮಹಿಳಾ ಸೆಕ್ರೆಟೇರಿಯಟ್‌ನ ಸದಸ್ಯೆಯಾಗಿದ್ದ ಕ್ಲಾರಾ ಜ಼ೆಟ್ಕಿನ್ ಡೆನ್ಮಾರ್ಕ್‌ನ ರಾಜಧಾನಿ ಕೋಪೆನ್ ಹೇಗನ್‌ನಲ್ಲಿ ನಡೆದ ಎರಡನೆಯ ಅಂತರರಾಷ್ಟ್ರೀಯ ಸೋಷಲಿಸ್ಟ್ ಮಹಿಳಾ ಸಮ್ಮೇಳನದಲ್ಲಿ ಮಹಿಳಾ ದಿನಾಚರಣೆಯ ಪರಿಕಲ್ಪನೆಯನ್ನು ಮಂಡಿಸಿ, ಮಾರ್ಚ್ ೮ನ್ನು ಅಂತರರಾಷ್ಟ್ರೀಯ ಮಹಿಳಾ ದಿನವನ್ನಾಗಿ ಆಚರಿಸಬೇಕೆಂಬ ತೀರ್ಮಾನಕ್ಕೆ ಅಂಗೀಕಾರ ಪಡೆದುಕೊಂಡರು. ಅಂದಿನಿಂದ ಈ ದಿನಾಚರಣೆ ನಡೆದುಕೊಂಡು ಬಂದಿದೆ.

ತಮ್ಮ ಜೀವಿತ ಕಾಲದಲ್ಲಿ ಮಹಿಳಾಪರವಾದ ಅನೇಕ ಹೋರಾಟಗಳಲ್ಲಿ ಪಾಲ್ಗೊಂಡಿದ್ದ ಈಕೆ ರಷ್ಯಾದ ಮಹಾಕ್ರಾಂತಿಯ ನಾಯಕ ಲೆನಿನ್ ಜೊತೆ ಮಹಿಳಾ ಪ್ರಶ್ನೆಯ ಬಗ್ಗೆ ಆಗಾಗ್ಗೆ ನಡೆಸಿದ ವಿಚಾರ ವಿನಿಮಯವನ್ನು ಕ್ಲಾರಾ ದಾಖಲಿಸಿದ್ದಾರೆ. ಅದರ ಆಯ್ದ ಭಾಗಗಳನ್ನು ಈ ಕಿರುಹೊತ್ತಗೆಯಲ್ಲಿ ನೀಡಿರುವುದು ಸ್ವಾಗತಾರ್ಹ. ಮಹಿಳೆಯರ ಹಕ್ಕುಗಳಿಗಾಗಿ ನಡೆದಿರುವ, ನಡೆಯುತ್ತಿರುವ, ಮುಂದೆ ನಡೆಯುವ ಹೋರಾಟಗಳಲ್ಲಿ ಆಸಕ್ತರಾಗಿರುವವರೆಲ್ಲರೂ ಓದಲೇಬೇಕಾದ ಪುಸ್ತಕ ಇದು. ಲಭ್ಯವಿರುವ ಎಲ್ಲ ಆಕರಗಳನ್ನು ಅಧ್ಯಯನ ಮಾಡಿ ಲೇಖಕಿ ಅತ್ಯಂತ ಆಪ್ತವಾದ ರೀತಿಯಲ್ಲಿ ಕ್ಲಾರಾ ಜ಼ೆಟ್ಕಿನ್‌ರ ಹೋರಾಟದ ಬದುಕನ್ನು ನಮಗೆ ಒದಗಿಸಿದ್ದಾರೆ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್ ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



# ಭಾರತದ ಭೂಪಟವನ್ನು ಒಮ್ಮೆ ನೋಡುತ್ತಾ ಹೋಗಿ

**ಡಾ|| ಎಂ. ವೆಂಕಟಸ್ವಾಮಿ**

ಬ್ರಹ್ಮಾಂಡದಲ್ಲಿ ತುಸು ದುಂಡಾಗಿ, ತುಸು ಓರೆಯಾಗಿ (ಇಪ್ಪತ್ತಮೂರೂವರೆ ಡಿಗ್ರಿ) ಸೂರ್ಯನ ಸುತ್ತು ಗಿರಕಿ ಹೊಡೆಯುತ್ತಿರುವ ಗ್ಲೋಬನ್ನು ನಿಮ್ಮ ಮೇಜಿನ ಮೇಲೆ ಇಟ್ಟುಕೊಂಡು ಇಂಗ್ಲೆಂಡ್ ದೇಶದ ಮಧ್ಯೆ ಉತ್ತರ-ದಕ್ಷಿಣ ದಿಕ್ಕಿನ 'ಗ್ರೀನ್‌ವಿಚ್' ಗೆರೆಯಿಂದ ನಿಧಾನವಾಗಿ ತಿರುಗಿಸುತ್ತಾ ಹೋಗಿ. ಪೆಸಿಫಿಕ್ ಸಮುದ್ರ, ಸಮುದ್ರದ ನಡುವೆ ಜಪಾನ್, ಉತ್ತರ ಕೊರಿಯಾ, ದಕ್ಷಿಣ ಕೊರಿಯಾ, ಹಲವಾರು ಸಣ್ಣಪುಟ್ಟ ದ್ವೀಪಗಳು, ಚೀನಾ ದೇಶ ಅನಂತರ ನಿಧಾನವಾಗಿ ಭಾರತದ ಭೂಪಟ ಸ್ವಲ್ಪ ಓರೆಯಾಗಿ ಗ್ಲೋಬಿನ ಮೇಲೆ ಪೂರ್ವ ದಿಕ್ಕಿಗೆ ತನ್ನ ಎಡಕ್ಕೆ ತೋರಿಸುತ್ತ ಕಾಣಿಸಿಕೊಳ್ಳುತ್ತದೆ. ಭಾರತದ ಕೆಳಗೆ ಹಿಂದೂ ಮಹಾಸಾಗರದ ಮೇಲೆ ಭೂಮಧ್ಯರೇಖೆ ಹಾದುಹೋಗಿರುವುದು ಕಾಣಿಸುತ್ತದೆ. ಭೂಮಧ್ಯರೇಖೆಯ ಸುತ್ತಳತೆ ೧೨,೭೫೬.೩ ಕಿ.ಮೀಟರು. ಭೂಮಿಯ ಉತ್ತರ ಧ್ರುವದಿಂದ ದಕ್ಷಿಣ ಧ್ರುವದ ಮೇಲೆ ಗೆರೆ ಎಳೆದಾಗ ಅದರ ಸುತ್ತಳತೆ ೧೨,೭೧೩.೮ ಕಿ.ಮೀಟರು. ಭೂಮಿಯ ಒಟ್ಟು ಭೂವಿಸ್ತೀರ್ಣ ೫೧೦ ಮಿಲಿಯ ಚದರ ಕಿ.ಮೀಟರುಗಳು.

ಈಗ ಭಾರತ ಅಥವಾ ಇಂಡಿಯಾದ ಭೂಪಟವನ್ನು ತದೇಕಚಿತ್ತದಿಂದ ನೋಡುತ್ತಾ ಹೋಗಿ. ಐದು ಸಾವಿರ ವರ್ಷಗಳ ಇತಿಹಾಸದ ಹರಪ್ಪ-ಮೊಹೆಂಜದಾರೊ ಸಿಂಧು ನಾಗರಿಕ ತೊಟ್ಟಿಲುಗಳ ಮೂಲಕ ಪ್ರಪಂಚದ ನಾಗರಿಕ ತೊಟ್ಟಿಲುಗಳ ಜೊತೆಗೆ ಸಂಪರ್ಕ ಬೆಳೆಸಿಕೊಂಡಿದ್ದ ದೇಶ ನಮ್ಮದು. ಹಿಂದೂ, ಬೌದ್ಧ, ಜೈನ ಮತ್ತು ಸಿಖ್ ಧರ್ಮಗಳು ಹುಟ್ಟಿದ ದೇಶ ಭಾರತ. ಕ್ರೈಸ್ತ, ಮುಸಲ್ಮಾನ ಇನ್ನಿತರ ಧರ್ಮಗಳನ್ನು ಸಹಿಸಿಕೊಂಡು ಬಂದ ದೇಶವೂ ಹೌದು. ಇಂಡೋ-ಆರ್ಯನ್, ದ್ರಾವಿಡ, ಆಸ್ಟ್ರೋ-ಏಷ್ಯಾ, ಟಿಬೆಟ್-ಬರ್ಮನ್ ಭಾಷೆಗಳಿರುವ ಭಾರತ ಒಂದು ದೇಶ ಮಾತ್ರ ಅಲ್ಲ, ಅದೊಂದು ಉಪಖಂಡವೂ ಹೌದು. ಸಂವಿಧಾನದಲ್ಲಿ ಮಾನ್ಯತೆ ಪಡೆದ ೨೧ ಭಾಷೆಗಳ ಜೊತೆಗೆ ೨೧೨ ಬುಡಕಟ್ಟು ಭಾಷೆಗಳನ್ನು ಮಾತನಾಡುವ ಜನಾಂಗಗಳು ಇಲ್ಲಿ ನೆಲೆಸಿವೆ. ವೈವಿಧ್ಯಮಯ ಕಲೆಗಳು, ವೇದ ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಪುರಾಣಗಳ ತವರೂರು, ಸಂಗೀತಗಳ ಬೀಡು ಹೀಗೆ ಭವ್ಯ ಪರಂಪರೆಯುಳ್ಳ ದೇಶ ಭಾರತ.




ಋತುಗಳಲ್ಲಿ ವಾಯವ್ಯ ದಿಕ್ಕಿನಿಂದ ಬರುವ ಮುಂಗಾರು, ಈಶಾನ್ಯ ದಿಕ್ಕಿನಿಂದ ಬರುವ ಹಿಂಗಾರು ಮೋಡಗಳ ತಡೆಹಿಡಿದು ಮಳೆ ಸುರಿಸುವ ದಟ್ಟ ಹಸಿರು ಪರ್ವತ ಶ್ರೇಣಿಗಳು, ಉತ್ತರದಲ್ಲಿ ಶತ್ರುಗಳ ತಡೆಹಿಡಿದು ನಿಲ್ಲಿಸುವ

ಐದು ಸಾವಿರ ವರ್ಷಗಳಿಂದ ಕಟ್ಟಿದ ನಾಗರಿಕ ತೊಟ್ಟಿಲುಗಳು, ಗುಡಿಗೋಪುರ ಭಕ್ತಿ ಭಂಡಾರಗಳು, ಕೋಟೆಕೊತ್ತಲಗಳ ಪ್ರಖ್ಯಾತ ಸ್ಮಾರಕಗಳು ಇವೆ. ಇದರ ಜೊತೆಗೆ ದೇಶದಾದ್ಯಂತ ದಿನಾ ಬೆಳಿಗ್ಗೆ ರಂಗುರಂಗಿನ ಹಬ್ಬ ಹರಿದಿನಗಳು, ಜಾತ್ರೆಗಳು ನಡೆಯುತ್ತಾ ಬಂದಿವೆ. ವಿಭಿನ್ನ ಜನಸಮುದಾಯಗಳ ನಡುವೆ ವೈವಿಧ್ಯಮಯ ಸಂಗೀತ ಕಲೆಗಳಿಂದ ದೇಶ ಸಮೃದ್ಧವಾಗಿ ಬೆಳೆದುನಿಂತಿದೆ. ದೊಡ್ಡ ದೊಡ್ಡ ಅಣೆಕಟ್ಟುಗಳ ಜೊತೆಗೆ ಫಲವತ್ತಾದ ಭೂಮಿ, ಕೈಗಾರಿಕೆ, ಐಟಿಬಿಟಿ ಕಂಪನಿಗಳು. ಜ್ಞಾನ, ವಿಜ್ಞಾನ ತಂತ್ರಜ್ಞಾನ ಕೇಂದ್ರಗಳು. ಇಂಧನ-ಅನಿಲ, ಇದ್ದಿಲು, ಕಬ್ಬಿಣ, ಮ್ಯಾಂಗನೀಸ್, ಬಾಕ್ಸೈಟ್, ಮೈಕಾ, ನಿಕಲ್, ಗ್ರಾನೈಟ್ ನಿಕ್ಷೇಪಗಳೂ ಇವೆ. ಲಕ್ಷ ಲಕ್ಷ ಟನ್ನುಗಳ ದವಸ ಧಾನ್ಯ, ಹಣ್ಣು ತರಕಾರಿ ಮತ್ತು ವೈವಿಧ್ಯಮಯ ಹೂಗಳನ್ನು ಬೆಳೆಯಲಾಗುತ್ತದೆ. ಹೇರಳ ಸಮುದ್ರ ಸಂಪತ್ತು ಇದೆ.

ಹಿಮಾಲಯಗಳು. ಜಮ್ಮು-ಕಾಶ್ಮೀರ, ಘಡ್‌ವಾಲ್, ಈಶಾನ್ಯ ಭಾಗದ ಕಾಡುಗಳು, ಪೂರ್ವ ಪಶ್ಚಿಮ ಘಟ್ಟಗಳು, ವಿಂಧ್ಯಾಚಲ ನಲ್ಲಮಲ್ಲೈ ಕಾಡುಗಳು, ಪಶ್ಚಿಮ ಬಂಗಾಳದ ಮ್ಯಾಂಗ್ರೋವ್ ಕಾಡುಗಳು, ನೂರಾರು ತಂಪು ಗಿರಿಧಾಮಗಳು. ೭೦,೦೦೦ ಚದರ ಕಿ.ಮೀಟರುಗಳ ಥಾರ್, ಕಚ್ಛ್ ಮರುಭೂಮಿಗಳು. ಪ್ರಪಂಚದಲ್ಲಿಯೇ ಹೆಚ್ಚು ಮಳೆ ಬೀಳುವ ಮೇಘಾಲಯದ ಚಿರಾಪುಂಜಿ-ಮಹಿಸಿನ್‌ರ್‍ರಾಮ್ ಪ್ರದೇಶಗಳು, ಎಲ್ಲವೂ ಈ ದೇಶದ ವಿಶೇಷಗಳು. ಹೀಗೆ ಭಾರತೀಯರ ಸೇವೆ ಮಾಡುತ್ತ ಸಾಗಿ ಬಂದಿರುವ ಈ ಭಾರತದ ಭೌಗೋಳಿಕ-ಭೂಪಟದ ಭೂವೈಜ್ಞಾನಿಕ ಚರಿತ್ರೆಯೇ ಒಂದು ಅದ್ಭುತ ಕತೆ.

ಪಂಜಾಬ್‌ನಿಂದ (ಪಶ್ಚಿಮ) ಅರುಣಾಚಲ ಪ್ರದೇಶದವರೆಗೂ (ಪೂರ್ವ) ೨,೪೦೦ ಕಿ.ಮೀಟರುಗಳ ಉದ್ದ, ೧೫೦ರಿಂದ ೪೦೦ ಕಿ.ಮೀಟರುಗಳ ಅಗಲವಾಗಿ ಭೂಮಿಯ ಮೇಲೆ ಹಾಸಿಕೊಂಡಿರುವ ಅತಿ ಎತ್ತರದ (೨೯,೦೩೫ ಅಡಿಗಳ ಎತ್ತರದ) ಹಿಮಾಲಯ ಪರ್ವತಗಳು ಭಾರತದ ಮುಂಚೂಣಿಯಲ್ಲಿ ನಿಂತಿವೆ. ಈ ಹಿಮಶಿಖರಗಳಿಂದ ಉದ್ಭವಿಸಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ಗಂಗಾ-ಯಮುನಾ-ಬ್ರಹ್ಮಪುತ್ರಾ ನದಿಗಳು. ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ಸಿಂಧೂ-ರಾವಿ-ಸಟ್ಲೆಜ್ ನದಿಗಳು. ಮಧ್ಯ ಭಾರತದ ಪರ್ವತಗಳಲ್ಲಿ ಹುಟ್ಟಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ಕೃಷ್ಣಾ, ಗೋದಾವರಿ, ಕಾವೇರಿ ನದಿಗಳು. ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ನರ್ಮದಾ, ಮಾಂಡೋವಿ ನದಿಗಳು. ಲೂನಾರ್, ಸಿಲ್ಕಾ, ದಾಲ್ ಸರೋವರಗಳು. ಹೀಗೆ ಸಾವಿರಾರು ನದಿ, ಸರೋವರಗಳು ಭೂಪಟದ ತುಂಬ ಸುಂದರವಾಗಿ ಹರಿದಾಡುತ್ತ ಜನರ ಬದುಕಿನ ಜೀವನಾಡಿಗಳಾಗಿವೆ.

ಹಿಮಾಲಯ ಪರ್ವತ ಶ್ರೇಣಿಯ ಕೆಳಗೆ ಉತ್ತರದಲ್ಲಿ ಅಗಾಧವಾದ ಸಿಂಧೂ-ಗಂಗಾ ಬಯಲುಗಳು; ಮಧ್ಯ-ಪಶ್ಚಿಮದಲ್ಲಿ ದಖ್ಖನ್ ಟ್ರ್ಯಾಪ್ ಶಿಲೆಗಳು, ಮಧ್ಯ ಭಾರತದಲ್ಲಿ ಗೊಂಡ್ವಾನಾ-ವಿಂಧ್ಯದ/ಪೆನಿನ್‌ಸುಲಾರ್ ಪ್ರಸ್ಥ ಗಟ್ಟಿ ಭೂಮಿ. ಬೆಟ್ಟ-ಗುಡ್ಡ, ಕಾಡು-ಕಣಿವೆ, ಅಂಕು-ಡೊಂಕು ನದಿ-ಝರಿಗಳು, ಮಧ್ಯೆ ಮಧ್ಯೆ ಬಯಲು ಪ್ರದೇಶಗಳು. ಗಿರಿತಪ್ಪಲು ಕಣಿವೆಗಳು, ಗಿಡಮರ ಹರಿದ್ವರ್ಣ ದಟ್ಟ ಕಾಡುಗಳು. ದೇಶದ ಮೂರು ದಿಕ್ಕುಗಳನ್ನೂ ಸುತ್ತುವರಿದಿರುವ ೭,೫೧೭ ಕಿ.ಮೀಟರು ಉದ್ದದ ಕಡಲ ದಂಡೆಗಳು. ಅರಬ್ಬೀ ಸಮುದ್ರದ ಮಧ್ಯದಲ್ಲಿರುವ ೫೭೨ ಅಂಡಮಾನ್-ನಿಕೋಬಾರ್ ದ್ವೀಪ ಸಮೂಹಗಳು, ಪ್ರಪಂಚದ ಪುರಾತನ ಬುಡಕಟ್ಟು ಸಮೂಹಗಳು. ಭೂಪಟದ ಮೇಲೆಲ್ಲ ವೈವಿಧ್ಯಮಯ ಸಸ್ಯ ಶ್ಯಾಮಲೆ-ಪ್ರಾಣಿ ಸಂಕುಲ. ಎಲ್ಲವೂ ಈ ದೇಶದ ಭೂಪಟದ ಮೇಲೆ ಕಾಣಿಸುತ್ತವೆ.

* * *

ನಮ್ಮ ದೇಶ ಒಟ್ಟು ೩೨,೮೭,೨೬೩ ಚದರ ಕಿ.ಮೀ. ವಿಸ್ತೀರ್ಣವಾಗಿದ್ದು, ೨೮ ರಾಜ್ಯಗಳು ೭ ಕೇಂದ್ರಾಡಳಿತ ಪ್ರದೇಶಗಳು, ನೂರಾರು ಪಟ್ಟಣಗಳು, ಐದು ಲಕ್ಷಕ್ಕಿಂತ ಹೆಚ್ಚು ಗ್ರಾಮಗಳಿಂದ ಕೂಡಿದೆ. ಐದು ಸಾವಿರ ವರ್ಷಗಳಿಂದ ಕಟ್ಟಿದ ನಾಗರಿಕ ತೊಟ್ಟಿಲುಗಳು, ಗುಡಿಗೋಪುರ ಭಕ್ತಿ ಭಂಡಾರಗಳು, ಕೋಟೆಕೊತ್ತಲಗಳ ಪ್ರಖ್ಯಾತ ಸ್ಮಾರಕಗಳು ಇವೆ. ಇದರ ಜೊತೆಗೆ ದೇಶದಾದ್ಯಂತ ದಿನಾ ಬೆಳಿಗ್ಗೆ ರಂಗುರಂಗಿನ ಹಬ್ಬ ಹರಿದಿನಗಳು, ಜಾತ್ರೆಗಳು ನಡೆಯುತ್ತಾ ಬಂದಿವೆ. ವಿಭಿನ್ನ ಜನಸಮುದಾಯಗಳ ನಡುವೆ ವೈವಿಧ್ಯಮಯ ಸಂಗೀತ ಕಲೆಗಳಿಂದ ದೇಶ ಸಮೃದ್ಧವಾಗಿ ಬೆಳೆದುನಿಂತಿದೆ. ದೊಡ್ಡ ದೊಡ್ಡ ಅಣೆಕಟ್ಟುಗಳ ಜೊತೆಗೆ ಫಲವತ್ತಾದ ಭೂಮಿ, ಕೈಗಾರಿಕೆ, ಐಟಿಬಿಟಿ ಕಂಪನಿಗಳು. ಜ್ಞಾನ, ವಿಜ್ಞಾನ ತಂತ್ರಜ್ಞಾನ ಕೇಂದ್ರಗಳು. ಇಂಧನ-ಅನಿಲ, ಇದ್ದಿಲು, ಕಬ್ಬಿಣ, ಮ್ಯಾಂಗನೀಸ್, ಬಾಕ್ಸೈಟ್, ಮೈಕಾ, ನಿಕಲ್, ಗ್ರಾನೈಟ್ ನಿಕ್ಷೇಪಗಳೂ ಇವೆ. ಲಕ್ಷ ಲಕ್ಷ ಟನ್ನುಗಳ ದವಸ ಧಾನ್ಯ, ಹಣ್ಣು ತರಕಾರಿ ಮತ್ತು ವೈವಿಧ್ಯಮಯ ಹೂಗಳನ್ನು ಬೆಳೆಯಲಾಗುತ್ತದೆ. ಹೇರಳ ಸಮುದ್ರ ಸಂಪತ್ತು ಇದೆ.

ಇನ್ನು, ಭೂಪಟದ ಮೇಲೆ ಹರಡಿ ಹಾಸಿಕೊಂಡಿರುವ ರೈಲು ರಸ್ತೆ ಮತ್ತು ಹೆದ್ದಾರಿ ರಸ್ತೆಗಳ ಜಾಲವನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಪರ್ವತ, ಘಟ್ಟಗಳನ್ನು ಕೊರೆದು ನಿರ್ಮಿಸಿರುವ ಸಾವಿರಾರು ಸುರಂಗಗಳು ಈ ರಸ್ತೆಗಳಲ್ಲಿ ದೊರಕುತ್ತವೆ. ಪ್ರಪಂಚದಲ್ಲೆ ಬೃಹತ್ತಾದ, ಪ್ರತಿ ದಿನವೂ ೬೩,೩೨೭ ಕಿ.ಮೀಟರುಗಳ ಉದ್ದದ ರೈಲು ರಸ್ತೆಗಳಲ್ಲಿ೧೮೦ ಲಕ್ಷ ಜನರನ್ನು ಹೊತ್ತು೯,೦೦೦ ರೈಲುಗಳು ಓಡಾಡುತ್ತವೆ. ಈ ರೈಲು ರಸ್ತೆಗಳ ನಡುವಿನ ಸಂಪರ್ಕಕ್ಕೆ ದೇಶದಾದ್ಯಂತ೯,೯೦೯ ರೈಲು ನಿಲ್ದಾಣಗಳ ಜಾಲವೇ ಇದೆ. ಇನ್ನು ಹಳ್ಳಿ, ಪಟ್ಟಣ, ಜಿಲ್ಲಾ ಕೇಂದ್ರ, ರಾಜ್ಯ ಮತ್ತು ರಾಷ್ಟ್ರೀಯ ಹೆದ್ದಾರಿ ರಸ್ತೆಗಳ ಒಟ್ಟು ದೂರ ೩,೩೧,೪೦೦ ಕಿ.ಮೀಟರುಗಳು. ಇದರಲ್ಲಿ ಚತುಷ್ಕೋಣ ಎಕ್ಸ್‌ಪ್ರೆಸ್ ಕಾರಿಡಾರ್‌ಗಳೊಂದಿಗೆ ೬೫,೫೨೯ ಕಿ.ಮೀಟರುಗಳ ದೂರದ ೧೫೩ ರಾಷ್ಟ್ರೀಯ ಹೆದ್ದಾರಿಗಳೂ ಸೇರಿವೆ.

ನಾನೊಬ್ಬ ಅಸಾಮಾನ್ಯ ದೇಶಭಕ್ತನೂ ಅಲ್ಲ, ದೇವರು ದಿಂಡರು ಎಂದುಕೊಂಡು ಕುರುಡು ನಂಬಿಕೆ ಇಟ್ಟುಕೊಂಡು ಗುಡಿಗುಂಡಾರಗಳನ್ನು ಅರಸಿ ಹೋಗುವವನೂ ಅಲ್ಲ, ಆದರೆ ನಮ್ಮ ದೇಶದ ಭೂಪಟ/ನಕ್ಷೆ ಹಿಡಿದು ಭೂವಿಜ್ಞಾನಿಯಾಗಿ ಕಾಶ್ಮೀರದಿಂದ -ಕನ್ಯಾಕುಮಾರಿಯವರೆಗೂ, ಗುಜರಾತ್‌ನಿಂದ-ಅರುಣಾಚಲ ಪ್ರದೇಶದವರೆಗೂ, ಹಿಮಾಲಯ ಪರ್ವತಗಳು, ಪೂರ್ವ-ಪಶ್ಚಿಮ ಘಟ್ಟಗಳು, ಕಚ್ಛ್-ಥಾರ್ ಮರುಭೂಮಿ, ಅಂಡಮಾನ್-ನಿಕೋಬಾರ್ ದ್ವೀಪಗಳು-ದೇಶದ ಕಡಲ ದಂಡೆಗಳು; ಪಾಕಿಸ್ತಾನದಿಂದ ಬರ್ಮಾ ಚೀನಾ ಗಡಿಗಳವರೆಗೂ ಓಡಾಡಿದ್ದೇನೆ. ನಿಜ ಹೇಳಬೇಕೆಂದರೆ ಪ್ರಪಂಚದ ೧೯೪ ದೇಶಗಳ ನಕ್ಷೆಗಳಲ್ಲಿ ಭಾರತದ ಭೂಪಟ ಮಾತ್ರ ಯಾಕೋ ಏನೋ ನನಗೆ ಬಹಳ ಆಕರ್ಷಕ ಮತ್ತು ಸುಂದರವಾಗಿ ಕಾಣಿಸುತ್ತದೆ. ಬೇಕಿದ್ದರೆ ಭಾರತದ ಭೂಪಟವನ್ನೊಮ್ಮೆ ನೀವೂ ಕೂಡ ತದೇಕ ಚಿತ್ತದಿಂದ ನೋಡುತ್ತಾ ಹೋಗಿ.

**ಡಾ|| ಎಂ. ವೆಂಕಟಸ್ವಾಮಿ**
ನಂ. ೫೧೯, ೩೯ನೇ ಬ್ಲಾಕ್, ಸಿ.ಪಿ.ಡಬ್ಲ್ಯೂ.ಡಿ. ಕಾಂಪ್ಲೆಕ್ಸ್
ಎಚ್.ಎಸ್.ಆರ್. ಬಡಾವಣೆ, ಬೆಂಗಳೂರು - ೫೬೦ ೧೦೨

## ಸಂಡೂರಿನ ಚಿತ್ರಗಳು



ರೈಲು ಡಬ್ಬಿಗೆ
ಅದಿರು ತುಂಬುವ ಹುಡುಗ

ಲಾರಿ
ಓಡಿಸುವ ಡ್ರೈವರ್‍ರು

ಟಿಪ್ಪರಿನ
ಕ್ಲೀನರ್‍ರು...

ಟೀಬಿ
ಆಸುಪತ್ರಿಯ ಸಾಲಿನಲ್ಲಿ
ನಿಂತಿದ್ದ ತುಂಬು ಗರ್ಭಿಣಿ

ಮತ್ತು

ಹೊಲದೊಡೆಯ...

ಗಂಡಿನರಸಿಂಹನ
ದೇಗುಲದ ಮುಂದೆ
ಸಿಲವಾರದ ಗಂಗಾಳಗಳೊಂದಿಗೆ
ಸಾಲಾಗಿ ಕುಳಿತಿರುವ
ಜೀವ - ಚಿತ್ರಗಳ
ಬಿಡಿಸಿದವರಾರು ?

**ಬಿ. ಶ್ರೀನಿವಾಸ**
ಶಿರಸ್ತೇದಾರ್, ಜಿಲ್ಲಾ ನ್ಯಾಯಾಲಯ
ಹಾವೇರಿ - ೫೮೧ ೧೧೦



# ಎಸ್. ಸೀತಾರಾಮು



ನಿವೃತ್ತ ಹಿರಿಯ ಬ್ಯಾಂಕ್ ಅಧಿಕಾರಿಯಾದ ಶ್ರೀ ಸೀತಾರಾಮು ಅವರು ತಮ್ಮ ಸೇವಾವಧಿಯಲ್ಲೇ ಇದ್ದ ಕಲಾಸಕ್ತಿಯನ್ನು ವೃದ್ಧಿಸಿಕೊಂಡು ಈಗ ಪೂರ್ಣಾವಧಿ ಚಿತ್ರಕಲಾಕಾರರಾಗಿ ಕೊಲಾಜ್ ಮತ್ತು ಕಂಪ್ಯೂಟರ್ ಪೇಂಟಿಗ್‌ನಲ್ಲಿ ವಿಶೇಷ ಪರಿಣತಿಯನ್ನು ಪಡೆದಿದ್ದಾರೆ.

ಬಣ್ಣಗಳ ಬೆಡಗು ಅವರನ್ನು ಕೊಲಾಜ್‌ನತ್ತ ಆಕರ್ಷಿಸಿತು. ಈ ಪ್ರಕಾರವನ್ನ ಅವರು ತಮ್ಮ 'ಬ್ಲಾಸಮ್ಸ್' ಚಿತ್ರಮಾಲಿಕೆಯಲ್ಲಿ ಸಮರ್ಥವಾಗಿ ಉಪಯೋಗಿಸಿದ್ದಾರೆ. ಅವರ ಈ ಪ್ರತಿಯೊಂದು ಕೊಲಾಜೂ - ಮನೆಯ ಮೇಲೆ ಹಬ್ಬಿರುವ ಬೋಗಾನ್‌ವಿಲ್ಲಾ ಬಳ್ಳಿ, ಮನೆಯ ಮುಂದಿನ ಹಳದಿ ಹೂಗಳು, ವಿವಿಧ ಬಣ್ಣದ ಹೂ ಹಾಸಿಕೆಗಳಿಂದ ಕಂಗೊಳಿಸುತ್ತಿರುವ ಪುಷ್ಪೋದ್ಯಾನ, ಸಮುದ್ರ ತೀರದ ಪುಷ್ಪೋದ್ಯಾನ, ಮೈದುಂಬಿ ನಿಂತ ಚೆರ‍್ರಿ ಬ್ಲಾಸಂ ಮರ, ಎಲ್ಲವೂ ಕಣ್ಣಿಗೆ ಬಣ್ಣದ ಹಬ್ಬವನ್ನುಂಟುಮಾಡುತ್ತವೆ.



ಮಾರ್ಚ್ ೮, ೯, ೧೦ ಮತ್ತು ೧೧ರಂದು ಅವರ ಕಲಾಕೃತಿಗಳ ಪ್ರದರ್ಶನ ಬೆಂಗಳೂರಿನ ಚಿತ್ರಕಲಾಪರಿಷತ್ತಿನಲ್ಲಿ ಜರುಗಿತು. ಸೀತಾರಾಮು ಅವರು ವಿದೇಶಗಳಲ್ಲಿಯೂ ಪ್ರದರ್ಶನಗಳನ್ನು ಆಯೋಜಿಸಿದ್ದಾರೆ.








Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / JUNE 2012 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)